# ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ

## (ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಮಹಾಪ್ರಬಂಧ)




ಸಂಶೋಧಕರು

**ಅಶ್ವಿನಿ ಬಸಪ್ಪ. ಕರೀಕಟ್ಟಿ**

ಮಾರ್ಗದರ್ಶಕರು

**ಡಾ. ಸಿ. ಮಹದೇವ**

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.






ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583 276

೨೦೧೩

# ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ

## (ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

ಅಶ್ವಿನಿ ಬಸಪ್ಪ ಕರೀಕಟ್ಟಿ

ಮಾರ್ಗದರ್ಶಕರು

ಡಾ. ಸಿ. ಮಹದೇವ

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಅಶ್ವಿನಿ ಬಸಪ್ಪ ಕರೀಕಟ್ಟಿ.** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ (ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಸಿ. ಮಹದೇವ**
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ. ೫೮೩ ೨೭೬.

ಸ್ಥಳ : ಹಂಪಿ,ವಿದ್ಯಾರಣ್ಯ.
ದಿನಾಂಕ : 10-8-2016

# ಸಂಶೋಧಕರ ಘೋಷಣಾ ಪತ್ರ

ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ (ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ) ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ, ಪ್ರಾಧ್ಯಾಪಕರಾದ ಡಾ.ಸಿ.ಮಹದೇವ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

B. Karikatti.

(ಅಶ್ವಿನಿ ಬಸಪ್ಪ ಕರೀಕಟ್ಟಿ)
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ. ೫೮೩ ೨೭೬.

ಸ್ಥಳ : ಹಂಪಿ,ವಿದ್ಯಾರಣ್ಯ.
ದಿನಾಂಕ : 10-8-2016




ರಂಗನಾಥ ಸಂಪ್ರದಾಯವನ್ನು ಸೂಚಿಸುವ ಜಿಲ್ಲಾವಾರು ನಕ್ಷೆ






ಜಿಲ್ಲಾವಾರು ದೇವಾಲಯಗಳ ಸಂಖ್ಯೆಯನ್ನು ಸೂಚಿಸುವ ನಕ್ಷೆ

## ಸಂಕೇತ ಸೂಚಿ

| | | |
|---|---|---|
| ಎ.ಕ. | : | ಎಪಿಗ್ರಾಫಿಯಾ ಕರ್ನಾಟಿಕ |
| ಎ.ಇ. | : | ಎಪಿಗ್ರಾಫಿಯಾ ಇಂಡಿಕಾ |
| ಇ.ಆ. | : | ಇಂಡಿಯನ್ ಆಂಟಿಕ್ವರಿ |
| **MAR** | : | Mysore Archaeological Report |
| **SII** | : | South Indian Inscriptions |
| **EC** | : | Epigraphia Carnatica |
| ಕ.ವಿ.ಶಾ.ಸಂ | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |

ಪರಿವಿಡಿ

# ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ
## (ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ)



* * *

## ಅಧ್ಯಾಯ-ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನ

ವಿಶಾಲ ಅರ್ಥದಲ್ಲಿ ಚರಿತ್ರೆ ಅಖಂಡವಾದುದು. ಇದು ಇಡೀ ಮಾನವ ಜನಾಂಗದ ಕಥೆ. ಮಾನವನು ಭೂಮಿಯ ಮೇಲೆ ಕಾಣಿಸಿಕೊಂಡ ಬಳಿಕ ವಿವಿಧ ಶಿಲಾಯುಗಗಳನ್ನು ದಾಟಿ ಸಮುದಾಯ, ಗುಂಪುಜೀವನ, ಬುಡಕಟ್ಟು ಹಾಗೂ ನಾಗರಿಕತೆಯೆಡೆಗೆ ಸಾಗಿ ತನ್ನ ಸಾಮಾಜಿಕ ಜೀವನ ಮತ್ತು ಸಂಸ್ಕೃತಿಯನ್ನು ರೂಪಿಸಿಕೊಂಡಿದ್ದಾನೆ. ಹೀಗೆ ಆತನ ಬದುಕಿನುದ್ದಕ್ಕೂ ಉಳಿದುಬಂದ ಪ್ರಾಚ್ಯಾವಶೇಷಗಳು ಅವನ ಕಾಲದ ಚರಿತ್ರೆ ಹಾಗೂ ಸಂಸ್ಕೃತಿಯನ್ನು ಕಟ್ಟುವ ಬಹುಮುಖ್ಯ ಆಕರ ಸಂಪತ್ತಾಗಿರುತ್ತವೆ. ಈ ಎಲ್ಲ ಸಂದರ್ಭಗಳಲ್ಲಿ ತನ್ನ ಬದುಕನ್ನು ಸಾಗಿಸಲು ರೂಪಿಸಿಕೊಂಡ ಎಲ್ಲ ಕ್ಷೇತ್ರಗಳಲ್ಲಿಯೂ ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಅಳವಡಿಸಿಕೊಂಡು ಅದಕ್ಕೆ ಅನುಗುಣವಾಗಿ ಬದುಕಿನ ಚಟುವಟಿಕೆಗಳನ್ನು ತನ್ನ ಸಂಸ್ಕೃತಿಯ ಭಾಗವಾಗಿ ಅಳವಡಿಸಿಕೊಳ್ಳುತ್ತಾ ಬಂದಿದ್ದಾನೆ.

ಇಂಥವುಗಳಲ್ಲಿ ದೈವಾರಾಧನೆಯೂ ಒಂದಾಗಿದೆ. ದೈವಾರಾಧನೆಯು ಜಗತ್ತಿನ ಅತ್ಯಂತ ಪ್ರಾಚೀನ ಆರಾಧನಾ ಪದ್ಧತಿಗಳಲ್ಲಿ ಒಂದು. ಪ್ರಪಂಚದಲ್ಲಿ ದೈವದ ಕಲ್ಪನೆ, ಹುಟ್ಟು, ಬೆಳವಣಿಗೆಯು ಮಾನವನಷ್ಟೇ ಪ್ರಾಚೀನವಾದುದು. ಹೀಗಾಗಿ ದೇವರು ಮತ್ತು ಮನುಷ್ಯರನ್ನು ಪ್ರತ್ಯೇಕಿಸಿ ನೋಡುವುದು ಅಸಾಧ್ಯದ ಮಾತು. ಮಾನವನು ಒಂದು ಕಡೆ ನೆಲೆ ನಿಂತು ತನ್ನ ದೈನಂದಿನ ಆಗುಹೋಗುಗಳಿಗೆ ಮತ್ತು ತನ್ನ ಬದುಕಿಗೆ ಅಗತ್ಯವಾದ ವಸ್ತುಗಳನ್ನು ಪ್ರಕೃತಿ ಕೊಡುತ್ತದೆ ಎಂದು ನಂಬಿದ್ದ. ಜೊತೆಗೆ ತನ್ನ ಸುತ್ತಲಿನ ಪ್ರಕೃತಿಯಲ್ಲಿ ದಿವ್ಯವಾದ ಶಕ್ತಿಯನ್ನು ಕಂಡುಕೊಂಡನು. ಇಂತಹ ಪ್ರಕೃತಿಯ ಅಗೋಚರ ಶಕ್ತಿಗಳ ಭಯದಿಂದ ಪಾರಾಗಲು ತನಗೆ ಆಧಾರವಾದ ಈ ನಿಸರ್ಗವನ್ನು ಅದರ ಬಹುಮುಖಗಳಲ್ಲಿ ಆರಾಧಿಸುತ್ತಾ ಬಂದು ವಿಶಿಷ್ಟವಾದ ಜೀವನ ಪದ್ಧತಿಯನ್ನು ರೂಢಿಸಿಕೊಂಡನು. ಅಂತಹ ಪ್ರಕೃತಿಯು ಕೋಪದಿಂದ ಮುನಿಸಿಕೊಂಡಾಗ ಅದನ್ನು ಸಂತೈಸಿಸಲು ಹಲವು ನಂಬಿಕೆಗಳನ್ನು ಸೃಷ್ಟಿಸಿಕೊಂಡನು. ಹೀಗಾಗಿ ಅವುಗಳಿಗೆ ಸಂಬಂಧಿಸಿದಂತೆ ಹಲವಾರು ಆಚರಣೆ, ಸಂಪ್ರದಾಯಗಳು

ಹುಟ್ಟಿ ಬೆಳೆದು ಬಂದಿರುವುದು ಕಾಣುತ್ತದೆ. ಮಾನವನು ತಾನು ಜಯಿಸಬೇಕಾಗಿದೆ ಎಂದುಕೊಂಡು ನಿಸರ್ಗದ ಶಕ್ತಿಗಳನ್ನು ಮಣಿಸಿಕೊಳ್ಳಲು ಹಾಗೂ ಒಲಿಸಿಕೊಳ್ಳಲು ಮುಂದಾದನು. ಹೀಗಾಗಿ ಅವನ ಆರಂಭಿಕ ಹಂತದಲ್ಲಿ ಮಾಡಿದ ತರ್ಕ ಏನೇನು ದಾರಿಗಳನ್ನು ಸೂಚಿಸಿತೋ ಅವೆಲ್ಲವು ಆಚರಣೆಗಳಾಗಿ ರೂಪಗೊಂಡವು. ಇಂತಹ ಆಚರಣೆ ಮತ್ತು ನಂಬಿಕೆಯ ಮೂಲಕವೇ ದೈವಗಳ ಬಗೆಗಿನ ಪರಿಕಲ್ಪನೆ ಬೆಳೆದು ಬಂದಿತು. ಪ್ರಕೃತಿಯಲ್ಲಿ ನಡೆಯುವ ಎಲ್ಲ ಘಟನೆಗಳಿಗೆ ಯಾವುದೋ ಒಂದು ಶಕ್ತಿ ಕಾರಣವಿರಬೇಕೆಂದು ನಂಬಿದ್ದ ಮನುಷ್ಯ, ಆ ಶಕ್ತಿಯನ್ನೇ ದೈವವೆಂದು ತಿಳಿದು ಪೂಜಿಸುತ್ತಾ, ಆರಾಧಿಸುತ್ತಾ, ಪ್ರತಿಮೆ ರೂಪ ನೀಡಿದನು. ಜೊತೆಗೆ ಅವುಗಳನ್ನು ಪೂಜಿಸುವ ವಿಧಿ ವಿಧಾನಗಳನ್ನು ಅನುಭವದ ಆಧಾರದ ಮೇಲೆ ಸೃಷ್ಟಿಸಿಕೊಂಡನು. ಹೀಗೆ ವ್ಯಕ್ತಿಯಿಂದ ವ್ಯಕ್ತಿಗೆ ಸಮುದಾಯದಿಂದ ಸಮುದಾಯಕ್ಕೆ ದೈವಗಳ ಗ್ರಹಿಕೆಯಲ್ಲಿ ಭಿನ್ನತೆ ಕಾಣಿಸಿದ್ದರಿಂದ ಹಲವು ಹೆಸರಿನ ದೈವಗಳು ಹುಟ್ಟಲು ಕಾರಣವಾಗಿವೆ. ಹೀಗೆ ಹುಟ್ಟಿಕೊಂಡ ದೈವಗಳು ಪ್ರಸ್ತುತದಲ್ಲಿ ಅನೇಕ ರೂಪಾಂತರಗಳನ್ನು ಹೊಂದಿರುವುದು ಕಾಣುತ್ತಿದ್ದೇವೆ.

ಹೀಗೆ ಮಾನವನು ಕಲ್ಪಿಸಿಕೊಂಡ ದೈವದ ಆರಾಧನೆಯ ವಿಧಾನಗಳಿಗೆ ಅನೇಕ ಮುಖಗಳಿವೆ. ಆರಾಧನೆಯು ಮಾನವನ ಬದುಕಿನ ಮುಖ್ಯವಾದ ಒಂದು ಭಾಗವನ್ನು ಆವರಿಸಿಕೊಂಡಿವೆ. ಈ ಕಾರಣದಿಂದಲೇ ಜಗತ್ತಿನಲ್ಲಿ ವೈವಿಧ್ಯಪೂರ್ಣವಾದ ಆರಾಧನಾ ಸಂಪ್ರದಾಯಗಳು ಹುಟ್ಟಿ ಬಂದಿರುತ್ತವೆ. ಇಂತಹ ದೈವಗಳ ಆರಾಧನೆಯಲ್ಲಿ ಪ್ರಸ್ತುತ ರಂಗನಾಥನ ಆರಾಧನೆಯು ಒಂದು. ಈ ದೈವದ ಅಸ್ತಿತ್ವವನ್ನು ಅರಿತುಕೊಳ್ಳುವಲ್ಲಿ ಪುರಾಣ, ಐತಿಹ್ಯ, ಕಥೆ, ಕಾವ್ಯ, ನಂಬಿಕೆ, ಆಚರಣೆ, ಸಂಪ್ರದಾಯಗಳು ಮೂಲ ಆಕರಗಳಾಗಿವೆ. ಸಂಪ್ರದಾಯಕ್ಕೆ ಸಂವಾದಿಯಾಗಿ ರೂಢಿ, ಆಚರಣೆ, ಪಾರಂಪರಿಕ ನಂಬಿಕೆ ಎಂಬ ಪದಗಳು ಬಳಕೆಯಲ್ಲಿವೆ. ಒಂದು ಗುಂಪಿನ, ಒಂದು ಜನಾಂಗದ ಅಥವಾ ಒಂದು ದೇಶದ ಜನತೆ ಪರಂಪರಾನುಗತವಾಗಿ ತಲೆಮಾರಿನಿಂದ ತಲೆಮಾರುಗಳ ವರೆಗೆ ಸ್ವಯಂ ಪ್ರೇರಣೆಯಿಂದ ಆಚರಿಸುತ್ತ ಬರುವುದನ್ನು ಕಂಡಾಗ "ಸಂಪ್ರದಾಯ" ಪದದ ಅರ್ಥವ್ಯಾಪ್ತಿ ಇನ್ನಷ್ಟು ವಿಸ್ತಾರವಾಗುತ್ತದೆ. ಇವು ವೈಯಕ್ತಿಕ ಆಚರಣೆಯಾದರು, ಸಾಮೂಹಿಕವಾಗಿ ಅಂಗೀಕರಿಸಲ್ಪಟ್ಟ ಮೌಲ್ಯಗಳಾಗಿವೆ. ಇವು ಮನುಕುಲದ ಆರಂಭದಿಂದಲೂ ಮಾನವನು ಮಾಸಿಹೋಗದಂತೆ ಕಾಯ್ದುಕೊಂಡು ರೂಢಿಸಿಕೊಂಡ ಬಂದ ಸಂಪ್ರದಾಯವಾಗಿವೆ. ಹೀಗೆ ಮನುಷ್ಯ ತಾನು ನಡೆದುಕೊಂಡು ಬಂದ ವಿಶಿಷ್ಟ ಆಚರಣೆಗಳ ಬಗ್ಗೆ ಹೊಂದಿದ ಶ್ರದ್ಧೆ, ಉತ್ಸಾಹ, ನಂಬಿಕೆಗಳು ಸಂಪ್ರದಾಯದ ಸೃಷ್ಟಿಗೆ ಕಾರಣವಾದವು.

"ಒಂದು ಜನಾಂಗದ ಸಂಸ್ಕಾರವಿಶೇಷದ ಭದ್ರಬುನಾದಿಯ ಮೇಲೆ ರೂಪಿತಗೊಂಡು ಪರಂಪರಾನುಗತವಾಗಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಆ ಸಮಾಜದಲ್ಲಿ ಮುಂದುವರಿಯುವ ವಿಶಿಷ್ಟ ಉಪಾಸನೆ, ವಿಧಿ-ಪದ್ಧತಿಗಳೇ ಸಂಪ್ರದಾಯಗಳೆನಿಸುತ್ತವೆ. ಜನತೆಯ ಮನೋಭಾವ, ಅಭಿಪ್ರಾಯ, ರೂಢಿ, ವಾಡಿಕೆ, ಪದ್ಧತಿ ಇವುಗಳ ಒಟ್ಟು ಮೊತ್ತವೇ ಸಂಪ್ರದಾಯ.

ಸಂಪ್ರದಾಯವು ಜನಪದರು ದೀರ್ಘಕಾಲದಿಂದ ಎಲ್ಲರೂ ಅನುಸರಿಸುತ್ತ ಬಂದಿರುವ ಆಚರಣೆಯಾಗಿದೆ. ಸಂಪ್ರದಾಯವನ್ನು ಒಂದು ಕ್ರಿಯಾ ವಿನ್ಯಾಸ (pattern of action) ಎಂದು ಕರೆಯುವುದರಿಂದ, ಅದರ ಆಚರಣೆಯನ್ನು (ritual)ಕ್ರಿಯಾ ವಿಧಾನ(method of action) ಎಂದು ಕರೆಯಬಹುದು.

ಸಂಪ್ರದಾಯ ಮತ್ತು ಆಚರಣೆಗೆ ಮೂಲವಾಗಿರುವ ಅಂಶವೇ ನಂಬಿಕೆ. ಇದು ಇಲ್ಲದಿದ್ದರೆ ಇವೆರಡರ ಅಸ್ತಿತ್ವವು ಇರುವುದಿಲ್ಲ. ಮಾನವ ಜೀವನವನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಪೋಷಿಸುವಲ್ಲಿ, ನಾಗರಿಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯಗಳ ಆಚರಣೆಗಳಿಗೆ ವಿಶೇಷ ಮಹತ್ವವಿದೆ. ಅವು ಮನುಷ್ಯನ ಬದುಕಿನ ಅವಿಭಾಜ್ಯ ಅಂಗಗಳಾಗಿವೆ. ಸಂಪ್ರದಾಯಗಳೆ ನಮ್ಮ ಸಂಸ್ಕೃತಿಯ ಜೀವಾಳ. ಸಮಾಜವನ್ನು ನಿಯಂತ್ರಿಸುವ ಮತ್ತು ಅದನ್ನು ನಿಯಮಿತ ಮಾರ್ಗದಲ್ಲಿ ಕೊಂಡೊಯ್ಯುವ ಶಕ್ತಿ ಸಂಪ್ರದಾಯಕ್ಕಿದೆ. ಒಂದು ಮತದ ಅಥವಾ ದೇವರ ಪ್ರಚಾರಕ್ಕಾಗಿ, ಒಂದು ಧರ್ಮದ ಪ್ರಚಾರಕ್ಕಾಗಿ ಕೆಲವೇ ಕೆಲವು ವ್ಯಕ್ತಿಗಳ ನೇತೃತ್ವದಲ್ಲಿ ಹುಟ್ಟಿಕೊಂಡು ಸಮಾಜದ ಅನೇಕ ಜನರನ್ನು ಅವು ಆವರಿಸಿಕೊಂಡಿವೆ. ಇದು ಎಲ್ಲವನ್ನು ಒಳಗೊಂಡಿದ್ದು, ಪ್ರಾಚೀನ ಕಾಲದಿಂದಲೂ ಮೌಖಿಕವಾಗಿ ಪರಂಪರಾನುಗತವಾಗಿ ಚಲನಶೀಲವಾಗಿದೆ. ಒಟ್ಟಾರೆಯಾಗಿ ಸಂಪ್ರದಾಯವು ಸಮಾಜದಿಂದ ಅಂಗೀಕರಿಸಲ್ಪಟ್ಟ ವಿಶಿಷ್ಟ ಆಚರಣೆ, ಮನೋಭಾವ, ಅಭಿಪ್ರಾಯ, ರೂಢಿ, ಪದ್ಧತಿಗಳ ಒಟ್ಟು ಮೊತ್ತವಾಗಿದೆ.

ಪ್ರಸ್ತುತ ಕರ್ನಾಟಕದಲ್ಲಿ ವಿವಿಧ ಚಾರಿತ್ರಿಕ ಕಾಲಘಟ್ಟಗಳ ಸಂದರ್ಭದಲ್ಲಿ ಬೇರೆ ಬೇರೆ ಪಂಥಗಳು, ಸಂಪ್ರದಾಯಗಳು ಹುಟ್ಟಿ ನಾಡಿನ ಉದ್ದಗಲಕ್ಕೂ ವ್ಯಾಪಿಸಿರುವುದನ್ನು ಕಾಣುತ್ತೇವೆ. ಈ ಸಂಪ್ರದಾಯಗಳು ಪ್ರದೇಶದಿಂದ ಪ್ರದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಭೌಗೋಳಿಕ, ಮತೀಯ ಮತ್ತು ಸಾಂಸ್ಕೃತಿಕ ಕಾರಣಗಳಿಂದ ಅವುಗಳಲ್ಲಿ ಭಿನ್ನತೆಯನ್ನು ಕಾಣಬಹುದು.

ಪ್ರಸ್ತುತ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯವೆಂಬ ಪರಂಪರೆಯು ಶಿಷ್ಟ ಮತ್ತು ಪರಿಶಿಷ್ಟ(ಜನಪದ) ನೆಲೆಯಲ್ಲಿ ಅಸ್ತಿತ್ವವನ್ನು ಪಡೆದು ನೆಲೆಗೊಂಡಿದ್ದು, ತನ್ನದೇ ಆದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿರುವುದು ಗಮನಾರ್ಹ. ಇಂಥ ಸಂಪ್ರದಾಯದ ಅಸ್ತಿತ್ವವನ್ನು ಕಟ್ಟಿಕೊಡುವುದೇ ಈ ಮಹಾಪ್ರಬಂಧದ ಉದ್ದೇಶವಾಗಿದೆ. ಅಂದರೆ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ, ಅದರ ಅಸ್ತಿತ್ವ, ಇದಕ್ಕೆ ಆಧಾರವಾಗಿರುವ ಮತ್ತು ಪ್ರೇರಣೆಯನ್ನೊದಗಿಸುವ ಪುರಾತತ್ವ, ಸಾಹಿತ್ಯಿಕ ಮತ್ತು ಮೌಖಿಕ ಆಕರಗಳಾದ ಪುರಾಣ, ಐತಿಹ್ಯ, ಕಥೆ, ಕಾವ್ಯ, ನಂಬಿಕೆ, ಆಚರಣೆಗಳನ್ನು ಬಳಸಿಕೊಂಡು ಒಟ್ಟು ಸಂಪ್ರದಾಯವನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಸಮಗ್ರವಾಗಿ ಕಟ್ಟಿಕೊಡುವುದು ಪ್ರಸ್ತುತ ಮಹಾಪ್ರಬಂಧದ ಪ್ರಧಾನ ಆಶಯವಾಗಿದೆ.

**ಉದ್ದೇಶ :**

ಪ್ರಸ್ತುತ ಅಧ್ಯಯನದ ಉದ್ದೇಶ ಪ್ರಧಾನವಾಗಿ ನಿರ್ಲಕ್ಷಿತಕ್ಕೊಳಪಟ್ಟ ರಂಗನಾಥ ಸಂಪ್ರದಾಯವನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕವಾಗಿ ಅಧ್ಯಯನ ನಡೆಸುವುದು ಹಾಗೂ ಆ ಮೂಲಕ ಬೆಳಕಿಗೆ ತರುವ ಉದ್ದೇಶವನ್ನು ಹೊಂದಲಾಗಿದೆ. ಕರ್ನಾಟಕದಾದ್ಯಂತ ಅಲ್ಲಲ್ಲಿ ಚದುರಿದಂತಿರುವ ರಂಗನಾಥ ಸಂಪ್ರದಾಯದ ಆರಾಧನ ಕೇಂದ್ರಗಳು ಅಧ್ಯಯನ ಯೋಗ್ಯವಾಗಿವೆ. ಇವು ಶಿಷ್ಟ ಮತ್ತು ಪರಿಶಿಷ್ಟ(ಜನಪದ) ನೆಲೆಯಲ್ಲಿವೆ. ಆದರೆ ಇದುವರೆಗೂ ಅವುಗಳನ್ನು ಹಾಗೂ ಈ ಒಟ್ಟು ಸಂಪ್ರದಾಯವನ್ನು ಕುರಿತು ಯಾವುದೇ ಸಮಗ್ರ ಅಧ್ಯಯನ ನಡೆದಿಲ್ಲ. ವಿಶೇಷವಾಗಿ ಕರ್ನಾಟಕದ ಜಿಲ್ಲೆಗಳಾದ ಹಾವೇರಿ, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ತುಮಕೂರು, ಕೊಪ್ಪಳ, ಬಳ್ಳಾರಿ, ರಾಯಚೂರು, ಬಾಗಲಕೋಟೆ, ಧಾರವಾಡ, ಗುಲ್ಬರ್ಗಾ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ, ಕೋಲಾರ, ರಾಮನಗರ, ಮಂಡ್ಯ, ಮೈಸೂರು ಚಾಮರಾಜನಗರ, ಕೊಡಗು ಮುಂತಾದ ೨೨ ಜಿಲ್ಲೆಗಳಲ್ಲಿ ಈ ಸಂಪ್ರದಾಯವು ಕಂಡುಬರುತ್ತದೆ. ಹೀಗೆ ಹರಡಿಕೊಂಡಿರುವ ರಂಗನಾಥನ ಆರಾಧನಾ ನೆಲೆಗಳು ಪಶುಪಾಲಕ ಸಮುದಾಯಗಳ ನಡುವೆ ನೆಲೆಗೊಂಡಿರುವುದು ಗಮನಾರ್ಹ. ಮೈಲಾರ, ಬೀರಪ್ಪ, ಮಂಟೇಸ್ವಾಮಿ, ಮಲೆಮಾದೇಶ್ವರ, ಜುಂಜಪ್ಪ ಇತರ ದೈವಗಳಂತೆ ರಂಗನಾಥನ ಆರಾಧನೆಯು ವ್ಯಾಪಕವಾಗಿ ನಡೆದುಕೊಂಡು ಬಂದಿದ್ದು, ತನ್ನದೇ ಆದ ಅಸ್ತಿತ್ವವನ್ನು ಪಡೆದುಕೊಂಡಿದೆ. ಬೆಟ್ಟ, ಗುಡ್ಡ ಅಥವಾ ಮಣ್ಣಿನ ದಿಬ್ಬಗಳ ಮೇಲೆ, ಗವಿ, ಕಲ್ಲಾಸರೆ, ನದಿ, ಹಳ್ಳ–ಕೊಳ್ಳ, ಬಯಲಿನಲ್ಲಿ, ದುರ್ಗಮವಾದ ಪರಿಸರದಲ್ಲಿ ಹುಟ್ಟು ಬಂಡೆ, ಉದ್ಭವ ಕಲ್ಲು ಹಾಗೂ ಮೂರ್ತಿಶಿಲ್ಪಗಳ ರೂಪದಲ್ಲಿರುವ ರಂಗನಾಥ ಬೇಟೆಗಾರರ, ಪಶುಪಾಲಕರ ಮತ್ತು ಕೃಷಿಕರ ಆರಾಧ್ಯ ದೈವವಾಗಿದೆ. ಹೀಗೆ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿ ತನ್ನದೇ ಪ್ರಭಾವ ಬೀರಿರುವ ರಂಗನಾಥನ ಆರಾಧನೆಯ ಸಂಪ್ರದಾಯವನ್ನು ಕುರಿತು ಸಮಗ್ರ ಅಧ್ಯಯನದ ಅಗತ್ಯ ಎದ್ದು ಕಾಣುತ್ತಿದೆ. ಅಂಥ ಕೊರತೆಯನ್ನು ತಕ್ಕ ಮಟ್ಟಿಗೆ ಪರಿಹರಿಸುವ ಉದ್ದೇಶವಿಟ್ಟುಕೊಂಡು ಪ್ರಸ್ತುತ ಅಧ್ಯಯನದಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ 'ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ (ಚಾರಿತ್ರಿಕ ಮತ್ತು ಸಾಂಸ್ಕೃತಿಕ) ಅಧ್ಯಯನ' ಎಂಬ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಕರ್ನಾಟಕದಲ್ಲಿ ರಂಗನಾಥ ಆರಾಧನೆಯ ಭೌಗೋಳಿಕ ಪರಿಸರ, ಆರಾಧನೆಯ ಮೂಲ, ಬೆಳವಣಿಗೆ, ಆರಾಧನೆಯಲ್ಲಿ ಪಾಲ್ಗೊಳ್ಳುವ ಜನ ಸಮುದಾಯಗಳು, ಅವುಗಳು ಹೊಂದಿರುವ ನಂಬಿಕೆ, ಐತಿಹ್ಯ ಮತ್ತು ಆಚರಣೆ ಮುಂತಾದ ವಿಷಯಗಳನ್ನು ಕುರಿತು ವಿಸ್ತೃತವಾಗಿ ಮತ್ತು ಆಳವಾಗಿ ಪರಿಶೀಲಿಸುವ ಪ್ರಯತ್ನ ಇಲ್ಲಿಯದು. ಜೊತೆಗೆ ರಂಗನಾಥನ ಆರಾಧನೆಯ ಐತಿಹಾಸಿಕ ಬೆಳವಣಿಗೆಯನ್ನು ಗುರುತಿಸುವುದರ ಜೊತೆಗೆ ಎಲ್ಲ ರಂಗನಾಥಸ್ವಾಮಿ ದೇವಾಲಯಗಳ ಕಲೆ, ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳನ್ನು ವಿವರಿಸುವ ಹಾಗೂ ಸಾಂಸ್ಕೃತಿಕವಾಗಿ ಆರಾಧನೆಯ

ಆಶಯಗಳನ್ನು ತಿಳಿಯುವುದಾಗಿದೆ. ಪ್ರಸ್ತುತ ಅಧ್ಯಯನದ ಮೂಲಕ ನಿರ್ಲಕ್ಷಿತ ಆರಾಧನೆಯೊಂದನ್ನು ಗುರುತಿಸಿ ಅದು ಜನಸಮುದಾಯಗಳೊಂದಿಗೆ ಬೆಸೆದಿರುವ ಸ್ವರೂಪವನ್ನು ಗ್ರಹಿಸುವ ಪ್ರಯತ್ನವನ್ನು ಮಾಡಲಾಗಿದೆ. ಸಾಮಾನ್ಯವಾಗಿ ಪ್ರಾಗೈತಿಹಾಸಿಕ ಕಾಲದ ನೆಲೆಗಳಿರುವ ಪರಿಸರದಲ್ಲಿಯೇ ರಂಗನಾಥಸ್ವಾಮಿ ದೇವಾಲಯಗಳು ಕಂಡುಬರುತ್ತಿದ್ದು, ಆ ನೆಲೆಗಳನ್ನು ಸಹ ಗಮನಿಸಲಾಗಿದೆ. ಜೊತೆಗೆ ಅವುಗಳೆರಡರ ನಡುವಿನ ಸಂಬಂಧವನ್ನು ಕಂಡುಕೊಳ್ಳಲಾಗಿದೆ. ಈ ಮೂಲಕ ಇಂದಿಗೂ ಜೀವಂತವಾಗಿರುವ ರಂಗನಾಥನ ಆರಾಧನೆಯ ಪ್ರಾಚೀನತೆಯನ್ನು ಗುರುತಿಸುವ ಪ್ರಯತ್ನ ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಜೊತೆಗೆ ರಂಗನಾಥ ನೆಲೆಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಗುರುತಿಸುವ ಪ್ರಯತ್ನ ಮಾಡುವುದರ ಜೊತೆಗೆ ಈ ಸಂಪ್ರದಾಯದ ಸಮಗ್ರ ಅಸ್ತಿತ್ವವನ್ನು ಕಟ್ಟಿಕೊಡುವ ಉದ್ದೇಶವನ್ನು ಮಹಾಪ್ರಬಂಧವು ಹೊಂದಿದೆ.

ಕರ್ನಾಟಕದಲ್ಲಿ ರಂಗನಾಥಸ್ವಾಮಿಗೆ ಸಂಬಂಧಿಸಿದ ಮಾಹಿತಿಗಳನ್ನೆಲ್ಲ ಬಳಸಿಕೊಂಡು ಅಧ್ಯಯನ ಪೂರೈಸುವ ಮುಖ್ಯ ಉದ್ದೇಶವನ್ನಿಟ್ಟುಕೊಂಡಿರುವುದರಿಂದ 'ಸಂಪ್ರದಾಯ' ಎಂಬ ಪದವನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಸಂಪ್ರದಾಯ ಎನ್ನುವ ಪದವು ಸಾಮಾನ್ಯವಾಗಿ ಪುರಾತತ್ವ, ಇತಿಹಾಸ, ಮೌಖಿಕ ಆಕರಗಳು, ವಾಸ್ತು, ಮೂರ್ತಿಶಿಲ್ಪ, ನಂಬಿಕೆ ಮತ್ತು ಆಚರಣೆಗಳು ಇತರ ನೆಲೆಗಳ ವಿವರಗಳನ್ನೆಲ್ಲ ಒಳಗೊಂಡ ಸಮಗ್ರ ಸ್ವರೂಪದ ಅಧ್ಯಯನವನ್ನು ಒಳಗೊಂಡಿದೆ. ಇಂಥ ಪ್ರಧಾನ ಉದ್ದೇಶದಿಂದ ಕೂಡಿದ ಪ್ರಸ್ತುತ ಅಧ್ಯಯನವು ಈ ಮಹಾಪ್ರಬಂಧದ ರೂಪದಲ್ಲಿದೆ.

**ವ್ಯಾಪ್ತಿ :**

ಯಾವುದೇ ಒಂದು ಸಂಶೋಧನೆಗೆ ನಿರ್ದಿಷ್ಟ ಚೌಕಟ್ಟು ಬಹುಮುಖ್ಯ. ಇದು ನಿರ್ದಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆಯ ಯಶಸ್ಸಿಗೆ ಅತ್ಯಗತ್ಯ. ಈ ವ್ಯಾಪ್ತಿಯ ಕ್ರಮಬದ್ಧತೆಯಿಂದಾಗಿ ನಿಖರತೆಗೆ ಸಮೀಪವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನವನ್ನು ಸಹ ಒಂದು ಚೌಕಟ್ಟಿಗೆ ಒಳಪಡಿಸಲಾಗಿದೆ. ಶೀರ್ಷಿಕೆಯೇ ಸೂಚಿಸುವಂತೆ ಅಧ್ಯಯನಕ್ಕೆ ಕರ್ನಾಟಕದ ಭೌಗೋಳಿಕ ಪ್ರದೇಶವು ಒಳಪಟ್ಟಿದೆ. ಮುಖ್ಯವಾಗಿ ಅಧ್ಯಯನದ ವ್ಯಾಪ್ತಿಯನ್ನು ರಂಗನಾಥಸ್ವಾಮಿ ಆರಾಧನಾ ನೆಲೆಗಳ ಹಿನ್ನಲೆಯಲ್ಲಿ ನಿರ್ದಿಷ್ಟ ಪಡಿಸಿಕೊಳ್ಳಲಾಗಿದೆ. ಅಂದರೆ ಕರ್ನಾಟಕದಾದ್ಯಂತ ಕಂಡುಬರುವ ರಂಗನಾಥಸ್ವಾಮಿ ದೇವಾಲಯಗಳನ್ನು ಹಾಗೂ ಅವು ನೆಲೆಗೊಂಡಿರುವ ಪರಿಸರವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಸ್ತುತ ಕರ್ನಾಟಕದ ೨೨ ಜಿಲ್ಲೆಗಳಲ್ಲಿ ಹರಡಿಕೊಂಡಿರುವ ೨೭೪ ಗ್ರಾಮಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ರಂಗನಾಥಸ್ವಾಮಿಯ ಆರಾಧನಾ ನೆಲೆಗಳು ಬೆಟ್ಟಗುಡ್ಡಗಳ ಪರಿಸರದಲ್ಲಿ ವಿಶೇಷವಾಗಿ ಕಂಡುಬರುವುದರಿಂದ, ಆ ಪರಿಸರವನ್ನು ಹಾಗೂ ಆ ಪರಿಸರದೊಂದಿಗೆ ಸಂಬಂಧ ಹೊಂದಿರುವ ಬೇಟೆ, ಪಶುಪಾಲಕ ಮತ್ತು ಕೃಷಿ ಸಮುದಾಯಗಳು, ಅವುಗಳ ನಂಬಿಕೆ, ಐತಿಹ್ಯ ಮತ್ತು ಆಚರಣೆಗಳನ್ನು ಕೂಡ ಇಲ್ಲಿ ಪರಿಶೀಲಿಸಲಾಗಿದೆ. ಈ ಆರಾಧನಾ ನೆಲೆಗಳು ಪ್ರಾಚೀನ ಕಾಲದವು. ಆದರೆ ಇಲ್ಲಿ ನಿರ್ಮಾಣಗೊಂಡಿರುವ ಹೆಚ್ಚಿನ

ದೇವಾಲಯಗಳು ಸಾಮಾನ್ಯವಾಗಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿವೆ. ಈ ಹಿನ್ನಲೆಯಲ್ಲಿ ಪ್ರಾಚೀನ ಕಾಲದಿಂದ ಆಧುನಿಕ ಕಾಲಘಟ್ಟದವರೆಗೆ ರಂಗನಾಥ ಸಂಪ್ರದಾಯವನ್ನು ಕುರಿತಂತೆ ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಕೆಲವೊಮ್ಮೆ ಕರ್ನಾಟಕದ ಭೌಗೋಳಿಕ ಮತ್ತು ಗೊತ್ತುಪಡಿಸಿಕೊಂಡ ವ್ಯಾಪ್ತಿಯ ಆಚೆಗೂ ಕೆಲವು ಮಾಹಿತಿಗಳನ್ನು ಬೇರೆ ಪ್ರದೇಶದಿಂದಲು ಪಡೆಯಲಾಗಿದೆ.

**ಅಧ್ಯಯನದ ವಿಧಾನ :**

ಸಂಶೋಧನೆಗೆ ಅಧ್ಯಯನ ಕ್ರಮವು ಅತಿಮುಖ್ಯ. ಅಧ್ಯಯನವು ಯಾವುದೇ ಅಡೆತಡೆಗಳಿಲ್ಲದೆ ವ್ಯವಸ್ಥಿತವಾಗಿ ಮುನ್ನಡೆಯಲು ಕ್ರಮಬದ್ಧವಾದ ಅಧ್ಯಯನ ವಿಧಾನ ಸಹಾಯಕವಾಗುತ್ತದೆ. ಒಂದರ್ಥದಲ್ಲಿ ಹೇಳುವುದಾದರೆ ಸಂಶೋಧನಾ ಪ್ರಬಂಧಕ್ಕೆ ಪ್ರಥಮ ಹಾಗೂ ಅಂತಿಮ ರೂಪವನ್ನು ಈ ಅಧ್ಯಯನ ಕ್ರಮವೇ ನೀಡುತ್ತದೆ ಎಂದು ಹೇಳಬಹುದು. ಪ್ರಸ್ತುತ ಅಧ್ಯಯನವು 'ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ' (ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ) ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಮುಂದಿನ ಅಧ್ಯಯನ ಕ್ರಮವನ್ನು ಅನುಸರಿಸಲಾಗಿದೆ.

ಮೊದಲಿಗೆ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಗ್ರಂಥಸೂಚಿಯನ್ನು ತಯಾರಿಸಿ ಅಕಾರಾದಿಯಾಗಿ ಜೋಡಿಸಿಕೊಳ್ಳಲಾಯಿತು. ಅಧ್ಯಯನದ ವ್ಯಾಪ್ತಿಗೆ ಒಳಪಡುವ ಬಹುತೇಕ ಎಲ್ಲ ಗ್ರಂಥಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಕಟಗೊಂಡಿರುವ ಇಂಥ ಸಾಮಗ್ರಿಗಳು ಅಧ್ಯಯನದ ರೂಪರೇಷೆಗಳನ್ನು ಗೊತ್ತುಪಡಿಸಿಕೊಳ್ಳುವಲ್ಲಿ ಹೆಚ್ಚು ಸಹಾಯಕವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಕ್ಷೇತ್ರಕಾರ್ಯವೇ ಆಧಾರ. ಮುಖ್ಯವಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿ ಅಧ್ಯಯನ ಮಾಡಲಾಗಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿ, ಅವಶೇಷಗಳೇ ಪ್ರಾಥಮಿಕ ಅಂದರೆ ಪೂರಕ ಸಾಮಗ್ರಿಯಾಗಿದ್ದು, ವ್ಯವಸ್ಥಿತವಾದ ಪೂರ್ವ ಯೋಜಿತ ವಿಧಾನವನ್ನು ಅನುಸರಿಸಿ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ. ಇಲ್ಲಿ ಅನುಸರಿಸಿದ ವಿಧಾನವೆಂದರೆ, ಮೊಟ್ಟ ಮೊದಲಿಗೆ ಗೆಜೆಟಿಯರ್, ಜಿಲ್ಲಾ–ತಾಲೂಕು ಮಾರ್ಗಸೂಚಿ, ಮಾಹಿತಿ ತಂತ್ರಜ್ಞಾನ ಜಾಲತಾಣ, ಆಯಾ ತಾಲೂಕು ಜಿಲ್ಲಾ ಕಛೇರಿ (ಮುಜರಾಯಿ ಇಲಾಖೆ) ರಾಜ್ಯ ಮತ್ತು ಕೇಂದ್ರ ಪುರಾತತ್ವ ಇಲಾಖೆಗಳ ಸಹಾಯದಿಂದ ದೇವಾಲಯ ಇರುವ ಸ್ಥಳಗಳ ಬಗ್ಗೆ ಮಾಹಿತಿ ಪಡೆದು ಪಟ್ಟಿ ಮಾಡಿಕೊಂಡು ನಂತರ ಪೂರಕವಾದ ಪ್ರಶ್ನಾವಳಿಯ ಪಟ್ಟಿಯನ್ನು ಸಿದ್ಧಪಡಿಸಿಕೊಳ್ಳಲಾಯಿತು. ಪ್ರಶ್ನಾವಳಿ ಜೊತೆಗೆ ಸಂದರ್ಶನ ವಿಧಾನ ಅಳವಡಿಸಿಕೊಳ್ಳಲಾಗಿದೆ. ನಂತರದಲ್ಲಿ ಕ್ಷೇತ್ರಕಾರ್ಯ ಮಾಡಬೇಕಾದ ಸ್ಥಳಗಳನ್ನು ಖಚಿತಪಡಿಸಿಕೊಳ್ಳಲಾಯಿತು. ದೇವಾಲಯದ ಹೆಸರು, ತಾಲೂಕು, ಜಿಲ್ಲೆ, ಸ್ಥಳನಿರ್ದೇಶನ, ದಿಕ್ಕು, ಕಾಲಮಾನ, ರಾಜವಂಶ, ಶೈಲಿ, ಸ್ಮಾರಕದ ವಿವರ, ಮೂರ್ತಿಶಿಲ್ಪ, ಶಾಸನ, ಶಾಸನೋಕ್ತ ವಿಷಯ ಇತ್ಯಾದಿ ವಿವರಗಳನ್ನೊಳಗೊಂಡ ವಿವರ ಪಟ್ಟಿಯನ್ನು ಸಿದ್ಧಪಡಿಸಿಕೊಂಡು ದೇವಾಲಯವಿರುವ ಸ್ಥಳಗಳಿಗೆ ಭೇಟಿಕೊಟ್ಟು ವಿವರಣಾತ್ಮಕ ಮಾಹಿತಿಯನ್ನು ದಾಖಲಿಸಿಕೊಳ್ಳುವುದರ ಜೊತೆಗೆ

ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ. ಈ ಅಧ್ಯಯನಕ್ಕೆ ರಂಗನಾಥಸ್ವಾಮಿ ದೇವಾಲಯಗಳೇ ಕೇಂದ್ರವಾಗಿದ್ದು, ಅವುಗಳ ಸಂಪೂರ್ಣ ವಿವರವನ್ನು ಆಯಾ ಕ್ಷೇತ್ರಗಳಿಗೆ ಭೇಟಿನೀಡಿ ಪಡೆಯಲಾಗಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡುವ ೨೨ ಜಿಲ್ಲೆಗಳಲ್ಲಿನ ಆಯಾ ಗ್ರಾಮಗಳಿಗೆ ನೇರವಾಗಿ ಭೇಟಿಮಾಡಿ ರಂಗನಾಥ ಸಂಪ್ರದಾಯವನ್ನು ಅನುಸರಿಸುವ ಜನರ ಜೀವನಕ್ರಮ, ಆರಾಧಿಸುವ ರೀತಿ, ಜನಸಮುದಾಯದ ಪಾಲ್ಗೊಳ್ಳುವಿಕೆ, ನಂಬಿಕೆ, ಮೌಖಿಕ ಆಕರಗಳಾದ ಐತಿಹ್ಯ, ಪುರಾಣ, ಕಥೆ, ಕಾವ್ಯ ಹಾಗೂ ವಾರ್ಷಿಕ ಆಚರಣೆಗಳನ್ನು ಸಂಗ್ರಹಿಸಿಕೊಂಡು ಅಲ್ಲಿ ದೊರೆತಿರುವ ಐತಿಹಾಸಿಕ ವಿಷಯ, ಅವಶೇಷಗಳನ್ನು ಅವಲೋಕಿಸಿ, ಸಂಗ್ರಹಿಸಿ, ದಾಖಲಿಸಿಕೊಂಡು ವಿಶ್ಲೇಷಿಸಲಾಗಿದೆ. ಈಗಾಗಲೇ ಆಗಿರುವ ಅಧ್ಯಯನಗಳನ್ನು ಪೂರಕ ಆಕರಗಳನ್ನಾಗಿ ಬಳಸಿಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದ್ದು, ಜೊತೆಗೆ ಈ ಸಂಪ್ರದಾಯದ ಬಗೆಗೆ ಅರಿತಿರುವಂತಹ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ಅನೇಕ ಸಂಗತಿಗಳನ್ನು ದಾಖಲಿಸಿಕೊಳ್ಳಲಾಯಿತು. ಇದರ ಜೊತೆಗೆ ವರ್ಷಪೂರ್ತಿ ನಡೆಯುವ ವಿಶೇಷ ಪೂಜೆ, ಆಚರಣೆ, ವಿಧಿ–ವಿಧಾನಗಳಲ್ಲಿ ನೇರವಾಗಿ ಭಾಗವಹಿಸಿ ಮಾಹಿತಿಯನ್ನು ಸಂಗ್ರಹಿಸಿ ಆಯಾ ವಿಷಯಕ್ಕನುಗುಣವಾಗಿ ವರ್ಗೀಕರಿಸಿ, ದಾಖಲಿಸಿ ವಿಶ್ಲೇಷಿಸಲಾಗಿದೆ.

ಪ್ರಸ್ತುತ ಅಧ್ಯಯನವು ಬಹುಶಿಸ್ತೀಯ ಅಧ್ಯಯನವಾಗಿದ್ದು, ಇತಿಹಾಸದ ಜೊತೆಗೆ ಜನಪದ, ಬುಡಕಟ್ಟು ಮುಂತಾದ ಶಾಸ್ತ್ರಗಳ ಜೊತೆಗೂ ನಿಕಟವಾದ ಸಂಬಂಧವನ್ನು ಹೊಂದಿದೆ. ಹೀಗಾಗಿ ಈ ಮೂರು ಶಾಸ್ತ್ರಗಳನ್ನು ಬಳಸಿಕೊಂಡು ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯದ ಸಮಗ್ರವಾದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನವನ್ನು ಕಟ್ಟಿಕೊಡುವುದರ ಹಿನ್ನಲೆಯಲ್ಲಿ ಇದೊಂದು ಕ್ಷೇತ್ರಕಾರ್ಯ ಆಧಾರಿತ ವಿಷಯ ಸಂಗ್ರಹಣೆ, ದಾಖಲಾತಿ, ವಿಶ್ಲೇಷಣಾ ಮಾದರಿಯ ಅಧ್ಯಯನವಾಗಿದೆ.

**ಸ್ವರೂಪ :**

ಪ್ರಸ್ತುತ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಏಳು ಪ್ರಮುಖ ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಪ್ರಮುಖ ಅಧ್ಯಾಯಗಳನ್ನು ಹಲವು ಉಪ ಶೀರ್ಷಿಕೆಗಳನ್ನಾಗಿಸಿಕೊಳ್ಳಲಾಗಿದೆ. ಈ ಏಳು ಅಧ್ಯಾಯಗಳು ಒಳಗೊಂಡಿರುವ ವಿಷಯ ಮತ್ತು ತಾತ್ವಿಕ ಸ್ವರೂಪ ಕೆಳಗಿನಂತಿದೆ.

೧. ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪ

೨. ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನಲೆ

೩. ಐತಿಹ್ಯಗಳು

೪. ರಂಗನಾಥ ದೇವಾಲಯಗಳು

೫. ರಂಗನಾಥ ಮೂರ್ತಿಶಿಲ್ಪಗಳು

೬. ನಂಬಿಕೆ ಮತ್ತು ಆಚರಣೆಗಳು

೭. ಸಮಾರೋಪ

ಪ್ರಸ್ತಾವನೆ ರೂಪದ ಮೊದಲ ಅಧ್ಯಾಯದಲ್ಲಿ ವಿಷಯದ ಪ್ರಸ್ತಾವನೆ, ವಿಷಯವನ್ನು ಆಯ್ಕೆ ಮಾಡಿಕೊಂಡ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ನಡೆದಿರುವ ಪೂರ್ವಪ್ರಯತ್ನಗಳ ಸಮೀಕ್ಷೆಯನ್ನು ನೀಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ರಂಗನಾಥ ಸಂಪ್ರದಾಯ ಹರಡಿರುವ ಭೌಗೋಳಿಕ ಪರಿಸರ, ಪ್ರಾಗೈತಿಹಾಸಿಕ ಕಾಲಕ್ಕೆ ಸಂಬಂಧಿಸಿದ ನೆಲೆಗಳ ವಿವರಗಳನ್ನು ಚರ್ಚಿಸಲಾಗಿದೆ. ಚಾರಿತ್ರಿಕ ಹಿನ್ನೆಲೆಯಲ್ಲಿ ರಂಗನಾಥ ಸಂಪ್ರದಾಯ ಬೆಳೆದು ಬಂದಿರುವ ವಿವಿಧ ಹಂತಗಳನ್ನು ಮತ್ತು ಈ ಸಂಪ್ರದಾಯಕ್ಕೆ ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಆಶ್ರಯ ನೀಡಿ, ಪ್ರೋತ್ಸಾಹಿಸಿದ ಅರಸು ಮನೆತನಗಳು, ಪಾಳೆಯಗಾರರು, ಅವರು ನೀಡಿರುವ ಕೊಡುಗೆಗಳು, ದಾನ ದತ್ತಿಗಳ ಕುರಿತು ವಿವರಿಸಲಾಗಿದೆ. ಪ್ರಸ್ತುತ ರಂಗನಾಥ ಸಂಪ್ರದಾಯವು ಶಿಷ್ಟ ಮತ್ತು ಪರಿಶಿಷ್ಟ(ಜನಪದ) ನೆಲೆಯಲ್ಲಿ ಅಸ್ತಿತ್ವವನ್ನು ಪಡೆದುಕೊಂಡಿದ್ದರಿಂದ ಎರಡೂ ನೆಲೆಯಲ್ಲಿ ಚಾರಿತ್ರಿಕ ಹಿನ್ನಲೆಯನ್ನು ವಿವೇಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕ್ಷೇತ್ರಕಾರ್ಯದ ಮೂಲಕ ಜನಸಮುದಾಯಗಳ ಮಧ್ಯ ಪ್ರಚಲಿತದಲ್ಲಿರುವ ಮೌಖಿಕ ಆಕರಗಳಾದ ಪುರಾಣ, ಐತಿಹ್ಯ, ಕಥೆ, ಕಾವ್ಯ, ನಂಬಿಕೆ ಮತ್ತು ಅಭಿಪ್ರಾಯಗಳನ್ನು ಸಂಗ್ರಹಿಸಿ, ದಾಖಲಿಸಿದೆ. ನಂತರ ಅವುಗಳನ್ನು ವಿಂಗಡಿಸಿ ವಿಶ್ಲೇಷಿಸಲಾಗಿದೆ. ಈ ಸಂಪ್ರದಾಯವನ್ನು ಕಟ್ಟಿಕೊಡುವಲ್ಲಿ ಮೌಖಿಕ ಆಕರಗಳು ಮಹತ್ವವಾದ ಪಾತ್ರವಹಿಸಿವೆ.

ನಾಲ್ಕನೆಯ ಅಧ್ಯಾಯದಲ್ಲಿ ಕರ್ನಾಟಕದಲ್ಲಿರುವ ರಂಗನಾಥ ದೇವಾಲಯಗಳ ವಾಸ್ತು ರಚನೆ, ಶೈಲಿ ಹಾಗೂ ಲಕ್ಷಣಗಳನ್ನು ಅಧ್ಯಯನ ಮಾಡಲಾಗಿದೆ. ವಿವಿಧ ಪ್ರದೇಶಗಳಲ್ಲಿ ಭಿನ್ನ ಕಾಲಘಟ್ಟದಲ್ಲಿ ಕಂಡುಬರುವ ದೇವಾಲಯಗಳ ಸ್ವರೂಪ, ಅವುಗಳ ನಿರ್ಮಾಣದಲ್ಲಿ ಬಳಸಿರುವ ಸಾಮಗ್ರಿ, ಶೈಲಿ, ರಚನಾ ವಿನ್ಯಾಸ, ಅಲಂಕರಣ ಮೊದಲಾದ ವಾಸ್ತು ಅಂಶಗಳನ್ನು ಗಮನಿಸಲಾಗಿದೆ. ಎಲ್ಲ ದೇವಾಲಯಗಳ ವಾಸ್ತು ಲಕ್ಷಣಗಳನ್ನು ಒಂದೆಡೆಗೆ ತಂದು ಪ್ರಮುಖ ಲಕ್ಷಣಗಳು ಎಂಬ ಅಂಶದ ಅಡಿಯಲ್ಲಿ ವಿಶ್ಲೇಷಿಸಲಾಗಿದೆ. ಕೊನೆಯಲ್ಲಿ ಪ್ರಮುಖ ದೇವಾಲಯಗಳ ಕುರಿತು ವಿವರಗಳನ್ನು ಸಮಗ್ರ ರೂಪದಲ್ಲಿ ನೀಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ರಂಗನಾಥ ಮೂರ್ತಿಶಿಲ್ಪಗಳ ಕುರಿತು ವಿವೇಚಿಸಲಾಗಿದೆ. ಅವುಗಳಲ್ಲಿ ಕಂಡುಬರುವ ವಿವಿಧ ಪ್ರಕಾರಗಳು, ಮೂರ್ತಿಶಿಲ್ಪದ ಪ್ರತಿಮಾ ಲಕ್ಷಣಗಳು, ಶೈಲಿ, ಬಳಸಿದ ಸಾಮಗ್ರಿ, ಅಲಂಕರಣೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಜೊತೆಗೆ ಉತ್ಸವ ಮೂರ್ತಿಗಳು, ಅವುಗಳಲ್ಲಿ ಮರ, ಲೋಹ ಮಾಧ್ಯಮದ ರಂಗನಾಥ ಮೂರ್ತಿಶಿಲ್ಪಗಳನ್ನು ಪರಿಶೀಲಿಸಲಾಗಿದೆ. ದೇವಾಲಯದ ಕೈಪಿಡಿ ಗೋಡೆಗಳಲ್ಲಿ ಅಲಂಕರಣದ ನಿಮಿತ್ತವಾಗಿ ರಚಿಸಿರುವ ಗಾರೆಶಿಲ್ಪಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳುವುದರ ಮೂಲಕ ಶಿಷ್ಟ ಮತ್ತು ಪರಿಶಿಷ್ಟ(ಜನಪದ) ನೆಲೆಯಲ್ಲಿ ನೆಲೆಗೊಂಡಿರುವ ರಂಗನಾಥನಿಗೆ ಸಂಬಂಧಿಸಿದ ನಂಬಿಕೆ, ಆಚರಣೆ, ವಿಧಿ–ವಿಧಾನಗಳು, ಉತ್ಸವ, ಜಾತ್ರೆ ಸಂಪ್ರದಾಯದ ಬಗೆಗೆ ವಿವರವಾದ ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ ಈ ಸಂಪ್ರದಾಯದಲ್ಲಿ ಪಾಲ್ಗೊಳ್ಳುವ ವಿವಿಧ ಜನಸಮುದಾಯಗಳು, ದೈವದ ಜೊತೆ ಅವರ ಸಂಬಂಧ, ಒಡನಾಟ, ನಂಬಿಕೆ, ಆಚರಣೆ ಕುರಿತು ವಿವರಣೆ ನೀಡಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು, ಇದರಲ್ಲಿ ಪ್ರತಿಯೊಂದು ಅಧ್ಯಾಯದಲ್ಲಿರುವ ಪ್ರಮುಖವಾದ ವಿಷಯಗಳು, ಆ ಕುರಿತ ಚರ್ಚೆ ಮತ್ತು ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳ ವಿವರಣೆ ನೀಡಲಾಗಿದೆ. ವಿಷಯಕ್ಕೆ ಅನುಗುಣವಾಗಿ ಅನುಬಂಧದಲ್ಲಿ ಗ್ರಂಥಋಣ, ಪದಕೋಶ, ವಕ್ತೃಗಳ ವಿವರ ಪಟ್ಟಿ, ತಲನಕ್ಷೆ, ನಕಾಶೆಗಳು ಹಾಗೂ ಛಾಯಾಚಿತ್ರಗಳನ್ನು ಕೊಡಲಾಗಿದೆ.

**ಅಧ್ಯಯನದ ಸಮೀಕ್ಷೆ :**

ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನದಿಂದ ಬಹುಮುಖಿ ಅಧ್ಯಯನಗಳು ನಡೆದಿರುವುದು ವಿರಳ. ಈ ಸಂಪ್ರದಾಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಈವರೆಗೂ ಸ್ವತಂತ್ರ ಹಾಗೂ ಪ್ರತ್ಯೇಕ ಅಧ್ಯಯನ ನಡೆದುಬಂದಿಲ್ಲದಿರುವುದು ಕಂಡುಬರುತ್ತದೆ. ಆದರೆ ಕೆಲವು ಪ್ರಮುಖ ಸ್ಥಳಗಳನ್ನು ಪ್ರಧಾನವಾಗಿ ಗಮನಿಸಿ ಕೆಲವು ವಿದ್ವಾಂಸರ ಸಂಶೋಧನಾ ಲೇಖನಗಳು ಪ್ರಕಟಗೊಂಡಿವೆ. ಅಂಥ ಅಧ್ಯಯನಗಳ ಸ್ಥೂಲ ಪರಿಚಯ ನೀಡುವ ಪ್ರಯತ್ನ ಇದಾಗಿದೆ. ಮೊದಲಿಗೆ ಸೂರ್ಯನಾಥ ಕಾಮತ್ ಅವರ ಸಂಪಾದಿತ ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ ೧,೨,೩ ಮತ್ತು ಮೈಸೂರು ಜಿಲ್ಲೆ ಗೆಜೆಟಿಯರ್(೧೯೮೮), ಬೆಂಗಳೂರು ಜಿಲ್ಲೆ ಗೆಜೆಟಿಯರ್(೧೯೯೦), ಧಾರವಾಡ ಜಿಲ್ಲೆ ಗೆಜೆಟಿಯರ್(೧೯೯೫), ರಾವ್‌ಬಹದ್ದೂರ್ ಸಿ. ಹಯವದನರಾವ್ ಅವರ ಮೈಸೂರು ಜಿಲ್ಲೆ ಗೆಜೆಟಿಯರ್ ಸಂಪುಟ ೧,೨,೩,೪,೫ (ಪರಿಷ್ಕೃತ ೧೯೨೭–೧೯೩೦), ಎಂ.ಬಿ. ಪಾಟೀಲ(ಪ್ರ.ಸಂ.) ಅವರ ಗುಲ್ಬರ್ಗಾ ಜಿಲ್ಲೆ ಗೆಜೆಟಿಯರ್ (೧೯೭೫), ಟಿ.ಎ. ಪಾರ್ಥಸಾರಥಿ ಅವರ ಮಂಡ್ಯ ಜಿಲ್ಲೆ ಗೆಜೆಟಿಯರ್ (೨೦೦೩), ಕರ್ನಾಟಕ ಸರ್ಕಾರದ ಶಿವಮೊಗ್ಗ ಜಿಲ್ಲೆ ಗೆಜೆಟಿಯರ್(೧೯೭೫), ಹಾಸನ ಜಿಲ್ಲೆ ಗೆಜೆಟಿಯರ್(೧೯೭೧), ತುಮಕೂರು ಜಿಲ್ಲೆ ಗೆಜೆಟಿಯರ್(೧೯೬೯), ಚಿಕ್ಕಮಗಳೂರು ಜಿಲ್ಲೆ ಗೆಜೆಟಿಯರ್(೧೯೮೧), ರಾಯಚೂರು ಜಿಲ್ಲೆ ಗೆಜೆಟಿಯರ್(೧೯೭೦), ಬಳ್ಳಾರಿ ಜಿಲ್ಲೆ ಗೆಜೆಟಿಯರ್(೧೯೭೨) ಮೊದಲಾದ ಕೃತಿಗಳನ್ನು ಪರಾಮರ್ಶಿಸಲಾಗಿದೆ. ಇವು ಆಯಾ ಜಿಲ್ಲೆಯ ರಂಗನಾಥಸ್ವಾಮಿ ದೇವಾಲಯಗಳ ಸ್ಥಳಗಳನ್ನು ತಿಳಿಸಿಕೊಡುವಲ್ಲಿ ಸಹಾಯಕವಾಗಿದೆ.

ಶಾಸನಗಳಿಗೆ ಸಂಬಂಧಿಸಿದಂತೆ ಎಪಿಗ್ರಾಫಿಯ ಕರ್ನಾಟಿಕ ಸಂಪುಟ ೩, ೪, ೫, ೬, ೮, ೯, ೧೦, ೧೧, ೧೩, ೧೫, ೨೪ ಮುಂತಾದವುಗಳು, ಕನ್ನಡ ವಿಶ್ವವಿದ್ಯಾಲಯ ಸಂಪಾದಿತ

ಬಳ್ಳಾರಿ ಜಿಲ್ಲೆಯ ಶಾಸನಗಳು(೧೯೯೮), ಹಂಪಿ ಶಾಸನಗಳು(೨೦೦೦), ಆಂಧ್ರಪ್ರದೇಶದ ಕನ್ನಡ ಶಾಸನಗಳು(೨೦೦೧), ತಮಿಳುನಾಡಿನ ಕನ್ನಡ ಶಾಸನಗಳು(೨೦೦೦), ಕೊಪ್ಪಳ ಜಿಲ್ಲೆ ಶಾಸನಗಳು(೧೯೯೯), ರಾಯಚೂರು ಜಿಲ್ಲೆ ಶಾಸನಗಳು(೨೦೦೩) ಮುಂತಾದ ಶಾಸನ ಸಂಪುಟಗಳು ಕರ್ನಾಟಕದಲ್ಲಿರುವ ರಂಗನಾಥ ದೇವಾಲಯಕ್ಕೆ ಸಂಬಂಧಪಟ್ಟ ಶಾಸನಗಳನ್ನು ಸಂಗ್ರಹಿಸಿಕೊಳ್ಳಲು ಸಹಾಯಕವಾಗಿವೆ.

ಎಂ. ಪಿ. ಮಂಜಪ್ಪಶೆಟ್ಟಿ ಸಂಪಾದಿತ **ಚಿಕ್ಕುಪಾಧ್ಯಾಯ ವಿರಚಿತ ಶ್ರೀರಂಗಮಹಾತ್ಮ್ಯ**(೧೯೮೧), ಹಾ.ಮಾ.ನಾಯಕ (ಪ್ರ.ಸಂ.) **ತಿಮ್ಮಕವಿ ವಿರಚಿತ ಪಶ್ಚಿಮ ರಂಗಕ್ಷೇತ್ರ ಮಹಾತ್ಮ್ಯಂ ಮತ್ತು ಚಿಕ್ಕದೇವರಾಜ ವಂಶಾವಳಿ**(೧೯೮೦) ಈ ಪ್ರಮುಖ ಕೃತಿಗಳು ತಮಿಳುನಾಡಿನ ಶ್ರಿರಂಗಂ ಮತ್ತು ಕರ್ನಾಟಕದ ಶ್ರೀರಂಗಪಟ್ಟಣದ ರಂಗನಾಥ ದೇವಾಲಯಗಳ ಸ್ಥಳಪುರಾಣಗಳನ್ನು ತಿಳಿಯುವಲ್ಲಿ ಸಹಾಯಕವಾಗಿದ್ದು, ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ನೀಡುತ್ತವೆ.

ಟಿ.ಎ. ಗೋಪಿನಾಥ ರವರ **Elements of Hindu Iconography-Vol-I. Part-I** (೧೯೧೪), ಎಸ್.ಕೆ.ರಾಮಚಂದ್ರರಾವ್ ಅವರ **Indian Icanography** (೧೯೮೧), ಎಚ್.ಕೃಷ್ಣಶಾಸ್ತ್ರೀ ಅವರ **South Indian Images of gods and Goddesse** (೧೯೮೬), ಎಮ್.ಎಸ್. ಸುಧಾಕರ., ಮತ್ತು ಎಸ್. ಕೆ. ಮೂರ್ತಿ (ಅನು.), **ವಿಷ್ಣು ಅನಾದ್ಯಂತನನ್ನು ಅರಿಯುವತ್ತ ಒಂದು ಅಡಿ** (೨೦೧೦) ಈ ಮೊದಲಾದ ಕೃತಿಗಳು ಶಿಷ್ಟ ಸಂಪ್ರದಾಯದ ಶಯನ ರಂಗನಾಥನ ಮೂರ್ತಿಶಿಲ್ಪದ ಲಕ್ಷಣಗಳನ್ನು ತಿಳಿಸಿಕೊಡುವಲ್ಲಿ ಸಹಾಯಕವಾಗಿವೆ.

ಶ್ರೀನಿವಾಸ ಪಾಡಿಗಾರ ರವರ **ವಿಷ್ಣು ಕಲ್ಟ್ ಇನ್ ಕರ್ನಾಟಕ**(೧೯೯೬) ಎಂಬ ಗ್ರಂಥವು ಕರ್ನಾಟಕದಲ್ಲಿ ವೈಷ್ಣವ ಧರ್ಮದ ಬೆಳವಣಿಗೆ ಕುರಿತು ತಿಳಿಸುತ್ತದೆ. ಈ ಕೃತಿಯಲ್ಲಿ ಶಯನ ಮೂರ್ತಿಗಳ ಕುರಿತು ಶಾಸನಗಳನ್ನು, ಶಿಲ್ಪಗಳನ್ನು ಆಧಾರವಾಗಿಟ್ಟುಕೊಂಡು ವಿವರಿಸಿದ್ದು, ಜಲಶಯನ ಅನಂತಶಯನ, ಪದ್ಮನಾಭ, ಕಮಲನಾಭ, ರಂಗನಾಥ ಮುಂತಾದ ಶಿಲ್ಪಗಳ ಹೆಸರನ್ನು ಉಲ್ಲೇಖಿಸಿದ್ದಾರೆ. ಇಲ್ಲಿ ರಂಗನಾಥ ಶಿಲ್ಪದ ಯಾವುದೇ ಪ್ರತಿಮಾ ಲಕ್ಷಣವನ್ನು ವಿವರಿಸಲಾಗಿಲ್ಲ. ಕರ್ನಾಟಕದಲ್ಲಿ ಶಾಸನಗಳ ಹಿನ್ನಲೆಯಲ್ಲಿ ವೈಷ್ಣವ ಧರ್ಮದ ಬೆಳವಣಿಗೆಯನ್ನು ತಿಳಿದುಕೊಳ್ಳುವಲ್ಲಿ ಈ ಕೃತಿಯು ಸಹಾಯಕವಾಗಿದ್ದು, ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಚಿಕ್ಕಣ್ಣ ಯಣ್ಣೆಕಟ್ಟೆ ರವರ **ಮಾಗೋಡು ಕಂಬದ ರಂಗನಾಥಸ್ವಾಮಿ ಕಥೆ** (೨೦೦೨) ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಮಾಗೋಡು ಕಂಬದ ರಂಗನಾಥಸ್ವಾಮಿಯ ಬಗೆಗೆ ಸಂಬಂಧಿಸಿದ ಕಾವ್ಯದ ಬಗ್ಗೆ ತಿಳಿಸಿಕೊಡುತ್ತಿದ್ದು ಮಹತ್ವದ ಕೃತಿಯಾಗಿದೆ. ಜೊತೆಗೆ ಕೇಶವನ್‌ಪ್ರಸಾದ್ ಕೆ., ರವರ **ಸೋಲಿಗರು ಹಾಡಿದ ಬಿಳಿಗಿರಿ ರಂಗನ ಕಾವ್ಯ** (೨೦೦೫) ಮುಂತಾದ ಕೃತಿಗಳು ನನ್ನ ಅಧ್ಯಯನಕ್ಕೆ ಪೂರಕವಾಗಿ ಸಹಾಯಕವಾಗಿವೆ.

ರಾಜಾರಾಮ ಹೆಗಡೆ ರವರ **ರಂಗನಾಥ-ತಿಮ್ಮಪ್ಪ** (೨೦೦೧) ಎಂಬ ಲೇಖನವು ನನ್ನ ಅಧ್ಯಯನಕ್ಕೆ ಬಹುಮುಖ್ಯವಾದ ಮಾಹಿತಿಯನ್ನು ನೀಡುತ್ತದೆ. ಲೇಖಕರು ಬೇಟೆರಂಗನಾಥನ ಮೂರ್ತಿಶಿಲ್ಪದ ಕುರಿತು ವಿವರಣೆ ನೀಡಿದ್ದು, ಇದರ ಕಾಲಾವಧಿಯನ್ನು ೧೬-೧೭ನೆಯ ಶತಮಾನವೆಂದು ತಿಳಿಸಲಾಗಿದೆ. ಇದು ಈ ಕಾಲಾವಧಿಯಲ್ಲಿ ಹೆಚ್ಚು ವ್ಯಾಪಕವಾಗಿ ಕಂಡುಬರುತ್ತದೆ ಎಂದು ಅಭಿಪ್ರಾಯಿಸಿದ್ದಾರೆ. ಜೊತೆಗೆ ೧೧ನೇ ಶತಮಾನಕ್ಕೆ ಪೂರ್ವದಲ್ಲಿ ಈ ದೇವತೆಗೆ ವೈಷ್ಣವ ಚಿಹ್ನೆಗಳು ಅಂತರ್ಗತವಾಗಿರಲಿಲ್ಲ ಎಂದು ತಿಳಿಸಿರುವುದುರ ಜೊತೆಗೆ, ಗುಡ್ಡ ಗಾಡಿನ ದೇವತೆ ಎಂದು ಅಭಿಪ್ರಾಯಿಸಿದ್ದಾರೆ. ಆದರೆ ವಾಸ್ತವವಾಗಿ ಬೇಟೆರಂಗನ ಕಾಲಾವಧಿ ಅದಕ್ಕೂ ಹಿಂದಕ್ಕೆ ಹೋಗುತ್ತದೆ. ಪ್ರಸ್ತುತ ಲೇಖನವು ನನ್ನ ಅಧ್ಯಯನಕ್ಕೆ ಪೂರಕವಾಗಿ ಸಹಾಯಕವಾಗಿದೆ.

ಜೀ.ಶಂ. ಪರಮಶಿವಯ್ಯರವರ **ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು** (೨೦೧೨) ಈ ಕೃತಿಯು ಮಲೆ ಮಾದೇಶ್ವರ ದೇವರ ಗುಡ್ಡದ ಸಂಪ್ರದಾಯ, ಮಂಟೇಸ್ವಾಮಿ ಪರಂಪರೆಯ ನೀಲಗಾರ ಸಂಪ್ರದಾಯ, ಕಾಡುಗೊಲ್ಲರ ಜುಂಜಪ್ಪನ ಸಂಪ್ರದಾಯ, ಮೈಲಾರಲಿಂಗನ ಗೊರವ ಸಂಪ್ರದಾಯ ಮುಂತಾದ ಕಾವ್ಯಗಳ ವಿಸ್ತೃತ ವಿವರಣೆಯನ್ನು ಹೊಂದಿದ್ದು ಈ ಸಂಪ್ರದಾಯಗಳ ಜೊತೆ ರಂಗನಾಥನ ಸಂಬಂಧವನ್ನು ತಿಳಿಯುವಲ್ಲಿ ಕೃತಿಯು ಸಹಾಯಕವಾಗಿದೆ. ಹಾಗೆಯೇ ತಿ.ನಂ. ಶಂಕರನಾರಾಯಣ ರವರ **ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು** (೧೯೮೨) ಎಂಬ ಕೃತಿಯು ಜುಂಜಪ್ಪನ ಜೊತೆ ನಿರಂತರವಾಗಿ ಸಂಬಂಧವನ್ನಿಟ್ಟುಕೊಂಡ ತುಮಕೂರು ಜಿಲ್ಲೆಯ ಶಿರಾ ರಂಗನಾಥ, ಚೇಲೂರು ರಂಗನಾಥ ಮತ್ತು ಮರಡಿ ಬಂಡೆರಂಗನಾಥನ ಸಂಬಂಧಗಳನ್ನು ತಿಳಿಯುವಲ್ಲಿ ಸಹಾಯಕವಾಗಿದೆ. ಹೀಗೆ ಈ ಎರಡು ಕೃತಿಗಳು ಪಶುಪಾಲನೆ ಹಂತದ ರಂಗನಾಥ ಸಂಪ್ರದಾಯವನ್ನು ಕಂಡುಕೊಳ್ಳುವಲ್ಲಿ ಸಹಾಯಕವಾಗಿದ್ದು ನನ್ನ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

## ಅಧ್ಯಾಯ–ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಕರ್ನಾಟಕವು ವೈವಿಧ್ಯಮಯವಾದ ಭೂಮೇಲ್ಮೈ ಲಕ್ಷಣಗಳನ್ನು ಹೊಂದಿದೆ. ಇದು ಪಶ್ಚಿಮಕ್ಕೆ ಸುಮಾರು ೪೦೦ ಕಿ.ಮೀ. ಉದ್ದದಷ್ಟು ವಿಶಾಲವಾದ ಅರಬ್ಬಿ ಕಡಲ ತೀರ ಪ್ರದೇಶ, ಉತ್ತರಕ್ಕೆ ಮಹಾರಾಷ್ಟ್ರ, ಪೂರ್ವ ಮತ್ತು ಈಶಾನ್ಯ ಬದಿಗಳಲ್ಲಿ ಕ್ರಮವಾಗಿ ಆಂಧ್ರಪ್ರದೇಶ ಮತ್ತು ತೆಲಂಗಾಣ, ಆಗ್ನೇಯದಲ್ಲಿ ತಮಿಳುನಾಡು, ನೈರುತ್ಯಕ್ಕೆ ಕೇರಳ ರಾಜ್ಯಗಳಿಂದ ಸುತ್ತುವರೆದಿದೆ. ಇತಿಹಾಸ ಕಾಲದಲ್ಲಿ ಬಾದಾಮಿ ಚಾಲುಕ್ಯರ ಆಡಳಿತ ಕಾಲದಲ್ಲಿ ಈಗಿನ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳು ಸೇರಿ ಉತ್ತರದಲ್ಲಿಯ ನರ್ಮದಾ ನದಿಯಿಂದ ದಕ್ಷಿಣದ ಕಾವೇರಿಯವರೆಗೂ, ಪಶ್ಚಿಮ ಪೂರ್ವವಾಗಿ ಅರಬ್ಬಿ ಸಮುದ್ರದಿಂದ ಬಂಗಾಳ ಕೊಲ್ಲಿಯವರೆಗೂ ವಿಶಾಲವಾಗಿತ್ತು. ಕರ್ನಾಟಕದ ಭೌಗೋಳಿಕತೆಯ ಮುಖ್ಯ ವೈಶಿಷ್ಟ್ಯವೆಂದರೆ ಅದು ಕರಾವಳಿ, ಮಲೆನಾಡು, ಅರೆ ಮಲೆನಾಡು ಮತ್ತು ಬಯಲು ಸೀಮೆಗಳನ್ನು ಒಳಗೊಂಡಿರುವುದಾಗಿದೆ.

ಕರ್ನಾಟಕವು ಸಹ್ಯಾದ್ರಿ ಘಟ್ಟದ ಅಖಂಡ ಪರ್ವತ ಶ್ರೇಣಿಗಳಿಂದ ಎತ್ತರ ಹಾಗೂ ವಿಸ್ತಾರವಾಗಿದೆ. ನೈರುತ್ಯ ಭಾಗದ ಬೆಳಗಾವಿ, ಉತ್ತರ ಕನ್ನಡ ಜಿಲ್ಲೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ಸಹ್ಯಾದ್ರಿ ಪರ್ವತ ಶ್ರೇಣಿಯು ಹಾದು ಹೋಗಿದೆ. ಈ ಶ್ರೇಣಿಗಳ ಪೂರ್ವದ ಬದಿಯೂ ಹಾಗೂ ಅದಕ್ಕೆ ಅಂಟಿಕೊಂಡಿರುವ ಪ್ರದೇಶವೇ ಮಲೆನಾಡು. ಶಿಲಾಮಯವಾದ ಈ ಪ್ರಸ್ಥಭೂಮಿಯು ಘಟ್ಟದ ಬದಿಯಿಂದ ಬಹುದೂರದವರೆಗೂ ಹಾಸಿದಂತಿದೆ. ಘಟ್ಟದ ತಗ್ಗಿನ ಪೂರ್ವಭಾಗ ಮತ್ತು ಮಲೆನಾಡು ದಟ್ಟವಾದ ನಿತ್ಯಹರಿದ್ವರ್ಣ ಅರಣ್ಯಮಯವಾಗಿದೆ. ಈ ಪ್ರದೇಶದಿಂದ ಮುಂದೆ ಪೂರ್ವ ಹಾಗೂ ಈಶಾನ್ಯ ಭಾಗಗಳಲ್ಲಿ ಅಲ್ಲಲ್ಲಿ ಪರ್ವತ ಶ್ರೇಣಿಗಳಿವೆ. ಈ ಪ್ರದೇಶವೇ ಮೈದಾನ. ಈ ಲಕ್ಷಣಗಳು ಗುಲ್ಬರ್ಗಾದ ದಕ್ಷಿಣ ಭಾಗದಿಂದ ಕೋಲಾರ ಜಿಲ್ಲೆಯ

ದಕ್ಷಿಣ ಅಂಚಿನ ಪ್ರದೇಶದವರೆಗೆ ಇದೆ. ಗುಲ್ಬರ್ಗಾದ ಉತ್ತರ ಭಾಗದಿಂದ ಬೀದರ ಜಿಲ್ಲೆಯ ಕೊನೆಯವರೆಗೆ ಮರ-ಗಿಡಗಳು ತೀರಾ ವಿರಳ. ವಿಶಾಲವಾದ ಬಯಲು ಪ್ರದೇಶದಲ್ಲಿ ಅಲ್ಲಲ್ಲಿ ಕರಿಕಲ್ಲಿನ ಬೋಳು ಗುಡ್ಡಗಳಿವೆ.

ಮಲೆನಾಡು ಪಶ್ಚಿಮದಲ್ಲಿನ ಸಹ್ಯಾದ್ರಿ ಶ್ರೇಣಿ ಹಾಗೂ ಪೂರ್ವಕ್ಕಿರುವ ತಪ್ಪಲು ಪ್ರದೇಶದ ನಡುವಿನ ಭೂಪ್ರದೇಶ. ಇದು ಸಹ್ಯಾದ್ರಿಯ ಪೂರ್ವದ ಅಂಚಿನುದ್ದಕ್ಕೂ ಸುಮಾರು ೬೫೦ ಕಿ.ಮೀ. ಮಾತ್ರ ಉತ್ತರ ದಕ್ಷಿಣವಾಗಿ ಹಬ್ಬಿದ್ದು ಬೆಳಗಾವಿ, ಧಾರವಾಡ, ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ದಕ್ಷಿಣ ಕನ್ನಡ, ಕೊಡಗು ಹಾಗೂ ಮೈಸೂರು ಜಿಲ್ಲೆಗಳನ್ನೊಳಗೊಂಡಿದೆ. ಗುಡ್ಡ, ಕಣಿವೆ, ದಟ್ಟವಾದ ಅರಣ್ಯ ಹಾಗೂ ಜಲಪಾತಗಳು ಈ ಪ್ರದೇಶದಲ್ಲಿವೆ.

ಭೌಗೋಳಿಕ ದೃಷ್ಟಿಯಿಂದ ಉತ್ತರ ಬಯಲು ಸೀಮೆಯ ಪ್ರದೇಶ ಹಳೆಯದಾಗಿದ್ದು, ವಿಶಾಲವಾಗಿ ಹರಡಿಕೊಂಡಿರುವ ತಪ್ಪಲು ಪ್ರದೇಶ, ಬೀದರ್, ಗುಲ್ಬರ್ಗಾ, ವಿಜಾಪುರ ಮತ್ತು ರಾಯಚೂರು ಜಿಲ್ಲೆಗಳು ಹಾಗೂ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಯ ಕೆಲವು ಭಾಗಗಳು ಈ ಪ್ರದೇಶದಲ್ಲಿವೆ. ಎರೆ ಮಣ್ಣು ಈ ಪ್ರದೇಶದ ಬಹಳಷ್ಟು ಭಾಗಗಳನ್ನು ಆವರಿಸಿದೆ. ಕುರುಚಲು ಗಿಡಗಳನ್ನು ಹೊಂದಿರುವ ಬಯಲು ಪ್ರದೇಶ ಇದಾಗಿದೆ. ಕೆಂಪು ಮಣ್ಣಿನ ಪ್ರದೇಶವು ಕಣಶಿಲೆಯ (ಗ್ರಾನೈಟ್) ಗುಡ್ಡಗಳ ಸುತ್ತಮುತ್ತ ಹರಡಿಕೊಂಡಿದೆ. ಕೃಷ್ಣಾ ನದಿಯು ಈ ಭಾಗದ ಮುಖ್ಯ ನದಿಯಾಗಿದ್ದು ಭೀಮಾ, ತುಂಗಭದ್ರ, ಮಲಪ್ರಭಾ ಹಾಗೂ ಘಟಪ್ರಭಾ ಎಂಬ ಉಪ ನದಿಗಳನ್ನು ಒಳಗೊಂಡಿದೆ. ಇದು ಕರ್ನಾಟಕದ ೬೦%ರಷ್ಟು ಭಾಗವನ್ನು ಆವರಿಸಿಕೊಂಡಿದೆ.[೧]

ತುಂಗಭದ್ರಾ ನದಿಯು ಕರ್ನಾಟಕದ ದಕ್ಷಿಣ ಬಯಲು ಪ್ರದೇಶವನ್ನು ಇಬ್ಭಾಗ ಮಾಡಿದೆ. ದಕ್ಷಿಣ ಬಯಲು ಪ್ರದೇಶ ಹೆಚ್ಚು ಎತ್ತರವಾಗಿದೆ. ಹುಲ್ಲುಗಾವಲು, ಗಿಡಗಂಟಿ, ಕಾಡು-ಮೇಡುಗಳಿಂದ ಕೂಡಿದ ಈ ಪ್ರದೇಶವು ಹೆಚ್ಚಿಗೆ ದಟ್ಟವಾದ ಸಸ್ಯ ಸಂಪತ್ತನ್ನೊಳಗೊಂಡಿದೆ. ಚಿತ್ರದುರ್ಗ, ತುಮಕೂರು, ಮಂಡ್ಯ, ಬೆಂಗಳೂರು, ಕೋಲಾರ ಮುಂತಾದ ಜಿಲ್ಲೆಗಳನ್ನಲ್ಲದೆ ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಹಾಗೂ ಮೈಸೂರು ಜಿಲ್ಲೆಗಳ ಕೆಲವು ಭಾಗಗಳನ್ನು ಈ ಪ್ರದೇಶವು ಒಳಗೊಂಡಿದೆ. ಕಾವೇರಿ ಅದರ ಉಪನದಿಗಳಾದ ಹೇಮಾವತಿ, ಕಬಿನಿ ಮತ್ತು ಶಿಂಷಾ ನದಿಗಳು ಹರಿದಿವೆ. ಇಡೀ ಕರ್ನಾಟಕ ಪ್ರದೇಶವನ್ನೇ ಉತ್ತರದಿಂದ ದಕ್ಷಿಣದವರೆಗೂ ಆವರಿಸಿರುವ ಮಾಂಜ್ರಾ, ಕಾರಂಜಾ, ಕೃಷ್ಣ ಮಲಪ್ರಭೆ, ಘಟಪ್ರಭೆ, ತುಂಗಭದ್ರ, ಕಾವೇರಿ, ಹೇಮಾವತಿ, ಪೊನ್ನೈಯಾರ್, ಪಾಲಾರ್ ಮತ್ತು ಕಪಿಲಾ ನದಿ, ಪಶ್ಚಿಮಘಟ್ಟ ಮತ್ತು ಕಡಲ ಪ್ರದೇಶದ ಕಾಳಿ, ಗಂಗಾವತಿ, ಶರಾವತಿ, ವಾರಾಹಿ, ಸೀತಾ ಮತ್ತು ನೇತ್ರಾವತಿ ಮೊದಲಾದ ೧೨ ಮಹಾನದಿಗಳು ಮತ್ತು ಅವುಗಳ ಉಪನದಿಗಳು ಪ್ರಮುಖವಾಗಿವೆ.

ಕೊಡಗು ಜಿಲ್ಲೆಯ ಭಾಗಮಂಡಲದಲ್ಲಿ ಹುಟ್ಟಿ, ಪೂರ್ವಾಭಿಮುಖವಾಗಿ ಹರಿಯುವ ಕಾವೇರಿ ಮುಖ್ಯವಾಗಿ ಬಯಲು ಸೀಮೆಯ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಿಗೆ ಜಲಸಮೃದ್ಧಿಯನ್ನುಂಟುಮಾಡುವಂಥ ಮುಖ್ಯವಾದ ನದಿ. ಬೆಂಗಳೂರು ಜಿಲ್ಲೆಯ ದಕ್ಷಿಣದ ಅಂಚನ್ನೇ ಸೋಂಕಿ ತಮಿಳುನಾಡಿನತ್ತ ಹರಿಯುವ ಈ ನದಿಗೆ ಕರ್ನಾಟಕದಲ್ಲಿ ಸೇರುವ ಉಪನದಿಗಳಲ್ಲಿ ಹಾರಂಗಿ, ಯಗಚಿ, ಹೇಮಾವತಿ, ಲಕ್ಷ್ಮಣತೀರ್ಥ, ಕಪಿಲಾ, ಸುವರ್ಣಾವತಿ, ಶಿಂಷಾ, ಕಣ್ವ, ಅರ್ಕಾವತಿ ಮುಖ್ಯವಾದವು. ಹೀಗೆ ಕಾವೇರಿಯನ್ನು ಸೇರುವ ಉಪನದಿಗಳ ಸಂಖ್ಯೆ ೨೦. ಶಿವನಸಮುದ್ರದ ಬಳಿ ರಮ್ಯವಾದ ಜಲಪಾತಗಳನ್ನು ಸೃಷ್ಟಿಸಿದೆ.

ಹೀಗೆ ಒಂದು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯ ಬೆಳವಣಿಗೆಯಲ್ಲಿ ಅಲ್ಲಿಯ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತು ಬಹಳ ಮುಖ್ಯವಾಗಿರುತ್ತದೆ. ಇವು ಆಯಾ ಸಂಸ್ಕೃತಿಯು ಹುಟ್ಟಿ, ನೆಲೆನಿಂತು ಮುಂದುವರಿಯುವಲ್ಲಿ ಭೌಗೋಳಿಕ ಹಿನ್ನೆಲೆಯು ನೇರವಾಗಿ ಕಾರಣವಾಗುತ್ತದೆ. ಕರ್ನಾಟಕ ಇತಿಹಾಸ, ಸಂಸ್ಕೃತಿ, ಭಾಷೆ, ಸಂಗೀತ, ಸಾಹಿತ್ಯ, ಶಿಲ್ಪಕಲೆ, ನಾಟ್ಯ ಮುಂತಾದ ಸುದೀರ್ಘ ಇತಿಹಾಸವುಳ್ಳ ಶ್ರೀಮಂತ ಸಂಸ್ಕೃತಿಯ ಸಂಪದ್ಭರಿತ ನಾಡು. ಕರ್ನಾಟಕ ಎಂಬ ಹೆಸರಿಗೆ ಪುರಾತನ ಇತಿಹಾಸವಿದೆ. ಈ ಹೆಸರಿನ ಹಿಂದೆ ನಾಡಿನ ಪ್ರಾಚೀನ ಸಂಸ್ಕೃತಿ ಮತ್ತು ಸಂಪ್ರದಾಯವಿದೆ. ಇಲ್ಲಿಯ ಸಂಸ್ಕೃತಿಯ ಆಧಾರವಾಗಿರುವ ಮತಪಂಥಗಳು, ಇತಿಹಾಸ, ಭಾಷೆ, ಕಲೆ, ಆಚಾರ-ವಿಚಾರ, ಪರಂಪರೆ ಮುಂತಾದವುಗಳಿಗೆ ಒಂದು ವೈಶಿಷ್ಟ್ಯತೆಯಿದೆ. ಪ್ರಾಚೀನ ಕಾಲದಿಂದಲೂ ಆರಂಭವಾಗಿ ಅನೇಕ ರಾಜವಂಶಗಳು ಹಾಗೂ ಪಾಳೆಯಪಟ್ಟುಗಳ ಆಳ್ವಿಕೆಗೆ ಒಳಪಟ್ಟಿದೆ.

ಪ್ರಸ್ತುತ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯವು ಶಿಷ್ಟ ಮತ್ತು ಪರಿಶಿಷ್ಟ ನೆಲೆಯಲ್ಲಿ ನೆಲೆಗೊಂಡಿದ್ದು, ತನ್ನದೇ ಆದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿದೆ. ಮುಖ್ಯವಾಗಿ ಕರ್ನಾಟಕದ ಹಾವೇರಿ, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ತುಮಕೂರು, ಕೊಪ್ಪಳ, ಬಳ್ಳಾರಿ, ರಾಯಚೂರು, ಬಾಗಲಕೋಟೆ, ಧಾರವಾಡ, ಗುಲ್ಬರ್ಗಾ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ, ಕೋಲಾರ, ರಾಮನಗರ, ಮಂಡ್ಯ, ಮೈಸೂರು, ಚಾಮರಾಜನಗರ, ಕೊಡಗು ಹೀಗೆ ೨೨ ಜಿಲ್ಲೆಗಳಲ್ಲಿ ಸುಮಾರು ೨೭೪ಕ್ಕೂ ಹೆಚ್ಚು ರಂಗನಾಥ ಆರಾಧನಾ ನೆಲೆಗಳು ಕಂಡುಬರುತ್ತವೆ.

ಈ ಎಲ್ಲ ರಂಗನಾಥನ ಆರಾಧನಾ ನೆಲೆಗಳು ಕರ್ನಾಟಕದ ಆಯಾ ಜಿಲ್ಲೆಯಾದ್ಯಂತ ಕಂಡುಬರುವ ಬೆಟ್ಟ-ಗುಡ್ಡ, ಗವಿ, ಕಲ್ಲಾಸರೆ, ನದಿ, ಹಳ್ಳ-ಕೊಳ್ಳ, ಬಯಲಿನಲ್ಲಿ, ದುರ್ಗಮವಾದ ಪರಿಸರದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಸ್ಥಳೀಯವಾಗಿ ಹರಿಯುತ್ತಿರುವ ನದಿ, ಹಳ್ಳ-ಕೊಳ್ಳಗಳ

ದಡದಲ್ಲಿ ಕೆಲವು ದೇವಾಲಯಗಳು ನೆಲೆಗೊಂಡಿವೆ. ಅಲ್ಲದೆ ಕುರುಚಲ ಕಾಡನ್ನು ಹೊಂದಿರುವ ಎತ್ತರವಾದ ಬೆಟ್ಟ-ಗುಡ್ಡ ಪ್ರದೇಶಗಳು ದೇವಾಲಯದ ನೆಲೆಗಳಾಗಿವೆ. ಈ ಎಲ್ಲ ಸ್ಥಳಗಳು ಭಕ್ತರಿಗೆ ಅತ್ಯಂತ ಪೂಜನೀಯವೆನಿಸಿ ಜಾಗೃತ ಸ್ಥಾನಗಳಾಗಿ ಪ್ರಸಿದ್ಧವಾಗಿದ್ದು, ತಮ್ಮದೇ ಆದ ಭೌಗೋಳಿಕ ಪರಿಸರವನ್ನು ಪಡೆದುಕೊಂಡಿವೆ.

ದೇವಾಲಯ ನೆಲೆಗೊಂಡಿರುವ ಹಲವು ಸ್ಥಳಗಳು, ಪ್ರಾಗೈತಿಹಾಸಿಕ ಕಾಲದಿಂದಲೂ ಮಹತ್ವವನ್ನು ಪಡೆದುಕೊಂಡಂತವುಗಳಾಗಿವೆ. ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲೂಕಿನ ತಮಟಗಲ್ಲು, ಹೊಳಲಕೆರೆ ತಾಲೂಕಿನ ತಾಳ್ಯ, ನಂದನ ಹೊಸೂರು, ತುಮಕೂರು ಜಿಲ್ಲೆಯ ಕುಣಿಗಲ್ ತಾಲೂಕಿನ ಹೇರೂರು, ಗುಬ್ಬಿ ತಾಲೂಕಿನ ಮೂಗನಾಯಕನಕೋಟೆ, ಹೂವಿನಕಟ್ಟೆ, ಚಿಕ್ಕನಾಯಕನಹಳ್ಳಿ ತಾಲೂಕಿನ ಹುಳಿಯಾರ, ದಾವಣಗೆರೆ ಜಿಲ್ಲೆಯ ಹರಿಹರ ತಾಲೂಕಿನ ಕೋಮಾರನಹಳ್ಳಿ, ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲೂಕಿನ ತಮ್ಮಿನಾಳ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ, ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ, ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲೂಕಿನ ಬನ್ನೂರು, ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ರೌಡಕುಂದ, ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲೂಕಿನ ದಾಸರಕಲ್ಲಹಳ್ಳಿ, ಪಿಳ್ಳಂಗೇರಿ, ಹಾವೇರಿ ಜಿಲ್ಲೆಯ ಹಿರೇಕೆರೂರ ತಾಲೂಕಿನ ಹಳ್ಳೂರ ಮುಂತಾದ ಸ್ಥಳಗಳು ಆದಿ ಹಳೆ ಶಿಲಾಯುಗದಿಂದ ಬೃಹತ್ ಶಿಲಾಯುಗದವರೆಗೆ ಪ್ರಮುಖ ನೆಲೆಗಳಾಗಿವೆ.[೨]

ಪ್ರಸ್ತುತ ರಂಗನಾಥ ದೇವಾಲಯಗಳು ಈ ಗ್ರಾಮಗಳಲ್ಲಿದ್ದು, ಪ್ರಾಚೀನ ಆರಾಧನಾ ನೆಲೆಗಳಾಗಿವೆ. ಇಲ್ಲಿಯ ದೇವಾಲಯಗಳು ವಿಜಯನಗರ ಮತ್ತು ನಂತರದ ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡು ಕಾಲಾನುಕ್ರಮದಲ್ಲಿ ಅನೇಕ ಬದಲಾವಣೆಗಳಿಗೆ ಒಳಗಾಗಿವೆ. ಹೀಗೆ ಬದಲಾವಣೆಗಳಿಗೆ ಒಳಗಾದ ಈ ನೆಲೆಗಳಿಗೂ ರಂಗನಾಥ ಸಂಪ್ರದಾಯಕ್ಕೂ ಇರುವ ಪ್ರಾಚೀನ ಸಂಬಂಧಗಳನ್ನು ಊಹಿಸಬಹುದು. ಕಾರಣ ದೇವಾಲಯವಿರುವ ಪರಿಸರದ ಕೆಲವು ಪ್ರಮುಖ ನೆಲೆಗಳಲ್ಲಿ ಪ್ರಾಗೈತಿಹಾಸಕಾಲದ ಅವಶೇಷಗಳು ಕಂಡುಬರುತ್ತಿದ್ದು, ಈ ಸಂಬಂಧವನ್ನು ಸೂಚಿಸುವ ಅನುಮಾನಗಳನ್ನು ಹುಟ್ಟಿಸುತ್ತವೆ. ಪ್ರಾಗೈತಿಹಾಸ ಮತ್ತು ಇತಿಹಾಸಕ್ಕೂ ಸಾವಿರಾರು ವರ್ಷಗಳು ದಾಟಿ ಬಂದರೂ, ಅನೇಕ ರೂಪಾಂತರಗಳನ್ನು ಪಡೆದರೂ ಈ ಪ್ರಾಗೈತಿಹಾಸಿಕ ಸ್ಥಳಗಳಿಗೂ ಮತ್ತು ರಂಗನಾಥ ಸಂಪ್ರದಾಯಕ್ಕೂ ಸಂಬಂಧಿವಿದೆ ಎಂದು ಊಹಿಸುವಲ್ಲಿ ಸಹಾಯಕವಾಗಿವೆ.

ಚಿತ್ರದುರ್ಗ ಜಿಲ್ಲೆಯ ಹಿರಿಯೂರ ತಾಲೂಕಿನ ರಂಗನಾಥಪುರ ಗ್ರಾಮ. ಈ ಗ್ರಾಮಕ್ಕೆ ಹಿಂದೆ 'ಬೂದಿಹಳ್ಳಿ', 'ಬೂದಿಪುರ' ಎಂಬ ಪ್ರಾಚೀನ ಹೆಸರಿರುವುದು ಕಂಡುಬರುತ್ತದೆ. ಇದು ನೂತನ ಶಿಲಾಯುಗ ಸಂಸ್ಕೃತಿ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ನೆಲೆಯಾಗಿದೆ.

ಈ ಸ್ಥಳದಲ್ಲಿ ರಂಗನಾಥ ಹುತ್ತದಲ್ಲಿ ನೆಲೆಸಿರುವುದಾಗಿ ಅರ್ಚಕನಿಗೆ ಕನಸಿನಲ್ಲಿ ಬಂದು ಹೇಳುವ ಐತಿಹ್ಯ ಪ್ರಚಲಿತದಲ್ಲಿದೆ. ನಂತರ ಅದರ ಮೇಲೆ ಹಸು ಹಾಲು ಕರೆಯುವ, ನಂತರ ಅದನ್ನು ಪೂಜಿಸುವ ಪ್ರಸಂಗವಿದೆ. ಐತಿಹ್ಯವೂ ನಂಬಲರ್ಹವಲ್ಲದಾದರೂ ಈ ರೀತಿಯ ಪ್ರಾಚೀನ ನೆಲೆಗಳಲ್ಲಿ ರಂಗನಾಥನು ನೆಲೆಸಿರುವನು ಎಂಬುವುದು ಕಂಡುಬರುತ್ತದೆ.[೩]

ಮತ್ತೊಂದು ಮಹತ್ವದ ಸ್ಥಳ ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲೂಕಿನ ಸಂತೇಬಾಚಹಳ್ಳಿ. ಈ ಪರಿಸರದ ಪೂರ್ವಕ್ಕೆ ೨ ಕಿ.ಮೀ. ದೂರದಲ್ಲಿ (ಬೆಣ್ಣೆಸಿದ್ದನಗುಡ್ಡ, ನಂಜನಗುಡ್ಡ, ಬೋರನಗುಡ್ಡ) ಮುಂತಾದವುಗಳನ್ನು ಒಳಗೊಂಡ ಸಣ್ಣಗುಡ್ಡವೊಂದಿದೆ. ಇಲ್ಲಿ ಅಪಾರ ಪ್ರಮಾಣದಲ್ಲಿ ಕಲ್ಲುಸೇವೆ (ಕಲ್ಸೇವೆ) ಆಚರಣೆ ನಡೆಯುತ್ತದೆ. ಪ್ರಸ್ತುತ ಉಪ್ಪಾರರು, ವಡ್ಡರು, ದೊಂಬರು, ಮಾದಿಗರು, ಅಗಸರು, ತೆಲುಗು ಬಣಜಿಗರು ಮುಂತಾದವರು ಅಂಟ್ಯುಜಾಡ್ಯದಿಂದ ಸತ್ತವರು, ಕುಷ್ಠರೋಗಿಗಳು, ಕಾಡುಪ್ರಾಣಿಗಳಿಂದಾದ ಗಾಯಗಳಿಂದ ಸತ್ತವರು, ಗರ್ಭಿಣಿಯರು ಮರಣ ಹೊಂದಿದ್ದಾಗ ಇದೇ ಪದ್ಧತಿಯನ್ನು ಆಚರಿಸುತ್ತಾರೆ. ಈ ಸಂಪ್ರದಾಯವನ್ನು ಗಮನಿಸಿರುವ ಇತಿಹಾಸ ವಿದ್ವಾಂಸರಾದ ಎಂ.ಎಸ್. ಕೃಷ್ಣಮೂರ್ತಿ, ಎಂ.ಪಿ.ಮಹದೇವಯ್ಯ ಇವರು ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಎರಡು ಸಹಸ್ರಮಾನಗಳ ಹಿಂದೆ ಪ್ರಚಲಿತದಲ್ಲಿದ್ದ ಬೃಹತ್ ಶಿಲಾಸಮಾಧಿಯ ಸಂಸ್ಕೃತಿಯ ಗೋರಿಗಳ ನೆನಪು ಮರುಕಳಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಗುಡ್ಡ ಸಾಲುಗಳ ಅಂಚಿನಲ್ಲಿರುವ ಬಿಲ್ಲೇನಹಳ್ಳಿಯಲ್ಲಿ ರಂಗನಾಥನ ಆರಾಧನಾ ಸ್ಥಳ ಕಂಡುಬರುತ್ತದೆ. ಇಲ್ಲಿ ರಂಗನಾಥನ ಆರಾಧನೆಯು ವಿಶೇಷವಾಗಿದೆ. ಮತ್ತು ವ್ಯಾಪಕವಾಗಿದೆ. ಕೇವಲ ಒಂದು ನಿರಾಕಾರವಾದ ವಿಶಾಲ ಉದ್ದನೆಯ ಬಂಡೆಯಾಸರೆಯು ಪ್ರಾಚೀನ ಕಾಲದಿಂದಲೂ ಆರಾಧನೆಗೆ ಒಳಪಟ್ಟಿದೆ. ದಿನನಿತ್ಯ ನೂರಾರು ಜನರು ಇಲ್ಲಿಗೆ ಬರುತ್ತಾರೆ. ಹಾಗೆಯೇ ಜಾತ್ರೆಯ ಸಂದರ್ಭದಲ್ಲಿ ಸಾವಿರಾರು ಜನರು ಸೇರುವ ಸ್ಥಳವಾಗಿದ್ದು, ಈ ಪರಿಸರದಲ್ಲಿಯೇ ಕಲ್ಲು ಸೇವೆ ನಡೆಯುವುದು ಗಮನಾರ್ಹ.[೪] ಆದರೆ ಇಲ್ಲಿಯ ರಂಗನಾಥನ ಆರಾಧನೆಯ ನೆಲೆಯನ್ನು ನೇರವಾಗಿ ಪ್ರಾಗೈತಿಹಾಸದ ಕಾಲಘಟ್ಟದ ಜೊತೆ ಹೋಲಿಸಲಾಗದಿದ್ದರೂ ಅಥವಾ ಸಂಬಂಧಿಸಲಾಗದಿದ್ದರೂ ಇಲ್ಲಿ ಆರಾಧನೆ ನೆಲೆ ಮಾತ್ರ ಪ್ರಾಚೀನವಾಗಿದೆ ಎಂಬುವುದು ಸ್ಪಷ್ಟವಾಗುತ್ತದೆ.

ರಂಗನಾಥ ಸಂಪ್ರದಾಯ ಮತ್ತು ಪ್ರಾಗೈತಿಹಾಸ ಕಾಲದ ಸಂಬಂಧದ ಸ್ಪಷ್ಟ ಚಿತ್ರಣವನ್ನು ಕೊಡುವ ಮಹತ್ವದ ನೆಲೆ ಬನ್ನೂರು. ಇದು ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲೂಕಿನ 'ಬನ್ನೂರು' ಗ್ರಾಮ.

ಬನ್ನೂರಿನ ಸಮೀಪವಿರುವ ಬೊಮ್ಮನಹಳ್ಳಿ ಎಂಬ ಕುಗ್ರಾಮವೊಂದರ ಗುಡ್ಡವೊಂದರಲ್ಲಿ ಪ್ರಾಚೀನ ನಿವೇಶನವು ಅಸ್ತಿತ್ವದಲ್ಲಿದ್ದು, ಈ ನೆಲೆಯಲ್ಲಿ ಶಿಲಾ ತಾಮ್ರಯುಗ, ಬೃಹತ್ ಶಿಲಾಯುಗ

ಮತ್ತು ಆದಿ ಚರಿತ್ರೆ ಕಾಲದ ಅವಶೇಷಗಳನ್ನು ಒಳಗೊಂಡಂತೆ ನಿರಂತರ ಜನವಸತಿಯ ಲಕ್ಷಣಗಳು ಕಂಡುಬಂದಿವೆ. ಬನ್ನೂರು ಸಮೀಪದ 'ವಡಗಲ್ಲು ರಂಗನಾಥಸ್ವಾಮಿ' ಬೆಟ್ಟದ (ಮೂಲತಃ ಒಡ್ಡಗಲ್ಲು) ಸುತ್ತಮುತ್ತಲು ಇಳಿಜಾರಿನ ಬಂಡೆಗಳ ಬದಿಯಲ್ಲಿ ಬಿಂದಿಗೆ ಗಾತ್ರದಿಂದ ಹಿಡಿದು ಹಿಡಿ ಗಾತ್ರದವರೆಗಿನ ಸ್ವಾಭಾವಿಕ ಕಲ್ಲುಗಳಿಂದ ಸಿದ್ಧಪಡಿಸಿದ ಗುಡ್ಡೆಗಳು ಅನೇಕ ಸಂಖ್ಯೆಯಲ್ಲಿ ದೊರೆಯುತ್ತವೆ. ಮೂಲತಃ ಇವು ಮಾನವ ಸಮಾಧಿಗಳಾಗಿದ್ದವು. ಈ ನೆಲೆಯಲ್ಲಿ ಒಂದು ಅಪರೂಪದ ಆಚರಣೆಯು ಅಸ್ತಿತ್ವದಲ್ಲಿರುವುದನ್ನು ಮೈಸೂರು ನಾಗರಾಜಶರ್ಮ ಅವರು ದಾಖಲಿಸಿದ್ದಾರೆ. ಅದು 'ಕಲ್ಲುಮಲ್ಲಯ್ಯ' ಎಂಬ ಅಪರೂಪದ ಶವಸಂಸ್ಕಾರದ ಪದ್ಧತಿ. ಇದು ರಂಗನಾಥ ದೇವಾಲಯ ನೆಲೆಗೊಂಡಿರುವ ಪರಿಸರದಲ್ಲಿ ನಡೆಯುವ ಆಚರಣೆಯಾಗಿದ್ದು, ರಂಗನಾಥ ಸಂಪ್ರದಾಯದ ಅಧ್ಯಯನದಲ್ಲಿ ಮಹತ್ವವನ್ನು ಪಡೆದುಕೊಂಡಿದೆ. ಮೃತಹೊಂದಿದ ವ್ಯಕ್ತಿಗಳನ್ನು ಊರಿನಿಂದ ದೂರದ ಬೆಟ್ಟದ ಇಳಿಜಾರು ಪ್ರದೇಶಕ್ಕೆ ಅಂದರೆ ಇದೇ ಬೆಟ್ಟಕ್ಕೆ ಕೊಂಡೊಯ್ದು, ಎರಡು ಬಂಡೆಗಳ ನಡುವಿನ ಆಯಕಟ್ಟಿನ ಸ್ಥಳದಲ್ಲಿ ಮಲಗಿಸಲಾಗುವುದು. (ಕೆಲವೊಮ್ಮೆ ಕೂರಿಸುವ ಪದ್ಧತಿಯೂ ಉಂಟು) ನಂತರ ದೇಹದ ಮೇಲೆ ಪುಟ್ಟ ದೊಡ್ಡ ಕಲ್ಲುಗುಂಡಗಳನ್ನು ಸೇರಿಸಿ, ಗುಡ್ಡವೊಂದನ್ನು ನಿರ್ಮಿಸಿ ಶವಸಂಸ್ಕಾರದ ಪ್ರಕ್ರಿಯೆಯನ್ನು ಪೂರೈಸಲಾಗುವುದು. ಹೆಣವನ್ನು ಬೆಂಕಿಯಿಂದ ದಹಿಸುವ ಕ್ರಮವಾಗಲೀ ಅಥವಾ ಮಣ್ಣಿನಲ್ಲಿ ಮುಚ್ಚುವ ಪದ್ಧತಿ ಇಲ್ಲ. ಹಳೇ ಮೈಸೂರಿನ ಹಾಸನ, ಚಿಕ್ಕಮಗಳೂರು ಮತ್ತು ಮಂಡ್ಯ ಜಿಲ್ಲೆಯಲ್ಲಿ ಸಿ. ಹಯವದನರಾವ್ ಅವರು ದಾಖಲಿಸಿದ ಕಲ್ಲು ಸೇವೆಗಿಂತ ಇಲ್ಲಿ ಭಿನ್ನವಾಗಿ ಕಲ್ಲುಮಲ್ಲಯ್ಯನ ಸೇವೆಯನ್ನು ಶರ್ಮರವರು ದಾಖಲಿಸಿದ್ದಾರೆ. ಈ ವಿಧಾನದಲ್ಲಿ ಸಿದ್ಧಗೊಳಿಸಿದ ಚಪ್ಪಡಿಯನ್ನು ಮುಚ್ಚದೇ ಅಥವಾ ಗೋಡೆಯಂತೆ ಕಲ್ಲುಗಳನ್ನು ಜೋಡಿಸದೇ ಬಹು ಪ್ರಾಚೀನ ಶೈಷವ ವಿಧಾನದಿಂದ ಸಮಾಧಿಯನ್ನು ಪೂರ್ಣಗೊಳಿಸಲಾಗುತ್ತದೆ. ಇಡೀ ಬೆಟ್ಟದ ಸುತ್ತಮುತ್ತಲು ಮತ್ತು ಬೆಟ್ಟಳ್ಳಿ ಹಾಗೂ ಇತರ ಅನೇಕ ಹಳ್ಳಿಗಳಲ್ಲಿನ ಒಕ್ಕಲಿಗ ಜೊತೆಗೆ ಹೊಲೆಯರು ಮಾತ್ರವಲ್ಲದೆ ಇತರ ಕೆಲವು ಜಾತಿಯ ಜನರೂ ಈ ಪದ್ಧತಿಯನ್ನು ಅನುಸರಿಸುತ್ತಾರೆಂದು ಅಭಿಪ್ರಾಯಿಸಿದ್ದಾರೆ. ಈ ರೀತಿಯ ಆಚರಣೆ ಇರುವ ಪರಿಸರದಲ್ಲಿ ಬಂಡೆಗಳಿಂದ ಆವೃತವಾದ ಗವಿಯಲ್ಲಿ ರಂಗನಾಥನು ನಿರಾಕಾರ ಹಾಗೂ ಅಮೂರ್ತನಾಗಿ ನೆಲೆಗೊಂಡಿದ್ದು, ಅನಾದಿ ಕಾಲದಿಂದಲೂ ಆರಾಧನೆಗೆ ಒಳಗಾಗಿದ್ದಾನೆ. ಈ ನೆಲೆಯು ಆರಾಧನೆಯ ಪ್ರಾಚೀನತೆಯನ್ನು ಸೂಚಿಸುವಂತಿದೆ.[೫]

ಪ್ರಸ್ತುತ ಅನೇಕ ರಂಗನಾಥ ದೇವಾಲಯಗಳು ಬೆಟ್ಟ-ಗುಡ್ಡದಲ್ಲಿ ನೆಲೆಗೊಂಡಿದ್ದು, ಪ್ರಾಚೀನ ರಂಗನಾಥ ಆರಾಧನಾ ಪದ್ಧತಿಗೆ ಸಾಕ್ಷವನ್ನು ಒದಗಿಸುವ ಪ್ರತೀಕದಂತೆ ನೆಲೆಗೊಂಡಿವೆ. ಮೊದಲೇ ತಿಳಿಸಿದಂತೆ ಕರ್ನಾಟಕದ ೨೨ ಜಿಲ್ಲೆಗಳಲ್ಲಿ ಈ ನೆಲೆಗಳು ಹರಡಿಕೊಂಡಿವೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯ ತಂಬ್ರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಹಿರಿಯೂರ

ತಾಲೂಕಿನ ಮರಡಿಹಳ್ಳಿ, ಹಾರಣಕಣಿವೆ, ಕಂಬದಹಳ್ಳಿ (ಅಮ್ಮನಹಟ್ಟಿ), ಹೊಸದುರ್ಗ ತಾಲೂಕಿನ ಕಬ್ಬಳ, ಗವಿರಂಗಾಪುರ, ಹೊಳಲಕೆರೆ ತಾಲೂಕಿನ ಲೊಕದೊಳಲು, ಸಿಂಗೇನಹಳ್ಳಿ, ಚಿತ್ರದುರ್ಗ ತಾಲೂಕಿನ ಪಂಡರಹಳ್ಳಿ, ತಮಟಗಲ್ಲು, ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲೂಕಿನ ದೇವರಹಳ್ಳಿ, ನಿಲೋಗಲ್, ಜಗಳೂರ ತಾಲೂಕಿನ ಕೊಣಚಗಲ್, ಹರಿಹರ ತಾಲೂಕಿನ ಬೆಳಗುತ್ತಿ, ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲೂಕಿನ ವುಡೇವು, ಕಡೂರ ತಾಲೂಕಿನ ಸಖರಾಯಪಟ್ಟಣ, ಹಾಸನ ಜಿಲ್ಲೆಯ ಅರಿಸೀಕೆರೆ ತಾಲೂಕಿನ ಬೆಟ್ಟದಾಪುರ ಮುಂತಾದ ಸ್ಥಳಗಳಲ್ಲಿರುವ ದೇವಾಲಯಗಳು ಎತ್ತರವಾದ ಬೆಟ್ಟಗಳಿಂದ ಕೂಡಿದ ದುರ್ಗಮ ಪ್ರದೇಶದಲ್ಲಿವೆ. ಅಲ್ಲದೆ ಆ ಬೆಟ್ಟ ಪರಿಸರದಲ್ಲಿ ಹಲವಾರು ಬಗೆಯ ಸಸ್ಯಗಳು, ನೈಸರ್ಗಿಕ ನೀರಿನ ಆಶ್ರಯ ತಾಣಗಳು ಕಂಡುಬರುತ್ತಿದ್ದು, ಎಲ್ಲ ನೆಲೆಗಳು ಪ್ರಾಚೀನ ಜನವಸತಿಯನ್ನು ಸೂಚಿಸುತ್ತವೆ. ಈ ಸ್ಥಳಗಳಲ್ಲಿ ಸೂಕ್ಷ್ಮ ಕ್ಷೇತ್ರಕಾರ್ಯದ ಅವಶ್ಯಕತೆ ಇದ್ದು, ಇದರಿಂದ ಹೊಸ ವಿಷಯಗಳು ಬೆಳಕಿಗೆ ಬರುವ ಸಾಧ್ಯತೆ ಇದೆ.

ಕ್ಷೇತ್ರಕಾರ್ಯದಲ್ಲಿ ತುಮಕೂರು ಜಿಲ್ಲೆಯ ತುಮಕೂರು ತಾಲೂಕಿನ ಶ್ಯಾಂದೇನಹಳ್ಳಿಯಲ್ಲಿ ವಿಶಾಲ ವ್ಯಾಪ್ತಿಯ ಬೃಹತ್ ಬಂಡೆಗಲ್ಲುಗಳಿಂದ ಕೂಡಿದ ಬೆಟ್ಟದ ಒಳಭಾಗದಲ್ಲಿ ರಂಗನಾಥ ದೇವಾಲಯವಿದ್ದು ಇಲ್ಲಿ ದೇವಾಲಯದ ಮುಂಭಾಗದಲ್ಲಿ ನೂತನ ಶಿಲಾಯುಗದ ಕೈಗೊಡಲಿಗಳನ್ನು ಪೂಜಿಸುವ ಪದ್ಧತಿಯು ಕಂಡುಬಂದಿದೆ. ಜೊತೆಗೆ ಕೈಗೊಡಲಿಗಳು ದೊರೆತಿವೆ. ತುಮಕೂರು ಜಿಲ್ಲೆಯ ಪಾವಗಡ ತಾಲೂಕಿನ ದೇವರಬೆಟ್ಟವು ಬೃಹತ್ ಬಂಡೆಗಳಿಂದ ಕೂಡಿದ ಎತ್ತರವಾದ ಸ್ಥಳವಾಗಿದ್ದು, ಬೆಟ್ಟದ ಮಧ್ಯಭಾಗದಲ್ಲಿ ರಂಗನಾಥ ದೇವಾಲಯವಿದೆ. ಈ ಬೆಟ್ಟದ ಪರಿಸರದಲ್ಲೂ ಅಪಾರ ಪ್ರಮಾಣದ ಮಡಕೆ ಚೂರುಗಳು ಕಂಡುಬರುತ್ತವೆ.

**ಚಾರಿತ್ರಿಕ ಹಿನ್ನಲೆ :**

ಸಮಾಜ ಅಥವಾ ಸಂಸ್ಕೃತಿ ವಿಕಾಸದ ಮೊದಲ ಹಂತದ ಮಾನವ ಯಾವುದೇ ನಿಯಮಿತ ನಿರ್ದಿಷ್ಟ ಸ್ಥಳವನ್ನು ಮತ್ತು ಕ್ರಮವನ್ನು ತನ್ನ ನೆಲೆ ಹಾಗೂ ಜೀವನಕ್ಕೆ ಅನ್ವಯಿಸಿಕೊಂಡಿರಲಿಲ್ಲವೆಂದು ಹೇಳಬಹುದು. ಪ್ರಕೃತಿಯ ಸಹಜ ಸನ್ನಿವೇಶಗಳಾದ ರುದ್ರ, ರಮ್ಯ ಪರಿಸರಗಳೊಟ್ಟಿಗೆ ತನ್ನ ಬದುಕನ್ನು ನಿರ್ವಹಿಸಿ ಹೊರಟ ಮಾನವನ ಆರಂಭಿಕ ಪ್ರಯತ್ನ ಮತ್ತು ಹೋರಾಟಗಳು, ಮುಂದಿನ ಅನೇಕಾನೇಕ ಆಲೋಚನೆ ಮತ್ತು ಅನ್ವೇಷಣೆಗಳಿಗೆ ದಾರಿ ಮಾಡಿಕೊಟ್ಟಿತು. ಪ್ರಕೃತಿಯ ಭೀಕರ ಮತ್ತು ರಮ್ಯ ಕ್ರಿಯೆಗಳ ಸಹಜ ಸೃಷ್ಟಿ ಮತ್ತು ನಿರ್ವಹಣೆ ಪ್ರಾಚೀನ ಮಾನವನಲ್ಲಿ ಆಶ್ಚರ್ಯ, ಕುತೂಹಲ, ಭಯ ಮಿಶ್ರಿತವಾದ ಭಾವನೆಗಳನ್ನು ಮೂಡುವಂತೆ ಮಾಡಿತು. ಹೀಗಾಗಿ ಮಾನವ ತನ್ನ ಜೀವನದಲ್ಲಿ ಪ್ರಕೃತಿಯೊಡನೆ ನಡೆಸಿದ ನಿರಂತರ ಸೆಣಸಾಟದಲ್ಲಿ ಅಗೋಚರ ಶಕ್ತಿಯೊಂದರ ಇರುವಿಕೆಯನ್ನು ಅರಿತು, ಅದನ್ನು ದೇವರೆಂದು ಭಾವಿಸಿದ. ನಂತರ ಅದರ

ಕುರಿತಾದ ಪವಿತ್ರ ಮತ್ತು ಪೂಜಾರ್ಹ ಭಾವನೆಯನ್ನು ಬೆಳಸಿಕೊಂಡು, ಆ ಶಕ್ತಿಯನ್ನು ಒಲಿಸಿಕೊಳ್ಳಬೇಕಾದರೆ ಅದನ್ನು ಆರಾಧಿಸಬೇಕೆಂದು ಕಂಡುಕೊಂಡನು. ತಾನು ಸಾಧಿಸಬೇಕಾದ ಕಾರ್ಯಗಳಿಗೆ ಇಂತಹ ಶಕ್ತಿಯ ಬೆಂಬಲ, ಆಶೀರ್ವಾದ ಅವಶ್ಯ ಎಂದು ಭಾವಿಸಿದ ಕಾರಣ ಆ ಶಕ್ತಿಗೆ ಒಂದು ರೂಪ ನೀಡಿ ಅದನ್ನು ಪ್ರತಿಮೆಯನ್ನಾಗಿ ಪೂಜಿಸುವ ಪದ್ಧತಿ ಆರಂಭಿಸಿಕೊಂಡನು. ಇದು ಆತನ ಆರಾಧನೆಯ ಆರಂಭದ ಹಂತವೆಂದು ಗುರುತಿಸಬಹುದು. ಈ ಹಂತದಲ್ಲಿ ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ ಈ ನಾಲ್ಕು ಘಟ್ಟಗಳನ್ನು ದಾಟಿ ಬಂದಿರುವ ಮಾನವನು ತನ್ನದೇ ಆದ ಸಂಸ್ಕೃತಿಯನ್ನು ಕಟ್ಟಿಕೊಂಡಿದ್ದು, ಅದರಲ್ಲಿ ದೈವದ ಆರಾಧನೆಯು ಒಂದಾಗಿದೆ.

ಪ್ರಸುತ್ತ ರಂಗನಾಥ ಸಂಪ್ರದಾಯದ 'ರಂಗ' ಒಂದು ಕಾಲಘಟ್ಟಕ್ಕೆ ಸೇರಿದವನಲ್ಲ. ಅವನು ಈ ನಾಲ್ಕು ಘಟ್ಟಗಳನ್ನು ತನ್ನದಾಗಿಸಿಕೊಂಡು, ಹಂತ-ಹಂತವಾಗಿ ನಿರಂತರವಾಗಿ ಮುಂದುವರೆಯುತ್ತಾ ಮಹತ್ವವನ್ನು ಪಡೆದುಕೊಂಡಿದ್ದಾನೆ. ಅಷ್ಟೇ ಅಲ್ಲದೆ ಆಯಾ ಕಾಲಘಟ್ಟಕ್ಕೆ ಅನುಗುಣವಾಗಿ 'ರಂಗ' 'ಬೇಟೆ ರಂಗನಾಗಿ', 'ಗವಿರಂಗನಾಗಿ', 'ರಂಗಸ್ವಾಮಿ', 'ರಂಗನಾಥ'ನಾಗಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಹಾಗಾದರೆ 'ರಂಗ' ಅಂದರೆ ಏನು? ಈ 'ರಂಗ' ಪದದ ಅರ್ಥವೇನು? ಎಂದು ಗುರುತಿಸುವಾಗ 'ರಂಗ' ಎಂದರೆ ವೇದಿಕೆ, ಭೂಮಿಕೆ, ಬಣ್ಣ ಬಣ್ಣದ ಪುಡಿಯಿಂದ ರಚಿಸುವ ಚಿತ್ರ ರಂಗಸ್ಥಳ, ರಂಗವೇದಿಕೆ, ರಂಗ ಪೂಜೆ, ರಂಗ ದೇವತಾ ಸ್ಥಳ ಎಂಬ ವಿವಿಧ ಅರ್ಥಗಳನ್ನು ಕನ್ನಡ ನಿಘಂಟುಗಳು ನೀಡುತ್ತವೆ.[೬]

ಪ್ರಸ್ತುತ ಸಂದರ್ಭದಲ್ಲಿ 'ರಂಗ'ವು ಒಂದು ವೇದಿಕೆಯಾಗಿಯೇ ಬಳಕೆಗೊಳ್ಳುತ್ತಿದೆ. ಇಂದು ಪ್ರತಿ ಗ್ರಾಮದಲ್ಲಿಯು ರಂಗಸ್ಥಳ ಇರುವುದು ಕಂಡುಬರುತ್ತದೆ. ಈ ರಂಗಕ್ಕೆ ಸಲ್ಲಿಸುವ ಪೂಜೆಗೆ ರಂಗಪೂಜೆಯೆಂದು, ಈ ಸ್ಥಳದಲ್ಲಿ ಕೂಡಿಸಿರುವ ದೈವಕ್ಕೆ ರಂಗಸ್ಥಳದ ದೈವ, ದೇವರು ಎಂದು ಕರೆಯುವ ಸಂಪ್ರದಾಯವಿದೆ. ಒಟ್ಟಾರೆ 'ರಂಗ' ಪದವು ಒಂದು ನಿರ್ದಿಷ್ಟ ವ್ಯಾಪ್ತಿಯ ನೆಲೆಯನ್ನು ಸೂಚಿಸುವ ಪದವಾಗಿ ಬಳಕೆಗೊಂಡಿದೆ. ಹಾಗಾದರೆ ಈ ಅರ್ಥದ ರಂಗಕ್ಕೂ, ರಂಗನಾಥ ಸಂಪ್ರದಾಯದ ರಂಗನಿಗೂ ಯಾವ ಸಂಬಂಧವಿದೆ? ಎನ್ನುವುದನ್ನು ಕುರಿತು ಯೋಚಿಸುವಾಗ ಪ್ರಸ್ತುತ ಸಂಪ್ರದಾಯದ ರಂಗನೂ ಇದೇ ಮೂಲದಿಂದ ಬಂದ ದೈವವಾಗಿದೆ ಎಂದು ಗುರುತಿಸಬಹುದು. ಈ ಹಿನ್ನಲೆಯಿಂದ ನೋಡಿದಾಗ ರಂಗನ ಮೂಲವನ್ನು ಕಂಡುಕೊಳ್ಳಬಹುದು.

ಪ್ರಾರಂಭದ ಆಹಾರ ಸಂಗ್ರಹಣೆಯ ಮತ್ತು ಬೇಟೆಗೆ ಹೊರಡುವ ಸಂದರ್ಭದಲ್ಲಿ ಆದಿ ಮಾನವನು ಯಾವುದಾದರೂ ಅಪೂರ್ವವಾದ ಕಲ್ಲು ಬಂಡೆಯನ್ನೋ ಅಥವಾ ಸೋಜಿಗವೆನಿಸುವ ಮರವನ್ನೋ ನೋಡಿದರೆ ಆ ದಿನದ ಬೇಟೆ ಯಶಸ್ವಿಯಾದರೆ ತಾನು ನೋಡಿದ ಪದಾರ್ಥಕ್ಕೂ

ಬೇಟೆಯ ಯಶಸ್ವಿಗೂ ನಂಟನ್ನು ಕಲ್ಪಿಸಿಕೊಳ್ಳುತ್ತಿದ್ದುದು ಸಹಜವೇ. ಮುಂದೆ ಬೇಟೆಗೆ ಹೊರಡುವಾಗಲೆಲ್ಲ ಅದೇ ಕಲ್ಲು ಬಂಡೆಯನ್ನು ಅಥವಾ ಅದೇ ಮರವನ್ನು ನೋಡಿಯೇ ಹೊರಡುವ ಹಂಬಲ ಅವನಲ್ಲಿ ಮೂಡುತ್ತಿದ್ದುದು ಆಶ್ಚರ್ಯವಲ್ಲ. ಆ ಕಲ್ಲು ಬಂಡೆ ಅಥವಾ ಆ ಮರ ಅವನ ಪಾಲಿಗೆ ಅನುಕೂಲವಾದ ಶಕ್ತಿ.[೭] ಜೊತೆಗೆ ಬೇಟೆಗೆ ಹೊರಡುವ ಸಂದರ್ಭದಲ್ಲಿ ಯಶಸ್ಸುಗೊಳಿಸಲು, ತನ್ನ ಗುಹೆಯೆದರು ತಾನು ಬೇಟೆಯಾಡಬೇಕೆಂದಿರುವ ಪ್ರಾಣಿಯ ಚಿತ್ರವೊಂದನ್ನು ಸ್ಥೂಲವಾಗಿ ಬರೆದು, ಅದರ ಮೈ ಮೇಲೆ ಬಾಣವೊಂದು ನಾಟಿದಂತೆ ಗುರುತಿಸಿ ಅದು ಮರಣವನ್ನು ಹೊಂದಿದಂತೆ ತೋರಿಸತೊಡಗಿದನು. ಈ ಇಡೀ ಚಿತ್ರದ ಸುತ್ತಲೂ ಒಂದು ಮಂಡಲವನ್ನು ಎಳೆದು ಅದು ಪವಿತ್ರವೆಂದು ಭಾವಿಸಿದನು. ಇದು ಬೇಟೆಗೆ ಪೂರ್ವಸಿದ್ಧತೆ. ಹಾಗೇ ಮಾಡಿ ಹೊರಟರೆ ಗೆಲವು ತಪ್ಪದು ಎಂದು ಅವನ ನಂಬಿಕೆ.[೮]

ಹಾಗಾದರೆ ಈ ಮಂಡಲದ ಅರ್ಥವೇನು? ಅದು ಏನನ್ನು ಸೂಚಿಸುತ್ತದೆ? ಯಾಕೆ ಆತ ಇಡೀ ಚಿತ್ರದ ಸುತ್ತಲೂ ಒಂದು ಮಂಡಲವನ್ನು ಬರೆಯುತ್ತಿದ್ದ? ಪ್ರಸುತ್ತ ಸಂದರ್ಭದಲ್ಲಿ ಗುಂಡು, ಗೋಲ, ಜಗತ್ತು ಎಂಬ ಅರ್ಥವನ್ನು ಪಡೆದ ಮಂಡಲವು[೯] ಬಹುಶ ಆ ಪ್ರಾಣಿಗಳಿಗೆ ಅದೊಂದು ವೇದಿಕೆಯಾಗಿ ಮಾರ್ಪಟ್ಟಿದ್ದಿರಬೇಕು. ಹೀಗಾಗಿ ಈ ಮಂಡಲ ಒಂದು ರಂಗವಾಗಿರಬಹುದು. ಅದು ಒಂದು ನಿರ್ದಿಷ್ಟ ವ್ಯಾಪ್ತಿಯ ಸ್ಥಳವನ್ನು ಸೂಚಿಸುವ ರಂಗ, ವೇದಿಕೆ, ರಂಗಸ್ಥಳವಾಗಿರಬಹುದೆಂದು ಅರ್ಥೈಸಬಹುದು. ಅನಾದಿ ಮಾನವನ ಈ ರಂಗಸ್ಥಳ ಕಲ್ಪಿತ ಪ್ರಾಣಿಗಾಗಿರಬಹುದು ಅಥವಾ ಆ ಮಾನವನು ಕಲ್ಪಿತ ದೈವ ವಸ್ತುವಿಗಾಗಿಯೂ ಇರಬಹುದು. ಒಟ್ಟಿನಲ್ಲಿ ಇದೊಂದು ರಂಗ ಸ್ಥಳದ ದೈವದ ಕಲ್ಪನೆಯನ್ನು ಸೂಚಿಸುತ್ತದೆ. ಹೀಗಾಗಿ ಈ ದೈವವೇ ರಂಗನಾಗಿದ್ದು, ಬೇಟೆ ಹಂತದಲ್ಲಿ ಬೇಟೆರಂಗನಾಗಿ ಕಂಡುಬಂದಿದ್ದು ಆ ಹಿನ್ನಲೆಯಲ್ಲಿಯೇ ನೆಲೆಗೊಂಡಿರುವುದನ್ನು ಕಾಣುತ್ತೇವೆ. ಇಲ್ಲಿಯ ರಂಗನು ನಿರಾಕಾರ. ಅವನ ಸ್ವರೂಪ ಅಮೂರ್ತವಾದುದು. ಯಾವ ಮೂರ್ತಿಶಿಲ್ಪಗಳಿಗೂ, ಕ್ರಮ-ಬದ್ಧತೆಗಳಿಗೂ ಒಳಗಾಗದ ಅವ್ಯಕ್ತ ದೈವ. ಇತನು ನೆಲೆಗೊಂಡ ಪರಿಸರ ಬೃಹತ್ ಬಂಡೆಗಳಿಂದ ಕೂಡಿದ ಗವಿ, ಕಾಡು, ಬೆಟ್ಟ, ಗುಡ್ಡ. ಇಲ್ಲಿ ಕೇವಲ ರಂಗ, ಬೇಟೆರಂಗ ಎಂದು ಕರೆಯುವ ನಾಮ ಒಂದೇ ಆತನ ಅಸ್ತಿತ್ವ

ಪ್ರಸ್ತುತ ಕಾಲಘಟ್ಟದ ರಂಗನಾಥ ಸಂಪ್ರದಾಯದಲ್ಲಿ ರಂಗನು ಮೊದಲ ಹಂತದಲ್ಲಿ ಬೇಟೆರಂಗನಾಗಿಯೇ ನೆಲೆಗೊಂಡಿದ್ದು, ಕರ್ನಾಟಕದಾದ್ಯಂತ ವ್ಯಾಪ್ತಿಯನ್ನು ಪಡೆದುಕೊಂಡಿದ್ದಾನೆ. ಇಲ್ಲಿಯೂ ಆತನು ನೆಲೆಗೊಂಡಿರುವುದು ಬೃಹತ್ ಬಂಡೆಗಳಿಂದಾವೃತವಾದ ಗವಿ, ಬೆಟ್ಟ, ಗುಡ್ಡ, ಕಾಡು ಪ್ರದೇಶದಲ್ಲಿ. ಈ ಸಂಪ್ರದಾಯದ ರಂಗನು ಬೇಟೆರಂಗನಾಗಿಯೇ ನೆಲೆಗೊಳ್ಳುತ್ತಾ ಆರಾಧನೆಗೆ ಒಳಪಟ್ಟಿರುವುದು ಕಾಣುತ್ತದೆ. ಪ್ರಸ್ತುತ ಕರ್ನಾಟಕದ ೨೨ ಜಿಲ್ಲೆಗಳಲ್ಲಿ ಆತನ

ಹೋಗುತ್ತಾರೆ. ನಂತರ ಆ ಪ್ರಾಣಿಯನ್ನು ಕತ್ತರಿಸಿ ಕಾಲು ಭಾಗ ಮಾಂಸವನ್ನು ಒಂದು ಪಾತ್ರೆಯಲ್ಲಿ ಹಾಕಿ ಉಪ್ಪು, ಖಾರ ಮಿಶ್ರಣ ಮಾಡಿ 'ಹುರಿತುಂಡು' ಬೇಯಿಸುವರು. ಮಿಗಕ್ಕೆ ಈಡು ಹೊಡೆದು ಕೊಂದವನು ಅದರ ತೊಡೆ, ತಲೆ, ಒಂದು ಬೀವು, ಐದು ಬದಿ ಜಿಗ್ಗು (ಒಣಗಿದ ಕಡ್ಡಿ) ಇಷ್ಟವನ್ನು ಒಂದು ಬುಟ್ಟಿಯಲ್ಲಿ ತುಂಬಿಸಿ ತಂದು ಫಲ ಕೊಡುವ ಮರದ ಬುಡದಲ್ಲಿರಿಸಿ 'ಬೇಟೆರಂಗನ' ಪೂಜೆಗೆ ಅಣಿಯಾಗುತ್ತಾನೆ. ಅದರ ಸುತ್ತಲೂ ಒಂದು ಹಸುಗೆ (ಚಿತ್ರ) ಬರೆದು ಅಲ್ಲಿ ಒಂದು ಕಲ್ಲನ್ನು ಸ್ಥಾಪಿಸಿ ಅದರ ಎದುರಿಗೆ ತನ್ನ ವಂಶದ ೫ ಕುಲಗಳನ್ನು ಪ್ರತಿನಿಧಿಸುವ ಸಂಕೇತವಾಗಿ ೫ ಜಾತಿಯ ಎಲೆಗಳನ್ನು ಹಾಸಿ, ಒಂದೊಂದು ಎಲೆಗೂ ಉಪ್ಪು ಸವರದೆ ಸುಟ್ಟ ಕರಕಲಕಡ್ಡಿ ತೊಳ್ಳೆಗಳ ತುಂಡನ್ನು ಬಡಿಸುವನು. ಮಾಂಸದ ಬುಟ್ಟಿಯ ಒಂದು ಮಗ್ಗುಲಲ್ಲಿ ಕೋವಿಯನ್ನು ನಿಲ್ಲಿಸಿ ಬೇಟೆಯಾಗುವ ಅವಕಾಶ ಮತ್ತೆ – ಮತ್ತೆ ಬರಲಿ ಎಂದು ಹಾರೈಸುತ್ತ ಧೂಪ ಹಾಕುವನು. ಅವನ ಜೊತೆಯಲ್ಲಿ ಇನ್ನು ಕೆಲವರು ಧೂಪ ಹಾಕುವರು. ಅನಂತರ ಒಂದು ಹುಸಿಈಡು (ಬಾಣ) ಹಾರಿಸಲಾಗುವುದು. ಬೇಟೆರಂಗನ ಪೂಜೆ ಮುಗಿದ ಮೇಲೆ ಎಲ್ಲರೂ 'ಹುರಿತುಂಡು' ಹಂಚಿಕೊಂಡು ತಿನ್ನುವರು. ಮಿಗವನ್ನು ಕೊಂದವನಿಗೆ ಬೇಟೆ ರಂಗನ ಪೂಜೆಗೆ ಉಪಯೋಗಿಸಿದ ಪ್ರಾಣಿಯ ತೊಡೆ, ತಲೆ, ಒಂದು ಬೀವು, ಐದು ಬದಿ ಜಿಗ್ಗು ಮತ್ತು ಹಿಂದಲೆ – ದೊಡ್ಡ ಪಾಲು ಕೊಡುತ್ತಾರೆ. ಹೀಗೆ ಈ ಆಚರಣೆಯು ಅನಾದಿ ಕಾಲದ ಬೇಟೆರಂಗನ ಸಂಸ್ಕೃತಿಯನ್ನು ನೇರವಾಗಿ ಹೋಲುತ್ತದೆ. ಆದರೆ ಅನಾದಿ ಮಾನವ ಬೇಟೆಗೆ ಹೊರಡುವ ಮುನ್ನವೇ ಪ್ರಾಣಿ ಚಿತ್ರವನ್ನು ಕೊರೆದು ಸುತ್ತಲೂ ವೇದಿಕೆಯನ್ನು ರಚಿಸುತ್ತಿದ್ದರು. ಆದರೆ ಇವರು ಪ್ರಸ್ತುತದಲ್ಲಿ ಬೇಟೆ ದೊರೆತ ನಂತರ ಈ ಪದ್ಧತಿಯನ್ನು ಆಚರಿಸುತ್ತಾರೆ. ಇಲ್ಲಿಯ ರಂಗನಿಗೆ ಬ್ಯಾಟೆಮರ ಮುಖ್ಯವಾಗಿ ಬೇಕು. ಕಾರೇ ಗಿಡವನ್ನು ಬ್ಯಾಟೆ ಮರವಾಗಿ ಬಳುಸುವ ಪದ್ಧತಿ, ಮತ್ತೆ ಬ್ಯಾಟೆ ಮರವೆಂದೆ ಕರೆಯುವ ಒಂದು ಬಗೆಯ ಕಾಡಿನ ಗಿಡವನ್ನು ಆಚರಣೆಯಲ್ಲಿ ತಪ್ಪದೇ ಬಳಸುವುದು ಕಂಡುಬರುತ್ತದೆ.[೧೦]

ಮತ್ತೊಂದು ಬಗೆಯ ಆಚರಣೆಯಾದ 'ಬಿಲ್ಲುಗೂಡು' ಸೇವೆ. ಪ್ರಸ್ತುತ ಆಚರಣೆಯು ಕಾಲಕ್ರಮೇಣ ಬದಲಾಗುತ್ತಾ ಶಿಷ್ಟ ಸಂಸ್ಕೃತಿಯನ್ನು ಒಗ್ಗೂಡಿಸಿಕೊಂಡರು ಇದು ಬೇಟೆಯನ್ನು, ಬೇಟೆರಂಗನನ್ನು ಸೂಚಿಸುವ ಸಂಕೇತವಾಗಿದೆ. ಇದು ಹೆಚ್ಚಾಗಿ ಚಿಕ್ಕಮಗಳೂರು ಜಿಲ್ಲೆಯ ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತದೆ. ರಂಗನಾಥ ದೇವಾಲಯದ ಜಾತ್ರೆಯ ಸಂದರ್ಭದಲ್ಲಿ ತಪ್ಪದೇ ಆಚರಿಸುವ ಪದ್ಧತಿಯಾಗಿದೆ. ದೇವಾಲಯದ ಮುಂಭಾಗದಲ್ಲಿ ಒಂದು ಸ್ಥಳವನ್ನು ಗೊತ್ತು ಮಾಡಿಕೊಂಡು ಅಲ್ಲಿ ಎರಡು ದೊಡ್ಡ ಭೂತ ನಾಲಿಗೆಗಳನ್ನು (ಹೆರಿಗೆ) ಇಟ್ಟಿರುತ್ತಾರೆ. ಇವೆರಡರ ಮಧ್ಯೆ ಬಾಣವನ್ನು ನಿಲ್ಲಿಸಿ ಬೇಟೆ ಸೊಪ್ಪು, ಹೊಂಬಾಳೆ ಸೇರಿಸಿ ಕೆಂಪು ಬಟ್ಟೆಯಿಂದ ಭೂತನಾಲಿಗೆಗಳ ಹಿಂಭಾಗದ ಮಧ್ಯಕ್ಕೆ ಗೂಡು ಕಟ್ಟುತ್ತಾರೆ. ನಂತರದಲ್ಲಿ ಬಾಳೆ ಎಲೆಯಲ್ಲಿ

ಅನ್ನ, ಹಾಲು, ಮೊಸರು, ತುಪ್ಪ, ಬೆಲ್ಲ, ಬಾಳೆಹಣ್ಣುಗಳನ್ನು, ಬಾದಾಮಿ, ದ್ರಾಕ್ಷಿ ಒಟ್ಟಿಗೆ ಕಲಿಸಿ ಆ ಎಲೆಯಲ್ಲಿ ದೊಡ್ಡದಾಗಿ ಎಡೆಯನ್ನು ಹಾಕುತ್ತಾರೆ. ನಂತರ ಅದನ್ನು ಎಲ್ಲ ವರ್ಗದವರು ಪ್ರಸಾದವೆಂದು ಹಂಚಿಕೊಳ್ಳುವರು. ಹೀಗೆ ಈ ಆಚರಣೆಯು ಸಂಸ್ಕೃತಿಕರಣದ ಪ್ರಭಾವದಿಂದ ನೇರವಾಗಿ ಪ್ರಾಣಿಯನ್ನು ಬಲಿಕೊಡದೆ ಕೇವಲ ಬಲಿಯ ಸಂಕೇತವಾಗಿ ಭೂತದ ಹರಿಗೆ, ಕೆಂಪು ವಸ್ತ್ರವನ್ನು ಬಳಸುತ್ತಿರುವುದು ಕಂಡುಬರುತ್ತದೆ. ಈ ವಸ್ತುಗಳು ನೇರವಾಗಿ ಅಲ್ಲದಿದ್ದರೂ ಬಲಿಯನ್ನು ಸಂಕೇತಿಸುವ ಗುರುತುಗಳಾಗಿವೆ. ಮಾಂಸಹಾರದ ಬದಲಾಗಿ ಸಸ್ಯಹಾರದ ಎಲ್ಲ ಪದಾರ್ಥಗಳನ್ನು ಎಡೆ ಹಾಕಿ ಹಂಚಿಕೊಂಡು ತಿನ್ನುವ ಆಚರಣೆಯು ಮೂಲ ಬೇಟೆಯನ್ನೇ ಸೂಚಿಸುತ್ತದೆ. ಬೇಟೆರಂಗನ ಬದಲಾಗಿ ಬಿಲ್ಲು ಬಾಣವನ್ನು ಇಟ್ಟಿರುವುದು ಕೂಡ ಬೇಟೆ ರಂಗನನ್ನೇ ಸೂಚಿಸುತ್ತ ಇಂದಿಗೂ ಈ ಜಿಲ್ಲೆಯಲ್ಲಿ ದಟ್ಟವಾಗಿ ಹರಡಿಕೊಂಡಿದೆ.[೧೧]

ಇನ್ನೊಂದು ಬಗೆಯ ಆಚರಣೆಯಾದ 'ಎಡೆ ಇಡುವ ಶಾಸ್ತ್ರ'ದಲ್ಲಿ ಪ್ರಾರಂಭದ ನಾಲ್ಕು ಹಂತದ ಪದ್ಧತಿಗಳು ಗೋಚರಿಸುವುದರ ಜೊತೆಗೆ ಈ ಪದ್ಧತಿಯೂ ಸಂಸ್ಕೃತಿಕರಣಗೊಂಡಿದೆ. ಆದರೂ ಬೇಟೆರಂಗನನ್ನು ಸೂಚಿಸುವ ಪದ್ಧತಿಯಾಗಿ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯವಿರುವ ೨೨ ಜಿಲ್ಲೆಗಳಲ್ಲೂ ವ್ಯಾಪಕವಾಗಿ ಆಚರಣೆಯಲ್ಲಿದೆ. ಎಡೆ ಇಡುವ ಶಾಸ್ತ್ರವು ರಂಗನಾಥ ದೇವಾಲಯದಲ್ಲಿ ಅಥವಾ ಆಯಾ ಭಕ್ತರ ಮನೆಯಲ್ಲೂ ನಡೆಯುವ ಪದ್ಧತಿಯಾಗಿದೆ. ಮೊದಲು ಗೊತ್ತುಪಡಿಸಿದ ಸ್ಥಳವನ್ನು (ನಡುಮನೆಯನ್ನು) ಸ್ವಚ್ಛಗೊಳಿಸಿ, ಮತ್ತೊಮ್ಮೆ ಸಾರಿಸಿ ರಂಗೋಲಿಯನ್ನು ಬಿಡುತ್ತಾರೆ. ರಂಗೋಲಿಯ ಮೇಲೆ ಒಂದು ಬಿಳಿಯ ಬಟ್ಟೆಯನ್ನು ಹಾಸುತ್ತಾರೆ. ಮಡಿಬಟ್ಟೆಯ ಮೇಲೆ ದಾಸಪ್ಪ (ರಂಗನ ಸೇವಕ) ತನ್ನ ದೇವರನ್ನು ಇಡುತ್ತಾನೆ. ಅಂದರೆ ರಂಗನನ್ನು ಸಂಕೇತಿಸುವ ಶಂಖ, ಜಾಗಟೆ, ಭವನಾಸಿ, ಗರುಡಗಂಭ, ಬ್ಯಾಟೆಮರ ಮುಂತಾದ ವಸ್ತುಗಳನ್ನು ತೆಗೆದಿಡುತ್ತಾನೆ. ಆ ದೇವರ ಮುಂದೆ ಬಾಳೆ ಎಲೆ ಹಾಕಿ, ಅದರಲ್ಲಿ ಅಂದಿನ ವಿಶೇಷ ಅಡುಗೆಯನ್ನು ಆಯಾ ಮನೆಯವರು ಬಡಿಸುತ್ತಾರೆ. ನಂತರ ದಾಸಪ್ಪ ಮಂತ್ರವನ್ನು ಹೇಳುತ್ತಾ ದೇವರಿಗೆ ಎಡೆ ಇಡುವನು. ಇಲ್ಲಿಯೂ ಆಯಾ ಭಕ್ತರ ಇಚ್ಛಾನುಸಾರ ಸಸ್ಯಾಹಾರ ಮತ್ತು ಮಾಂಸಾಹಾರ ಪದಾರ್ಥಗಳನ್ನು ಎಡೆ ಇಡುವ ಪದ್ಧತಿಯಿದ್ದು, ಅನೇಕ ಬದಲಾವಣೆಗೆ ಒಳಗಾಗಿದ್ದನು ಸೂಚಿಸುತ್ತದೆ. ಈ ಪದ್ಧತಿಯೂ ಎಷ್ಟೇ ಸಂಸ್ಕೃತಿಕರಣಗೊಂಡರು ಬೇಟೆರಂಗನನ್ನು ಸೂಚಿಸುವುದರಲ್ಲಿ ಕಾಣಿಸಿಕೊಳ್ಳುತ್ತದೆ.[೧೨]

ಮತ್ತೆರಡು ಆಚರಣೆಗಳಾದ 'ದೊಡ್ಡ ಎಡೆ ಸೇವೆ', 'ನೂರೊಂದು ಎಡೆ ಸೇವೆ' ಆಚರಣೆಗಳು ಚಿತ್ರದುರ್ಗ, ತುಮಕೂರು, ಹಾಸನ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು ಮುಂತಾದ ಜಿಲ್ಲೆಗಳಲ್ಲಿ ದೊರೆಯುವ ಎಲ್ಲ ರಂಗನಾಥ ದೇವಾಲಯಗಳಲ್ಲೂ ಕಂಡುಬರುತ್ತವೆ. ಪ್ರಸ್ತುತ ಈ ಆಚರಣೆಗಳು ಸಹ ಪರಂಪರಾನುಗತವಾಗಿ ಬದಲಾಗುತ್ತಾ ಮುಂದುವರೆದಿವೆ.

'ದೊಡ್ಡ ಎಡೆ' ಸೇವೆಯಲ್ಲಿ ವೃತ್ತಾಕಾರದಲ್ಲಿ ಕಲ್ಲು ಹಾಸಿಗೆಯ ಮೇಲೆ ಸಸ್ಯಾಹಾರದ ಪದಾರ್ಥಗಳಾದ ಅನ್ನ, ಮೊಸರು, ಹಾಲು, ತುಪ್ಪ, ಬೆಲ್ಲ, ಬಾಳೆಹಣ್ಣು ಮೊದಲಾದವುಗಳನ್ನೆಲ್ಲ ಸೇರಿಸಿ ದೊಡ್ಡದಾಗಿ ಎಡೆ ಹಾಕುತ್ತಾರೆ. ಇಲ್ಲಿಯೂ ರಂಗನನ್ನು ಪೂಜಿಸಿ ನಂತರ ಎಲ್ಲ ವರ್ಗದವರು ಆ ಎಡೆಯನ್ನು ಹಂಚಿಕೊಂಡು ತಿನ್ನುತ್ತಾರೆ. ಹಾಗೆಯೇ 'ನೂರೊಂದು ಎಡೆ' ಸೇವೆಯಲ್ಲಿಯೂ ಭೂತದ ಹರಿಗೆ, ಬ್ಯಾಟೆ ಸೊಪ್ಪು, ಕಾರೇಗಿಡ, ಬಿಲ್ಲು, ಬಾಣ ಮುಂತಾದ ವಸ್ತುಗಳನ್ನು ದೇವಾಲಯದಲ್ಲಿ ಒಂದು ನಿರ್ದಿಷ್ಟ ಸ್ಥಳವನ್ನು ಗೊತ್ತುಪಡಿಸಿಕೊಂಡು ಸ್ವಚ್ಛಗೊಳಿಸಿ ಪ್ರತಿಷ್ಠಾಪಿಸುತ್ತಾರೆ. ನಂತರ ಆ ಎಲ್ಲ ವಸ್ತುಗಳನ್ನು ಪೂಜಿಸಿ ಅದರ ಮುಂಭಾಗದಲ್ಲಿ ೧೦೧ ಎಡೆ ಹಾಕಲು ಎಲೆಗಳನ್ನು ಹಾಕುತ್ತಾರೆ. ಎಡೆ ಹಾಕಲು ಬಾಳೆ ಎಲೆ, ಮುತಗದ ಎಲೆಗಳನ್ನು ಬಳಸುವುದು ಕಂಡುಬರುತ್ತದೆ. ನಂತರ ಕಾಯಿಚೂರು (ತೆಂಗಿನ ಕಾಯಿ), ಮಂಡಕ್ಕಿ (ಚೂರಮರಿ), ನೆನೆಹಾಕಿದ ಕಡಲೆ, ಬೆಲ್ಲ, ಅಡಕೆ, ಬಾಳೆಹಣ್ಣು ಹೀಗೆ ಎಲ್ಲ ಸಸ್ಯಾಹಾರದ ಪದಾರ್ಥಗಳನ್ನು ಎಡೆಗೆ ಹಾಕುತ್ತಾರೆ. ನಂತರ ಎಲ್ಲ ವರ್ಗದ ಜನಸಮುದಾಯದವರು ಸೇರಿ ರಂಗನನ್ನು ಪೂಜಿಸಿ, ರಂಗನನ್ನು ಸಂಕೇತಿಸುವ ಬಿಲ್ಲು, ಬಾಣಗಳನ್ನು ಪೂಜಿಸುತ್ತಾರೆ. ನಂತರದಲ್ಲಿ ಎಲ್ಲ ವರ್ಗದವರು ಒಂದೊಂದು ಎಡೆಯನ್ನು ಪ್ರಸಾದವಾಗಿ ತೆಗೆದುಕೊಳ್ಳುತ್ತಾರೆ.[೧೩]

ಹೀಗೆ ಇವೆಲ್ಲವುಗಳನ್ನು ಗಮನಿಸಿದಾಗ ಪ್ರಾಚೀನ ಕಾಲಘಟ್ಟದಿಂದಲೂ ಆಚರಣೆಗಳು ಅನೇಕ ರೂಪಾಂತರಗಳನ್ನು ಪಡೆದುಕೊಂಡು, ಬದಲಾಗುತ್ತಾ ಬಂದಿದ್ದರೂ ಅವು ಮೂಲ ಆಚರಣೆಯನ್ನು ಸಂಕೇತಿಸುವ ಸ್ಪಷ್ಟ ಕುರುಹುಗಳನ್ನು ನೀಡುತ್ತವೆ. ಇವು ನೇರವಾಗಿ ಬೇಟೆ ಪರಂಪರೆಯ ಬೇಟೆ ರಂಗನನ್ನು, ಬೇಟೆರಂಗನ ಸಂಸ್ಕೃತಿಯನ್ನು ಸೂಚಿಸುತ್ತವೆ ಎಂದು ಗುರುತಿಸಬಹುದು. ಇದು ಪ್ರಾರಂಭ ಹಂತದ ಆಹಾರ ಸಂಗ್ರಹಣೆಯ ಮತ್ತು ಎರಡನೇ ಹಂತದ ಬೇಟೆರಂಗನ ಸಂಪ್ರದಾಯವಾಗಿದೆ.

ನಂತರ ಕಾಲಘಟ್ಟದಲ್ಲಿ ಆದಿ ಮಾನವ ಬೇಟೆ ಸಂಸ್ಕೃತಿಯ ಹಂತದಿಂದ ರೂಪಾಂತರ ಗೊಳ್ಳುತ್ತಾ ಬುಡಕಟ್ಟು ಪರಂಪರೆಯನ್ನು ಕಟ್ಟಿಕೊಂಡು ಸಾಗಿಬಂದನು. ಈ ಹಂತದಲ್ಲಿ ಗುಂಪು, ಸಮೂಹ, ಬುಡಕಟ್ಟು ಹೀಗೆ ಅನೇಕ ನೆಲೆಗಳಲ್ಲಿ ತಮ್ಮ ಬದುಕನ್ನು ಕಟ್ಟಿಕೊಂಡು ಬುಡಕಟ್ಟು ಪರಂಪರೆಯನ್ನು ಮುಂದುವರೆಸಿದನು. ಇವರಲ್ಲಿ ಸೋಲಿಗರು ಒಬ್ಬರಾಗಿದ್ದು, ಪ್ರಾಚೀನ ಬುಡಕಟ್ಟು ಜನಸಮುದಾಯವಾಗಿದೆ. ಕರ್ನಾಟಕದಲ್ಲಿ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲೂಕಿನ ವ್ಯಾಪ್ತಿಗೆ ಸೇರಿದ ಬಿಳಿಗಿರಿರಂಗನ ಬೆಟ್ಟವು ಸೋಲಿಗರ ಪ್ರಮುಖ ನೆಲೆಯಾಗಿದೆ. ಆದರೆ ಮೊದಲೇ ಈ ನೆಲೆಯಲ್ಲಿ ಯಾವ ಬುಡಕಟ್ಟು ಅಸ್ತಿತ್ವದಲ್ಲಿತ್ತು ಎಂಬುವುದು ಸ್ಪಷ್ಟವಾದ ಮಾಹಿತಿ ದೊರೆಯುವುದಿಲ್ಲ. ಆದರೆ ಇವರು ಬಿಳಿಗಿರಿ ರಂಗನ ಸೋಲಿಗರು ಎಂದು ಕರ್ನಾಟಕದಲ್ಲಿ

ಪ್ರಸಿದ್ಧಿಯನ್ನು ಪಡೆದುಕೊಂಡಿದ್ದಾರೆ. ಆದರೆ ಸೋಲಿಗರಿಗೆ ರಂಗ ಹೇಗೆ ದೈವವಾದ. ಮೂಲತಃ ಬುಡಕಟ್ಟು ಜನಸಮುದಾಯಗಳು ಪ್ರಕೃತಿ ಆರಾಧಕರು. ಈ ಜನರಿಗೆ ಯಾವುದೇ ನಿರ್ದಿಷ್ಟ ಧರ್ಮವಿಲ್ಲ. ಬುಡಕಟ್ಟುಗಳಿಗೆ ಕಾಡೇ ಧರ್ಮ. ಕಾಡಿನ ಗಿಡಮರಗಳೇ ದೇವರು. ಹಾಗಾದರೆ ಬುಡಕಟ್ಟು ಪರಂಪರೆಯಲ್ಲಿ ರಂಗ ಹೇಗೆ ಬಂದು, ತನ್ನ ಸ್ಥಾನವನ್ನು ಪಡೆದುಕೊಂಡನು ಎಂಬುದು ಆಶ್ಚರ್ಯಕರ. ಈವರೆಗೂ ವಿದ್ವಾಂಸರುಗಳೆಲ್ಲರೂ ಇದೇ ಪ್ರಶ್ನೆಯನ್ನೇ ಎತ್ತಿ ಚರ್ಚಿಸಿದ್ದಾರೆ. ಆದರೆ ರಂಗ ಹೇಗೆ ಬುಡಕಟ್ಟು ದೈವವಾದ ಎಂಬುದರ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ, ಜೊತೆಗೆ ಸ್ಪಷ್ಟತೆಯೂ ಇಲ್ಲ ಎಂಬುದು ಗೊತ್ತಾಗುತ್ತದೆ. ಬಹುಶಃ ಅನಾದಿ ಮಾನವನ ಆಹಾರ ಸಂಗ್ರಹಣೆ ಮತ್ತು ಬೇಟೆ ಹಂತದ ರಂಗನೇ ಬುಡಕಟ್ಟು ಹಂತದ ಜನಸಮುದಾಯಗಳಿಗೂ ಬೇಟೆರಂಗನಾಗಿಯೇ ನೆಲೆಗೊಂಡಿರುವುದರಲ್ಲಿ ಸಂಶಯವಿಲ್ಲ. ಕಾರಣ ಬುಡಕಟ್ಟುಗಳು ಮೂಲ ಬೇಟೆ ಮತ್ತು ಕಾಡಿನ ಪರಂಪರೆಯಿಂದಲೇ ಬಂದವರಾಗಿದ್ದಾರೆ. ಹೀಗಾಗಿ ಇವರು ಕೂಡ ರಂಗನ, ಬೇಟೆರಂಗನ ಆರಾಧಕರಾಗಿರಬಹುದು.

ಪ್ರಸ್ತುತ ಬಿಳಿಗಿರಿರಂಗನು ಅದೇ ನೆಲೆಯಲ್ಲಿಯೇ ಹುಟ್ಟಿದನೋ ಅಥವಾ ಬೇರೆ ಕಡೆಯಿಂದ ಬಂದು ನೆಲೆಸಿದವನೋ ಎಂಬುದಕ್ಕೆ ಖಚಿತತೆಯಿಲ್ಲ. ಪ್ರಸ್ತುತ ಅವನು ಬಿಳಿಗಿರಿ ರಂಗನೆಂದು ಪ್ರಚಲಿತಗೊಂಡಿರುವನು. ಈ ಪರಿಸರವು ಸೋಲಿಗರು ದಟ್ಟವಾಗಿ ವಾಸಿಸಿರುವ ನೆಲೆಯಾಗಿದ್ದು, ರಂಗನ ಜೊತೆಗೆ ವ್ಯಾಪಕವಾಗಿ ಗುರುತಿಸಿಕೊಂಡಿದ್ದಾರೆ. ಇವರು ಆತನ ಬಗೆಗೆ ತಮ್ಮದೇ ಆದ ಸಂಬಂಧವನ್ನು ಬೆಸೆದುಕೊಂಡಿದ್ದಾರೆ. ಅಷ್ಟೇ ಅಲ್ಲದೆ ಬಿಳಿಗಿರಿರಂಗ ಬಹು ವಿಸ್ತಾರವಾದ ಜನಪ್ರೀಯತೆಯನ್ನು ಪಡೆದುಕೊಂಡು ಬೆಟ್ಟದಲ್ಲಿ ನೆಲೆಸಿರುವ ಜನಪದರ ದೈವವಾಗಿದ್ದಾನೆ. ಇತನ ಕುರಿತ ಜನಪದ ಕಲ್ಪನೆಯ ಅನೇಕ ಬಗೆಯ ಕಥೆಗಳು, ಕಥನ ಕಾವ್ಯಗಳು ಲಭ್ಯವಿದೆ. ಇದಲ್ಲದೆ ಹೆಂಗಸರ ಹಾಡ್ಗತೆಗಳೂ, ಬಿಡಿ ಗೀತೆಗಳು ಇವೆ. ವೃತ್ತಿ ಗಾಯಕರಲ್ಲಿ ಅದರಲ್ಲೂ ಪ್ರಮುಖವಾಗಿ ನೀಲಗಾರರಲ್ಲಿ ಇಡಿರಾತ್ರಿ ಕಥೆ ಹಾಡುವಷ್ಟು ದೀರ್ಘ ಕಾವ್ಯ ಸಂಪತ್ತಿದೆ. ಇದಕ್ಕೆ ತಮಿಳುನಾಡಿನ ರಂಗಸಂಪ್ರದಾಯವು ಹೊರತಾಗಿಲ್ಲ.

ಅಷ್ಟೇ ಅಲ್ಲದೆ ಇರುಳರು ಕೂಡ ರಂಗನ ಪ್ರಮುಖ ಆರಾಧಕದಲ್ಲಿ ಒಬ್ಬರಾಗಿದ್ದಾರೆ. ಇವರು ತೀರಾ ಹಿಂದುಳಿದ ಜನಾಂಗವಾಗಿದ್ದು ಗುಡ್ಡಗಳಲ್ಲಿ, ಗವಿಗಳಲ್ಲಿ ವಾಸಿಸುತ್ತಿದ್ದ ಜನಾಂಗ. ಮೂಲತಃ ತಮಿಳುನಾಡಿನ ನೀಲಗಿರಿ, ಕೊಯಮತ್ತೂರು, ಉತ್ತರ ಮತ್ತು ದಕ್ಷಿಣ ಆರ್ಕಾಟ ಜಿಲ್ಲೆಗಳಲ್ಲಿ ನೆಲೆಗೊಂಡ ಒಂದು ಜನಾಂಗ. ಇವರು ಕರ್ನಾಟಕದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ, ಮಾಗಡಿ, ಕನಕಪುರ ಹಾಗೂ ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲೂಕು, ಮೈಸೂರು ಜಿಲ್ಲೆಯ ಹುಣಸೂರು ತಾಲೂಕು, ಪಿರಿಯಾಪಟ್ಟಣ ತಾಲೂಕು, ಚಾಮರಾಜನಗರ

ಜಿಲ್ಲೆಯ ಗುಂಡ್ಲುಪೇಟೆ ಮತ್ತು ಕೊಳ್ಳೇಗಾಲ ತಾಲೂಕುಗಳಲ್ಲಿ ಹಾಗೂ ಕೋಲಾರ, ಚಿಕ್ಕಮಗಳೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಮತ್ತು ಕಾವೇರಿ ನದಿ ಬಯಲು ಪ್ರದೇಶಗಳಲ್ಲಿಯೂ ಹರಡಿಕೊಂಡಿದ್ದಾರೆ. ಮೂಲ ಬುಡಕಟ್ಟು ಪರಂಪರೆಯನ್ನು ಹೊಂದಿರುವ ಇವರು ವ್ಯಾಪಕವಾಗಿ ರಂಗನನ್ನು ಪೂಜಿಸುವುದು ಕಂಡುಬರುತ್ತದೆ. ಜೊತೆಗೆ 'ರಂಗಸ್ವಾಮಿ' ಎಂಬ ಹೆಸರಿನಿಂದ ತಾವೇ ನಿರ್ಮಿಸಿಕೊಂಡ ವಿಗ್ರಹಗಳನ್ನಿಟ್ಟುಕೊಂಡು ಪೂಜಿಸುವವರು ಎಂದು 'ನೀಲಗಿರಿಯ ಪ್ರಾಚೀನ ಜನಾಂಗಗಳು' ಎಂಬ ಗ್ರಂಥದಲ್ಲಿ ಬ್ರೀಕ್ಸ್ ಉಲ್ಲೇಖಿಸಿದ್ದಾರೆ.[೧೪] ಅಲ್ಲದೆ ತಮಿಳುನಾಡಿನಲ್ಲಿ ಬಡಗರು ಮತ್ತು ಕೋಟರು ಎಂಬ ಬುಡಕಟ್ಟು ಪರಂಪರೆಯವರು ರಂಗನನ್ನು ಆರಾಧಿಸುವವರಾಗಿದ್ದು, ತಮ್ಮದೇ ಆದ ಹಳ್ಳಿಗಳಲ್ಲಿ ರಂಗಸ್ವಾಮಿ ಬೆಟ್ಟಗಳನ್ನು ಸ್ಥಾಪಿಸಿಕೊಂಡು ಆರಾಧಿಸುವವರಾಗಿದ್ದಾರೆ.

ಹೀಗೆ ಮೂಲ ಬುಡಕಟ್ಟು ಪರಂಪರೆಗಳಲ್ಲಿಯೂ ರಂಗನು ಬಹು ವಿಸ್ತಾರವನ್ನು ಪಡೆದು ನೆಲೆಗೊಂಡಿದ್ದಾನೆ. ಆದರೆ ಮೂಲ ಆಕರಗಳಲ್ಲಿ ಕಾಣುವ ಪ್ರಧಾನ ಅಂಶವೆಂದರೆ ಇಲ್ಲಿಯೂ 'ರಂಗ' ಅವ್ಯಕ್ತ, ಅಮೂರ್ತ ಸ್ವರೂಪವನ್ನೇ ಪಡೆದು ನೆಲೆಗೊಂಡಿರುವನು. ಇವನಿಗೆ ಯಾವುದೇ ಮೂರ್ತಿಯ ಸಂಕೇತವಿಲ್ಲ. ಇಲ್ಲಿಯೂ ಇತನು ನಿರಾಕಾರನಾಗಿದ್ದಾನೆ. ಜೊತೆಗೆ ಬೇಟೆರಂಗನಾಗಿಯೂ, ದೈವವಾಗಿಯು ನೆಲೆಗೊಂಡಿದ್ದಾನೆ.

ನಂತರದ ಅವಧಿಯಲ್ಲಿ ಈ ಸಂಪ್ರದಾಯವು ಬದಲಾವಣೆಗೊಳ್ಳುತ್ತಾ ಮೂರನೆ ಹಂತದ ಪಶುಪಾಲನೆ ಮತ್ತು ನಾಲ್ಕನೇ ಹಂತದ ಕೃಷಿ ಸಂಸ್ಕೃತಿಗೆ ಕಾಲಿರಿಸಿತು. ಪ್ರಸ್ತುತ ಹಂತದಲ್ಲಿಯೂ ರಂಗನಿಗೆ, ಈ ದೈವಕ್ಕೆ ಅಲೌಕಿಕವಾದ ಅರ್ಥವನ್ನು ಕಲ್ಪಿಸದೆ ಆತನನ್ನು ತಮ್ಮ ಸಮೀಪದ ಬಂಧುವೋ ಸಹಚರನೋ ಆಗಿ ಮಾಡಿಕೊಂಡು ಮಾನವ ಸಹಜ ಗುಣಗಳನ್ನು ಆತನಿಗೂ ಆರೋಪಿಸಿ ಆತನ ಮೇಲ್ಮೈ ಕಂಡು ಆತನಿಗೆ ಶರಣು ಹೋಗುವ ಅಥವಾ ಶರಣಾಗತಿ ಭಾವ ಗೋಚರಿಸುತ್ತದೆ. ಈ ಹಿನ್ನಲೆಯಲ್ಲಿ ಇಲ್ಲಿ ರಂಗನನ್ನು, ರಂಗನ ಸ್ವರೂಪವನ್ನು ವಿವೇಚಿಸುವುದಾದರೆ ಇಲ್ಲಿ ರಂಗ ಒಬ್ಬ ಸಾಮಾನ್ಯ ಜನಪದರು ಕಾಣುವ ಒಬ್ಬ ವ್ಯಕ್ತಿ ಹಾಗೂ ದೈವ ವ್ಯಕ್ತಿ. ಇತನ ಸ್ವರೂಪಕ್ಕೆ 'ರಂಗ' ಎನ್ನುವ ನಾಮವೊಂದೇ ಮೂಲ ಆಧಾರ. ಆತನನ್ನು ಸಮೀಪದ ಬಂಧುವೋ, ಸಹಚರನೋ, ಸಂಬಂಧಿಯೋ ಆಗಿ ಮಾಡಿಕೊಂಡಿರುವ ಹಿನ್ನಲೆ ನೋಡಿದಾಗ ಆತನು ಪ್ರಾರಂಭದ ಆಹಾರ ಸಂಗ್ರಹಣೆ ಮತ್ತು ಬೇಟೆ ಸಂಸ್ಕೃತಿಯ ಹಂತವನ್ನು ದಾಟಿ ಮುಂದುವರೆದ ಪಶುಪಾಲಕರ ಹಂತದ ದೈವವಾಗಿ ನೆಲೆಗೊಂಡಿರುವನು. ಮುಖ್ಯವಾಗಿ ಪಶುಪಾಲನೆಯ ಹಂತದ ದೇವತೆಗಳು ದನಕರುಗಳನ್ನು ರಕ್ಷಿಸುವ ಜವಾಬ್ದಾರಿಯನ್ನು ಪ್ರಧಾನವಾಗಿ ಆರಿಸಿಕೊಂಡಂತವುಗಳು. ಹೀಗಾಗಿ ಪಶುಪಾಲಕರು ಈ ಹಂತದ ಎಲ್ಲ ದೈವಗಳನ್ನು ಮುಕ್ತವಾಗಿ ಒಪ್ಪಿಕೊಳ್ಳುವುದರ ಜೊತೆಗೆ ಆ ದೈವಗಳಲ್ಲಿ ಯಾವುದೇ ಭಯ, ಆತಂಕವಿಲ್ಲದೆ ತಮ್ಮವನನ್ನಾಗಿ,

ಆತ್ಮೀಯನನ್ನಾಗಿ ಮಾಡಿಕೊಂಡು ಆತನಿಗೆ ಗೌರವ, ಭಕ್ತಿಯಿಂದ ಶರಣು ಹೋಗಿ ತಮ್ಮ ಅಧಿದೈವವನ್ನಾಗಿ ಮಾಡಿಕೊಂಡಿರುವರು. ಈ ಹಂತದಲ್ಲಿ ಬೇಟೆರಂಗ ಪಶುಪಾಲಕನಾಗಿ ಬದಲಾವಣೆ ಗೊಳ್ಳುತ್ತಾ, ಜನಸಮುದಾಯದಲ್ಲಿ ಪ್ರಭಾವ ಬೀರುತ್ತಾ ಕರ್ನಾಟಕದಲ್ಲಿ ವ್ಯಾಪಕವಾಗಿ ತನ್ನ ನೆಲೆಯನ್ನು ಸ್ಥಾಪಿಸಿಕೊಂಡಿದ್ದಾನೆ. ಹೀಗಾಗಿ ಸುಮಾರು ೨೭೪ ಕ್ಕೂ ಹೆಚ್ಚು ದೇವಾಲಯಗಳು ಕರ್ನಾಟಕದ ೨೨ ಜಿಲ್ಲೆಗಳಲ್ಲಿ ಅಸ್ತಿತ್ವದಲ್ಲಿದ್ದು, ಪಶುಪಾಲಕ ರಂಗನ ಸಂಪ್ರದಾಯವನ್ನು ಸೂಚಿಸುವಲ್ಲಿ ಮೂಲ ಆಕರಗಳಾಗಿವೆ. ಮುಖ್ಯವಾಗಿ ಈ ಹಂತದಲ್ಲಿಯೂ ರಂಗನು ತನ್ನ ಮೂಲ ಬೇಟೆರಂಗನ ಸಂಸ್ಕೃತಿಯನ್ನು ಚಾಚು ತಪ್ಪದೇ ಮುಂದುವರೆಸಿಕೊಂಡು ಮೂರನೇ ಹಂತದ ಪಶುಪಾಲನಾ ಸಂಸ್ಕೃತಿಯ ಆಚರಣೆ, ಸಂಪ್ರದಾಯಗಳನ್ನು ಒಳಗೊಳ್ಳುತ್ತಾ ನಿರಂತರವಾಗಿ ಜನಸಮುದಾಯದಲ್ಲಿ ನೆಲೆಗೊಂಡಿದ್ದಾನೆ. ಜೊತೆಗೆ ಪಶುಪಾಲಕರ ಪ್ರಮುಖ ಆರಾಧ್ಯ ದೈವವಾಗಿದ್ದಾನೆ.

ಈ ಹಂತದಲ್ಲೂ ರಂಗನಾಥ ನಿರಾಕಾರ. ಯಾವುದೇ ಶಿಷ್ಟ ಪರಂಪರೆಯ ಮೂರ್ತ ರೂಪದ ಚೌಕಟ್ಟಿಗೆ ಒಳಪಟ್ಟವನಲ್ಲ. ಇಲ್ಲಿಯೂ ಈತನ ಸ್ವರೂಪ ಅವ್ಯಕ್ತ, ಅಮೂರ್ತ. ಮುಖ್ಯವಾಗಿ ಗವಿ, ಕಲ್ಲಾಸರೆ, ಬೆಟ್ಟ-ಗುಡ್ಡ, ನದಿ, ಹಳ್ಳ-ಕೊಳ್ಳ, ದುರ್ಗಮವಾದ ಪ್ರದೇಶದಲ್ಲಿ ನೆಲೆಗೊಂಡು ಆರಾಧನೆಗೊಳಗಾಗಿದ್ದಾನೆ. ಇಲ್ಲಿ ರಂಗ ಮುಖ್ಯವಾಗಿ ಗವಿ ಮತ್ತು ಬಯಲು ಪ್ರದೇಶಗಳಲ್ಲಿಯೂ ಹುಟ್ಟು ಬಂಡೆ, ಗುಂಡುಕಲ್ಲು, ಉದ್ಭವಕಲ್ಲು, ಬೆಟ್ಟದ ಬಂಡೆ ಹಾಸಿಗೆ ಮುಂತಾದ ರೂಪದಲ್ಲಿ ಪೂಜೆಗೆ ಒಳಪಟ್ಟಿದ್ದು ರಂಗ, ರಂಗಪ್ಪ, ಗವಿರಂಗಪ್ಪ, ರಂಗಯ್ಯ, ರಂಗಸ್ವಾಮಿ ಎಂದು ಮರು ನಾಮಕರಣವನ್ನು ಪಡೆದುಕೊಂಡಿದ್ದಾನೆ. ಪಶುಪಾಲಕರ ಆಹಾರ ಉತ್ಪನ್ನಗಳಾದ ಹಾಲು, ತುಪ್ಪ, ಮೊಸರು, ಬೆಣ್ಣೆ, ಗೀಬುವಿನ ಹಾಲು, ಗಿಣ್ಣು ಇವೆಲ್ಲವುಗಳು ರಂಗಪ್ಪ, ಗವಿರಂಗಪ್ಪನಿಗೆ ಪ್ರೀಯವಾದ ಆಹಾರ. ಇತನ ಪಶುಪಾಲನಾ ಸಂಪ್ರದಾಯವನ್ನು ತಿಳಿದುಕೊಳ್ಳವಲ್ಲಿ ಆತನ ಕುರಿತಾದ ಕಥೆ, ಕಾವ್ಯ, ಐತಿಹ್ಯ, ಆಚರಣೆಗಳೆ ಮೂಲ ಆಕರಗಳಾಗಿವೆ.

'ಹುತ್ತಕ್ಕೆ ಹಸು ಹಾಲು ಕರೆಯುವ' ಐತಿಹ್ಯ, ಬೆಟ್ಟ-ಗುಡ್ಡದ ಮೇಲೆ ಕುರಿಕಾಯುವ ಬಾಲಕನಿಗೆ ರಂಗಪ್ಪನು ದರ್ಶನ ನೀಡುವ ಐತಿಹ್ಯಗಳು ಅನೇಕ ರಂಗನಾಥ ದೇವಾಲಯಗಳಿಗಿರುವುದು ಕಂಡುಬರುತ್ತದೆ. ಆದರೆ ಮುಖ್ಯವಾಗಿ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಸಂತೆ ಬಾಚನಹಳ್ಳಿ - ಕೃಷ್ಣರಾಜಪೇಟೆ ರಸ್ತೆಯಲ್ಲಿರುವ ಬಿಲ್ಲೇನಹಳ್ಳಿ ರಂಗನಾಥ ದೇವಾಲಯದ ಐತಿಹ್ಯವು ಪಶುಪಾಲಕರ ಆರಾಧ್ಯ ದೈವವಾದ ಗವಿರಂಗಪ್ಪನ ಕುರಿತು ಮಾಹಿತಿ ನೀಡುವ ಪ್ರಮುಖವಾದ ಆಕರವಾಗಿದೆ. ಇಲ್ಲಿ ಗವಿರಂಗಪ್ಪ ವ್ಯಕ್ತಿಯಾಗಿ, ಗವಿಯ ಒಡೆಯನಾಗಿ, ಪಶು ರಕ್ಷಣೆಗಾರನಾಗಿ ಅಷ್ಟೇ ಅಲ್ಲದೆ ಪಶುಪಾಲಕರ ಮತ್ತು ದನಗಳ ದೈವ, ಒಡೆಯನಾಗಿ ನೆಲೆಗೊಂಡಿದ್ದಾನೆ.

ಈ ಹಂತದ ಈತನ ಆರಾಧನೆಯು ಆಯಾ ಕಾಲಘಟ್ಟದಲ್ಲಿ ಅಸ್ತಿತ್ವದಲ್ಲಿದ್ದ ಮೈಲಾರ, ಭೈರವ, ಜುಂಜಪ್ಪ, ಮಲೆ ಮಾದೇಶ್ವರ, ಮಂಟೇಸ್ವಾಮಿ, ತಿರುಪತಿ ತಿಮ್ಮಪ್ಪ ಮುಂತಾದ ಬಹುಪಂಥಗಳ

ಸಂಪ್ರದಾಯಗಳಲ್ಲಿ ಒಳಗೊಳ್ಳುತ್ತಾ, ವಿಸ್ತರಿಸುತ್ತಾ ಹೋಗಿದ್ದಾನೆ. ಜೊತೆಗೆ ಆಯಾ ಪಂಥಗಳ ಸಂಪ್ರದಾಯದಲ್ಲಿ, ವಿಧಿ-ವಿಧಾನ, ಆಚರಣೆಗಳಲ್ಲಿ ತಾನು ಮುಕ್ತವಾಗಿ ಪ್ರವೇಶಿಸುತ್ತಾ ಪ್ರಾಮುಖ್ಯತೆಯನ್ನು ಪಡೆದುಕೊಂಡು ಬಹುಸಂಖ್ಯಾತ ಗ್ರಾಮಗಳಲ್ಲಿ ನೆಲೆಗೊಳ್ಳುತ್ತಾ ಬಂದಿದ್ದಾನೆ. ಅಷ್ಟೇ ಅಲ್ಲದೆ ಆ ಸಂಪ್ರದಾಯ ಮತ್ತು ಉಳಿದ ಸಂಪ್ರದಾಯಗಳ ಮತ, ಪಂಥಗಳ ಮೇಲೆ ಪ್ರಭಾವ ಬೀರುತ್ತಾ ವ್ಯಾಪಕವಾಗಿ ಬೆಳೆಯುತ್ತಾ ಬಂದಿರುವ ಸಂಗತಿಗಳು ಕುತೂಹಲವನ್ನುಂಟು ಮಾಡುತ್ತವೆ. ಮೂಲ ಬೇಟೆರಂಗನಾದ ರಂಗಪ್ಪ ಯಾವ ತರಹದ ಹಂಗಿಲ್ಲದೆ ಈ ಹಂತದಲ್ಲೂ ಐತಿಹ್ಯ ಮತ್ತು ಆಚರಣೆಗಳ ನೆಲೆಯಲ್ಲಿ ಬಲಗೊಳ್ಳುತ್ತಾ ಜೊತೆಗೆ ಹೆಚ್ಚಿನ ವ್ಯಾಪಕತೆಯನ್ನು ಪಡೆಯುತ್ತ ಬೆಳೆದು ಬಂದವನಾಗಿದ್ದಾನೆ. ಮುಖ್ಯವಾಗಿ ಈ ಹಂತದ ರಂಗನಾಥ ಸಂಪ್ರದಾಯವು ವಿಸ್ತಾರಗೊಳ್ಳುವ ಬಹು ಮುಖ್ಯ ಪ್ರಕ್ರಿಯೆಯಲ್ಲಿ ಶಿಷ್ಟ ಸಂಪ್ರದಾಯಗಳಿಗೆ ಬಗ್ಗದೇ ಎಲ್ಲ ಕಾಲದಲ್ಲೂ ನಿರಂತರವಾಗಿ ಸಮಾಜದಲ್ಲಿನ ಶಿಷ್ಟ ಮತ್ತು ಪರಿಶಿಷ್ಟ ಪಂಥದವರನ್ನು ತನ್ನ ಭಕ್ತ ವರ್ಗವನ್ನಾಗಿ ರೂಪಿಸಿಕೊಳ್ಳುತ್ತಾ ಬೆಳೆದುಕೊಂಡು ಬಂದಿದೆ. ಹೀಗಾಗಿ ಇತನ ಆರಾಧಕರು ಮುಖ್ಯವಾಗಿ ಪಶುಪಾಲಕ ಮತ್ತು ತಳವರ್ಗದ ಎಲ್ಲ ಜನಸಮುದಾಯಗಳಾಗಿವೆ.

ಮುಖ್ಯವಾಗಿ ಈ ಕುರಿತು ನೋಡುವುದಾದರೆ ಮೂಲತಃ ಬುಡಕಟ್ಟಿನ ಜನರಾಗಿದ್ದ ಕಾಡುಗೊಲ್ಲರು. ಇವರ ಪ್ರಮುಖ ದೈವವಾದ ಜುಂಜಪ್ಪನ ಹಾಗೇ ರಂಗಪ್ಪನು ಇವರಿಗೆ ದೇವತೆಯಾಗಿದ್ದಾನೆ. ಜುಂಜಪ್ಪನ ಸಂಪ್ರದಾಯದಲ್ಲಿ ರಂಗಪ್ಪ ಬೇರೆ ಬೇರೆ ನೆಲೆಗಳಲ್ಲಿ ನೆಲೆಗೊಂಡಿದ್ದು ತನ್ನದೇ ಆದ ಅಸ್ತಿತ್ವ ಮತ್ತು ಸಂಸ್ಕೃತಿಯನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ. ಇಲ್ಲಿ ಜುಂಜಪ್ಪನ ತಾಯಿ ಕಂಬಿಗೊಲ್ಲರ ಚೆನ್ನಮ್ಮ. ಜುಂಜಪ್ಪ ತಾಯಿಯು ತನ್ನ ಮಾತುಗಳನ್ನು ಕೇಳದೆ ಇದ್ದಾಗ ಜುಂಜಪ್ಪನು ತಾಯಿಯ ಮೇಲೆ ಕೋಪಗೊಂಡಿರುತ್ತಾನೆ. ಆಗ ತಾಯಿಯು ಚೇಲೂರು ರಂಗಣ್ಣ, ಮರಡಿ ರಂಗಣ್ಣ, ಸೀರ್‍ಯದ ರಂಗಣ್ಣ ಮೊದಲಾದ ಪ್ರಮುಖರನೆಲ್ಲಾ ಕರೆಯಿಸಿ ನ್ಯಾಯ ದೊರಕಿಸಿಕೊಳ್ಳುವ ಪ್ರಸಂಗದಲ್ಲಿ 'ರಂಗಣ್ಣ' ಒಬ್ಬ ಅಣ್ಣನಾಗಿ ಮಾನವ ಸಹಜ ಸಂಬಂಧಗಳನ್ನು ಪಡೆದುಕೊಂಡಿದ್ದಾನೆ. ಪ್ರಸ್ತುತ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ಈ ೩ ಸ್ಥಳಗಳಲ್ಲಿ ರಂಗನಾಥನ ದೇವಾಲಯಗಳಿವೆ.[೧೫]

ಜುಂಜಪ್ಪನ ಅನೇಕ ಸಾಹಸಗಳಲ್ಲಿ ಮರಡಿ ರಂಗಣ್ಣನಿಗೆ ಬುದ್ಧಿ ಕಲಿಸಿದ ಪ್ರಸಂಗವು, ಚೇಳೂರು ರಂಗನನ್ನು ಸೋಲಿಸಿದ ಪ್ರಸಂಗ, ಜಾನಕಲ್ಲು ದೊಡ್ಡಕ್ಕನಿಗೆ ಬುದ್ಧಿ ಕಲಿಸಿದ ಪ್ರಸಂಗವು ಇವುಗಳಲ್ಲಿ ಜುಂಜಪ್ಪ ತಾನೇ ದೊಡ್ಡವನು, ತನ್ನ ಸ್ಥಾನವೇ ಮಿಗಿಲಾದುದು ಎಂದು ತೋರ್ಪಡಿಸುವುದರ ಜೊತೆಗೆ ಸಾಮರಸ್ಯ ಭಾವನೆಯನ್ನು ಬೆಳೆಸಿಕೊಂಡಿರುವುದರ ಬಗೆಗೆ ವಿವರಗಳು ಸ್ಪಷ್ಟಪಡಿಸುತ್ತವೆ. ಇಲ್ಲಿ ಈ ಎರಡು ದೈವಗಳು ಮೂಲದಲ್ಲಿ ಒಬ್ಬರ ಮೇಲೊಬ್ಬರು ಪ್ರಭಾವ ಬೀರಿದರೂ, ಸಂಘರ್ಷ ಮಾಡಿದರೂ, ಕೊನೆಯಲ್ಲಿ ತಮ್ಮ-ತಮ್ಮ ನೆಲೆಯಲ್ಲಿ ನೆಲೆಗೊಂಡು ತಮ್ಮ ಸಂಪ್ರದಾಯವನ್ನು

ಮುಂದುವರೆಸಿಕೊಂಡಿದ್ದು ಕಂಡುಬರುತ್ತದೆ. ಇದಕ್ಕೆ ರಂಗಪ್ಪ ಹೊರತಾಗಿಲ್ಲ. ಆತನು ಇಲ್ಲಿ ಮುಖ್ಯವಾಗಿ ಪಶುಪಾಲಕರ ದೈವವಾಗಿಯೇ ನೆಲೆಗೊಂಡಿದ್ದಾನೆ.[೧೬]

ಜುಂಜಪ್ಪನ ಮೇಲಿನ ಅಸೂಯೆಯಿಂದ ಅವನ ತಾಯಿ ಕಂಬೇರ ಚೆನ್ನಿಯ ಅಣ್ಣ ತಮ್ಮಂದಿರು ಅಂದರೆ ಸೋದರ ಮಾವಂದಿರು, ಜುಂಜಪ್ಪನನ್ನು ಶಿಕ್ಷಿಸಲು, ಸೋಲಿಸಲು ಮರಡಿ ರಂಗಣ್ಣನನ್ನು ಬೇಡಿಕೊಳ್ಳುತ್ತಾರೆ. ಇಲ್ಲಿ ರಂಗಣ್ಣನು ಶಿಕ್ಷಿಸುವವನು ಆಗಿದ್ದಾನೆ. ಇಲ್ಲಿ ಸೋದರ ಮಾವಂದಿರು ಜುಂಜಪ್ಪನ ದನಗಳನ್ನು ಹಾಳು ಮಾಡಬೇಕಾದರೆ ಏಳು ವರ್ಷದ ಮಳೆ ಕಳೆಯಬೇಕು. ಎಟ್ಟೆಬರ, ಸೋಗೆಬರ, ಡೊಕ್ಕೆಬರ, ಕೆಂಧೂಳಿಬರ ಬರೋಹಾಗೇ ಮಾಡಬೇಕು ಎಂದು ಹೇಳಿ ರಂಗಣ್ಣನಿಗೆ ಏಳು ಜೊತೆ ಎತ್ತುಗಳನ್ನು, ಆರು ಜೊತೆ ಹಾವುಗಳನ್ನು, ಏಳು ಕರಗದ ಹೊನ್ನನ್ನು ಕೊಟ್ಟರು. ಆಗ ಮರಡಿ ರಂಗಣ್ಣನು ಅವರು ಹೇಳಿದಂತೆಯೇ ಮಾಟಮಾಡಿ ಮಳೆಯನ್ನು ಕಳೆದು ಬರ ಬರಿಸಿದ, ಚಿಕ್ಕಹುಲಿಕುಂಟೆ ಕೆರೆ ಒಣಗಿ ನೆಲವೆಲ್ಲಾ ಬೀಳು ಬಿದ್ದಿತು. ಇಲ್ಲಿ ರಂಗಣ್ಣನು ಯಾವುದೇ ರೀತಿಯ ಸಮಸ್ಯೆ, ಸವಾಲುಗಳನ್ನು ಎದುರಿಸಲು ಸಿದ್ಧನಾಗಿ ತನ್ನ ಶಕ್ತಿ, ಮಹಿಮೆಯನ್ನು ಪ್ರದರ್ಶಿಸುವವನಾಗಿದ್ದಾನೆ. ಬಹುಶಃ ಕೆಡಕನ್ನು ಬಯಸದೇ ಇರುವ ದೈವವಾಗಿದ್ದರೂ, ಎಲ್ಲೋ ಒಂದು ಕಡೆ ತಾನು ನೆಲೆಗೊಳ್ಳುವ, ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ತವಕದಲ್ಲಿ ರಂಗಣ್ಣನು ಈ ಕಾರ್ಯ ನಿರ್ವಹಿಸಿರಬೇಕು ಎನ್ನುವುದರಲ್ಲಿ ಸಂಶಯವಿಲ್ಲ. ನಂತರ ಜುಂಜಪ್ಪ ಮೂಡಲಗಿರಿಯ ತಿಮ್ಮಪ್ಪನನ್ನು ಶಾಸ್ತ್ರ ಕೇಳಿಸಿದರೂ ಉಪಯೋಗವಾಗಲಿಲ್ಲ. ಇಲ್ಲಿ ತಿಮ್ಮಪ್ಪನ ಸಂಪ್ರದಾಯವು ಒಳಗೊಂಡಿರುವುದು ಗೋಚರಿಸುತ್ತದೆ. ಇಲ್ಲಿ ಜುಂಜಪ್ಪ, ರಂಗ, ತಿಮ್ಮಪ್ಪ ಸಂಪ್ರದಾಯವು ಒಳಗೊಳ್ಳುತ್ತಾ ಮೂಡಿ ಬಂದಿರುವುದನ್ನು ಕಾಣಬಹುದು. ನಂತರ ಜುಂಜಪ್ಪನು ಮರಡಿ ರಂಗಣ್ಣನನ್ನು ಶಿಕ್ಷಿಸಲು ಮುಂದಾದನು. ಇದಕ್ಕೆ ಹೆದರಿದ ರಂಗಣ್ಣ ತನ್ನ ಏಳು ಜನ ಸೂಳೆಯರನ್ನು ಕಳಿಯಿಸಿ ಚಿಕ್ಕಸಂದ್ರದ ಕೆರೆಯ ಒಬ್ಬೆಯಿಂದ ಏಳು ಹೊರೆ ಬಂದರೆ ಸೊಪ್ಪನ್ನು ತರಿಸಿ, ಅವರಿಂದ ಅದನ್ನು ಅರೆಸಿಕೊಂಡು ಮೈಕೈಗೆಲ್ಲಾ ಮೆತ್ತಿಕೊಂಡು ಮಲಗಿದನು. ಅಲ್ಲದೆ ಆ ಏಳು ಜನ ಸೂಳೆಯರನ್ನು ಜುಂಜಪ್ಪನನ್ನು ತಡೆಯಲು ಕಳುಹಿಸಿದನು. ಆದರೆ ಈ ಅಡೆತಡೆಗಳನ್ನು ಲೆಕ್ಕಿಸದೇ ಜುಂಜಪ್ಪ ಚಿತ್ತಯ್ಯ ಕೊಟ್ಟಿದ್ದ ಚಿಪ್ಪು ಕೊಡಲಿಯನ್ನು ತೆಗೆದು ರಂಗಣ್ಣನ ತಲೆಗೆ ಬಲವಾಗಿ ಹೊಡೆದ. ಇಲ್ಲಿ ಇವರಿಬ್ಬರ ಮಧ್ಯೆ ಸಂಘರ್ಷ, ಘರ್ಷಣೆ ನಡೆದರು ಕೊನೆಗೆ ಇಲ್ಲಿ ಜುಂಜಪ್ಪನೇ ಗೆಲುವುವನ್ನು ಸಾಧಿಸುತ್ತಾನೆ. ಜುಂಜಪ್ಪನ ಮಹಿಮೆಯನ್ನು ಅರಿತ ರಂಗಣ್ಣ ಅವನ ಕಾಲಿಗೆ ಬಿದ್ದು ಕ್ಷಮೆ ಕೇಳಿದನು. ಈ ಮೂಲಕ ರಂಗಣ್ಣನು ಜುಂಜಪ್ಪನ ಜೊತೆ ಸಾಮರಸ್ಯ, ಹೊಂದಾಣಿಕೆ ಮಾಡಿಕೊಂಡಿರುವುದು ಗೊತ್ತಾಗುತ್ತದೆ.[೧೭]

ನಂತರ ಚೇಳೂರು ರಂಗಣ್ಣನ ಕಾವಲಿಗೆ ಬಂದ ಜುಂಜಪ್ಪ ಅಲ್ಲಿ ನೆಲೆಸಲು ಮುಂದಾಗುತ್ತಾನೆ. ಇಲ್ಲಿ ಮೂಲ ನೆಲೆಯಾದ ರಂಗಣ್ಣನ ನೆಲೆಯನ್ನು ಜುಂಜಪ್ಪ ಆಕ್ರಮಿಸಿಕೊಳ್ಳುವುದನ್ನು ಸೂಚಿಸುತ್ತದೆ.

ಕಾರಣ ಇಬ್ಬರೂ ಅವರವರ ಕಾರ್ಯಕ್ಷೇತ್ರವನ್ನು ವಿಸ್ತರಿಸುವ ನೆಲೆಯಲ್ಲಿದ್ದವರಾಗಿದ್ದರು. ಇಲ್ಲಿ ಚೇಳೂರು ರಂಗಣ್ಣ ತನ್ನ ಕಾವಲನ್ನು ಕಾಯಲು ನಾಯಕ ಹುಡುಗರನ್ನು ನೇಮಿಸಿದ್ದರು. ಇಲ್ಲಿ ನಾಯಕ ಅಂದರೆ ಬೇಡ ಪಂಗಡದವರು ಇತನ ಭಕ್ತರಾಗಿದ್ದರು ಎಂಬುವುದು ತಿಳಿದುಬರುತ್ತದೆ. ಈ ಪ್ರಸಂಗದಲ್ಲಿಯು ಸೋಲನ್ನು ಅನುಭವಿಸಿದ ಚೇಳೂರು ರಂಗಣ್ಣ, ಜುಂಜಪ್ಪನನ್ನು ಕಷ್ಟ ಕೊಡಬೇಡ ಎಂದು ಬೇಡಿಕೊಂಡು ಜುಂಜಪ್ಪನ ಹೆಸರಿನಲ್ಲಿ ಮುಡುಪು ಕಟ್ಟಿಟ್ಟ, ಆದರೆ ಜುಂಜಪ್ಪನ ಸೋದರ ಮಾವಂದಿರು ತಮ್ಮ ಸೋಲನ್ನು ಒಪ್ಪದೇ ಮತ್ತೆ ರಂಗಣ್ಣನನ್ನು ಜುಂಜಪ್ಪನ ಜೊತೆ ಪಗಡೆ ಆಡಬೇಕೆಂದು ಒಪ್ಪಿಸುತ್ತಾರೆ. ಇಲ್ಲಿ ರಂಗಣ್ಣ ಜುಂಜಪ್ಪನಿಗೆ ಸವಾಲು ಹಾಕುವ ಮೂಲಕ ತನ್ನ ಮೇಲು ಸ್ಥಾನವನ್ನು ತಿಳಿಸಿಕೊಡುವಲ್ಲಿ ಪ್ರಯತ್ನಿಸಿರುವುದು ಸೂಚಿಸುವಂತಿದೆ. ಜುಂಜಪ್ಪ ಸೋತರೆ ಏಳು ಗೂಡಿನ ಎತ್ತು, ಏಳು ಗೂಡಿನ ಹಾವು, ಮಾರಣ್ಣ, ಬಡಬೈಲು, ಜುಂಜಪ್ಪ ಎಲ್ಲರು ತನ್ನ ವಶವಾಗಬೇಕು. ತಾನು ಸೋತರೆ ನನ್ನ ಕಾವಲು ಕೆಂಬತ್ತಿ ಹೊಲ, ಮೂರು ಖಂಡುಗದ ಅವರೆ ಹೊಲ, ನನ್ನ ಹೆಂಡಿರು, ಮಕ್ಕಳು ಮತ್ತು ನನ್ನನ್ನು ಜುಂಜಪ್ಪನಿಗೆ ಒಪ್ಪಿಸುತ್ತೇನೆ ಎಂದು ಚೇಳೂರು ರಂಗಣ್ಣ ಷರತ್ತು ಹಾಕಿದಾಗ ಅವರವರ ಕಾರ್ಯಕ್ಷೇತ್ರ, ಅವರನ್ನು ಸೂಚಿಸುವ ವಸ್ತುಗಳು ತಿಳಿದುಬರುತ್ತವೆ. ಜೊತೆಗೆ ಆ ದೈವಗಳ ಒಪ್ಪಿಕೊಳ್ಳುವ ಮೂಲಕ ಆಯಾ ದೈವದ ಒಕ್ಕಲುಗಳನ್ನಾಗಿ ಮಾಡಿಕೊಳ್ಳುವ ಕ್ರಿಯೆಯು ಇಲ್ಲಿ ನಡೆದಿರುವುದನ್ನು ತಿಳಿಸುತ್ತದೆ. ಇಲ್ಲಿಯೂ ಜುಂಜಪ್ಪನೇ ಮೇಲುಗೈ ಸಾಧಿಸಿ, ತನ್ನ ಮಹಿಮೆಯಿಂದ ಚೇಳೂರನ್ನು ಆಕ್ರಮಿಸಿಕೊಂಡಿದ್ದರೂ, ಮರಳಿ ಚೇಳೂರನ್ನು ರಂಗಣ್ಣನಿಗೆ ಬಿಟ್ಟುಕೊಟ್ಟಿದ್ದು ಇವರಿಬ್ಬರ ಮಧ್ಯದ ಸಾಮರಸ್ಯದ ಸಂಕೇತದ ಕುರುಹುವಾಗಿದೆ.[೧೮]

ಜುಂಜಪ್ಪ ಜಾನಕಲ್ಲು (ಚಿತ್ರದುರ್ಗ ಜಿಲ್ಲೆ) ದೊಡ್ಡಕ್ಕನಿಗೆ ಬುದ್ಧಿ ಕಲಿಸುವ ಸನ್ನಿವೇಶದಲ್ಲಿ ಸೀರ‍್ಯಾದ ರಂಗಣ್ಣನನ್ನು ಜಾನಕಲ್ಲು ದೊಡ್ಡಕ್ಕ ತನ್ನವನನ್ನಾಗಿ ಮಾಡಿಕೊಂಡಿರುವ ಪ್ರಸಂಗದಲ್ಲಿ ಸ್ಥಳೀಯ ಸ್ತ್ರೀದೈವದ ಜೊತೆ ರಂಗಣ್ಣನು ಅನೈತಿಕ ಸಂಬಂಧವನ್ನು ಬೆಳೆಸಿಕೊಂಡು ಬಂದಿದ್ದನು ಸೂಚಿಸುತ್ತದೆ. ಇಲ್ಲಿ ರಂಗಣ್ಣನು ಸೀರ‍್ಯದ ರೈತರಿಂದ ಏಳು ವರ್ಷದ ಕಂದಾಯವನ್ನು ವಸೂಲಿ ಮಾಡುವವನಾಗಿದ್ದು ಕೃಷಿ ದೈವವಾಗಿ ನೆಲೆಗೊಂಡಿದ್ದಾನೆ. ಮತ್ತೆ ಇಲ್ಲಿ ಸೀರ‍್ಯದ ರಂಗಣ್ಣ ದೊಡ್ಡಕ್ಕನ ಪರವಾಗಿ ದಂಡು ಕಟ್ಟಿಕೊಂಡು ಜುಂಜಪ್ಪನ ಮೇಲೆ ಯುದ್ಧಕ್ಕೆ ಬಂದಿದ್ದರೂ ಕೊನೆಗೆ ಜುಂಜಪ್ಪನೆ ಗೆಲ್ಲುತ್ತಾನೆ. ಕೊನೆಗೆ ಜುಂಜಪ್ಪ ರಂಗಣ್ಣನಿಗೆ ಬುದ್ಧಿ ಹೇಳಿ ಸಾಮರಸ್ಯವನ್ನು ಮೆರೆದಿದ್ದಾನೆ.[೧೯]

ಅಲ್ಲದೆ ಇದೇ ಮೂಲದಿಂದ ಬಂದಂತಹ ಮ್ಯಾಸಬೇಡರು ಕೂಡ ರಂಗಣ್ಣನ ಆರಾಧಕರಾಗಿದ್ದು, ಇವರ ಸಾಂಸ್ಕೃತಿಕ ವೀರರಾದ ಜಗಳೂರು ಪಾಪನಾಯಕ ಮತ್ತು ಗಾದರಿಪಾಲ ನಾಯಕ

ಇಬ್ಬರೂ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಚಿಕ್ಕುಂತಿ ಕಂಪಳ ರಂಗಸ್ವಾಮಿ ಶಿಷ್ಯರೆಂದು ಹೇಳುವ ಸಂಪ್ರದಾಯವಿದೆ. ಇವರು ರಂಗಣ್ಣನನ್ನು ಬಹುವಿಧದಲ್ಲಿ ಆರಾಧಿಸುವ, ಅವನಿಗೂ ಒಂದು ನೆಲೆಯನ್ನು ನೀಡಿರುವುದು ಈ ಪರಂಪರೆಯು ಮ್ಯಾಸಬೇಡರ ಸಂಪ್ರದಾಯದಲ್ಲಿ ಕಂಡುಬರುತ್ತದೆ. ಇವೆಲ್ಲವು ಪಶುಪಾಲನೆ ಹಂತದಲ್ಲಿ ರಂಗಪ್ಪ, ಗವಿರಂಗಪ್ಪ ನೆಲೆಗೊಂಡಿರುವ ಸ್ಪಷ್ಟ ಗುರುತುಗಳಾಗಿ ಕಾರ್ಯನಿರ್ವಹಿಸುತ್ತವೆ.

ಮಧ್ಯಕಾಲೀನ ಸಂದರ್ಭದಲ್ಲಿ ಪಶುಪಾಲಕನಾಗಿ ನೆಲೆಗೊಂಡಿರುವ ರಂಗಪ್ಪ, ಗವಿರಂಗಪ್ಪ ಪ್ರಬಲವಾಗಿ ನೆಲೆಗೊಂಡಿರುವ ಶೈವ ಮತ್ತು ವೈಷ್ಣವ ಧರ್ಮಗಳ ನಡುವೆ ಹುಟ್ಟಿಕೊಂಡ ಸಂಘರ್ಷ, ಸಾಮರಸ್ಯ, ಅವುಗಳ ಪ್ರಭಾವ ಮತ್ತು ಪರಿಣಾಮಗಳಿಗೆ ಇತನು ಹೊರತಾಗಿರಲಿಲ್ಲ. ಯಾವುದೇ ಒಂದು ನಿರ್ದಿಷ್ಟ ಧರ್ಮದ ಚೌಕಟ್ಟಿಗೆ ಒಳಗಾಗದ ಅಥವಾ ಹುಟ್ಟಿಕೊಳ್ಳದ ಪ್ರಾರಂಭ ಹಂತದ ಬೇಟೆರಂಗ ಸಂಪ್ರದಾಯವು ಇಲ್ಲಿ ಶೈವ ಮತ್ತು ವೈಷ್ಣವ ಧರ್ಮದ ಅಂಶಗಳನ್ನು ಒಳಗೊಳ್ಳುತ್ತಾ ಒಂದು ನಿರ್ದಿಷ್ಟ ಪಂಥ, ಧರ್ಮವನ್ನು ಸೂಚಿಸುವ ಗಟ್ಟಿತನ, ಒಡೆತನ, ಮುಂದಾಳತ್ವವನ್ನು ಪಡೆದುಕೊಳ್ಳುವ ಪ್ರಕ್ರಿಯೆಗೆ ಒಳಗಾಗುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಅಸ್ತಿತ್ವದಲ್ಲಿರುವ ಶೈವ ಧರ್ಮವನ್ನೇ ಸೂಚಿಸುವ ಮಲೆ ಮಾದೇಶ್ವರ, ಮೈಲಾರ, ಭೈರವ ಪಂಥಗಳಲ್ಲಿಯೂ ಈ ಗವಿರಂಗಪ್ಪ ಅನೇಕ ಅಂಶಗಳನ್ನು ಒಳಗೊಳ್ಳುತ್ತಾ ಅವರೊಂದಿಗೆ ಸಾಮರಸ್ಯವನ್ನು ಬೆಸೆದುಕೊಂಡಿದ್ದಾನೆ. ಇಲ್ಲಿ ಯಾವುದೇ ಧರ್ಮಕ್ಕೂ ಅಂಟಿಕೊಳ್ಳದೇ ತನ್ನ ಸ್ಥಾನವನ್ನು ತನ್ನತನವನ್ನು ಉಳಿಸಿಕೊಂಡು ಎರಡು ಧರ್ಮಗಳಲ್ಲಿಯೂ ಧರ್ಮ ಸಮನ್ವಯ ಪಡೆದುಕೊಂಡು ನೆಲೆಗೊಂಡವನಾಗಿದ್ದಾನೆ. ಜೊತೆಗೆ ಈ ಸಂದರ್ಭದಲ್ಲಿ ಪ್ರಬಲವಾಗಿ ಪ್ರಚಾರದಲ್ಲಿದ್ದ ವೈಷ್ಣವ ಧರ್ಮವು ಗವಿರಂಗಪ್ಪನನ್ನು ತನ್ನವನನ್ನಾಗಿಸಿಕೊಂಡ ಸಂದರ್ಭವು ಕುತೂಹಲವನ್ನು ಉಂಟು ಮಾಡುವುದರ ಜೊತೆಗೆ ಗಮನಾರ್ಹವಾದ ಮಹತ್ವದ ವಿಷಯವಾಗಿದೆ.

ಇಲ್ಲಿ ಮತ್ತೊಂದು ಗಮನಾರ್ಹವಾದ ವಿಷಯವೆಂದರೆ ಮೂಡಲಗಿರಿಯ ತಿಮ್ಮಪ್ಪನು ಅಂದರೆ ತಿರುಪತಿ ತಿಮ್ಮಪ್ಪನ ಸಂಪ್ರದಾಯ. ಇತನು ಕಾಡಿನ ಮೂಲದವನು. ಈತನ ಹುಟ್ಟು ಅಗೋಚರ. ಕಣ್ಣಿಗೆ ಕಾಣದ್ದು. ಆದರೆ ಈತನು ವೇಗವಾಗಿ ಪ್ರಬಲವಾಗಿ ವೈಷ್ಣವೀಕರಣಗೊಂಡ ಬಗೆ ಕುತೂಹಲವಾದುದು. ಯಾಕೆ ಎಂಬುದಕ್ಕೆ ಸ್ಪಷ್ಟ ಉತ್ತರವಿಲ್ಲ. ಬಹುಶಃ ಶೈವ ಮತ್ತು ವೈಷ್ಣವ ಧರ್ಮಗಳ ತಿಕ್ಕಾಟ, ಸಂಘರ್ಷಗಳು ಈ ಬಗೆಯ ಪಂಥ, ಸಂಪ್ರದಾಯಗಳ ಹುಟ್ಟು, ಬೆಳವಣಿಗೆಗೆ ಏನಾದರೂ ದಾರಿ ಮಾಡಿಕೊಟ್ಟಿವೀಯಾ ಎಂಬ ಪ್ರಶ್ನೆ ಹುಟ್ಟುತ್ತದೆ. ಏಕೆಂದರೆ ಶೈವ ಧರ್ಮವನ್ನೇ ಸೂಚಿಸುವ ಮೈಲಾರ, ಭೈರವ, ಮಲೆಮಾದೇಶ್ವರ ಪಂಥಗಳ ಹುಟ್ಟು, ಬೆಳವಣಿಗೆ, ವಿಸ್ತಾರಗಳು ಬಹುಶಃ ವೈಷ್ಣವ ಧರ್ಮವನ್ನು ಸ್ಪರ್ಧೆಗೆ ಒಳಪಡಿಸಿರಬೇಕು. ಹೀಗಾಗಿ ವೈಷ್ಣವ ಧರ್ಮ ಈ ನಿಟ್ಟಿನಲ್ಲಿ ಕೆಲಸವನ್ನು ಆರಂಭಿಸಿರಬೇಕು. ಇದರ ಬೇರುಗಳು ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ

ತಮಿಳುನಾಡಿನಲ್ಲಿಯೂ ಆಳವಾಗಿ ಬೇರುರಿರುವುದು ಕಾಣುತ್ತದೆ. ಪರಿಣಾಮವಾಗಿ ವೈಷ್ಣವ ಧರ್ಮ ಯಾವ ವರ್ಗಕ್ಕೂ ಸೇರದ ಅನಾಥವಾದ ಈ ಕಾಡಿನ ಮೂಲದಿಂದ ಬಂದ ದೈವಗಳಾದ ತಿಮ್ಮಪ್ಪ, ರಂಗಪ್ಪನನ್ನು ತನ್ನತ್ತ ಒಳಗು ಮಾಡಿಕೊಂಡು ತನ್ನಲ್ಲಿ ಒಂದು ನೆಲೆಯನ್ನು ನೀಡಿದ್ದಲ್ಲದೇ, ತನ್ನ ಧರ್ಮದ ವಿಸ್ತಾರ ವ್ಯಾಪ್ತಿಯಲ್ಲಿಯೇ ವಿಶಾಲವಾಗಿ, ಬಹುವ್ಯಾಪಕವಾಗಿ ಬೆಳೆಯುವಲ್ಲಿ ಸಹಾಯ ಮಾಡಿತು. ಅಷ್ಟೇ ಅಲ್ಲದೆ ಶಿಷ್ಟ ಪರಂಪರೆಯಿಂದ ಬಂದ ವೈಷ್ಣವ ಧರ್ಮ ಎಲ್ಲ ವರ್ಗದ ಜನಸಮುದಾಯಗಳನ್ನು ತನ್ನ ಭಕ್ತರನ್ನಾಗಿ ಮಾಡಿಕೊಂಡಿರುವುದು ಆಶ್ಚರ್ಯವೆನಿಸುತ್ತದೆ. ಹೀಗಾಗಿ ಈ ಸಂದರ್ಭದಲ್ಲಿ ಶೈವ ಧರ್ಮದ ವಿವಿಧ ಪಂಥಗಳ ಜೊತೆ ವೈಷ್ಣವ ಧರ್ಮದ ಪಂಥಗಳಂತೆ ತಿರುಪತಿ ವೆಂಕಟೇಶ್ವರ ಸಂಪ್ರದಾಯವು ಹುಟ್ಟಿ ಇತನ ಮೂಲಕ ಗವಿರಂಗನನ್ನು ವೈಷ್ಣವ ಧರ್ಮ ಪ್ರಭಾವಿಯಾಗಿ ತನ್ನ ತೆಕ್ಕೆಗೆ ತೆಗೆದುಕೊಳ್ಳುವಲ್ಲಿ ಸಹಾಯ ಮಾಡಿತು. ಒಂದು ಹಂತದಲ್ಲಿ ಈ ಕಾಲಘಟ್ಟ ತಿಮ್ಮಪ್ಪ ಮತ್ತು ರಂಗಪ್ಪ ಇಬ್ಬರು ವೈಷ್ಣವ ಧರ್ಮದ ಅಡಿಯಲ್ಲಿ ಬರುವ ಸಂದರ್ಭವನ್ನು ಸೃಷ್ಟಿಮಾಡಿಕೊಟ್ಟಿತ್ತಲ್ಲದೆ, ಜೊತೆ ಜೊತೆಗೆ ತಮ್ಮ ನೆಲೆಯಲ್ಲಿ ಸಾಗುವಂತೆ ಮಾಡಿತು.

ಪ್ರಸಿದ್ಧ ಜನಪದ ದೈವವಾದ ಮೈಲಾರನಿಗೆ ಸಂಬಂಧಿಸಿದ ಕಥೆ, ಮತ್ತು ಆಚರಣೆಗಳಲ್ಲಿ ರೂಪಾಂತರ ಪಡೆದುಕೊಂಡು ಪ್ರಸ್ತುತ ಅವು ರಂಗನಾಥನ ಸಂಪ್ರದಾಯದಲ್ಲಿಯೂ ಆಚರಿಸಲ್ಪಡುತ್ತಿವೆ. ರಡ್ಡೇರ ನೀಲಮ್ಮನ ಪದದಲ್ಲಿ ಅವಳಿಗೆ ಬುದ್ಧಿ ಕಲಿಸಬೇಕೆಂದು ಮೈಲಾರಲಿಂಗ ತಾಳಿದ ಗೊರವನ ವೇಷ, ಹಾಗೇ ರಂಗನು ದಾಸಯ್ಯನ ವೇಷವನ್ನು ತಾಳುವಂತ, ಮೈಲಾರಲಿಂಗ ತನ್ನ ಮದುವೆಗಾಗಿ ತಿರುಪತಿ ತಿಮ್ಮಪ್ಪನಲ್ಲಿ ಏಳು ಕೋಟಿ ಸಾಲಮಾಡುವ ಪ್ರಸಂಗ, ಹಾಗೇ ರಂಗನು ಜುಂಜಪ್ಪನ ಸೋದರ ಮಾವನ ಹತ್ತಿರ ಏಳು ಕರಗದ ಹೊನ್ನನ್ನು ಸಾಲವಾಗಿ ಪಡೆಯುವಂತ ಪ್ರಸಂಗಗಳು ಹೆಚ್ಚು ಕಡಿಮೆ ಒಂದೇ ಹೋಲಿಕೆಯನ್ನು ಹೋಲುವಂತವುಗಳಾಗಿವೆ. ಅಲ್ಲದೆ ಮೈಲಾರನ ಗೊರವರಿಗೂ ಯಾವುದೇ ಜಾತಿ ಭೇದವಿಲ್ಲ. ಯಾವ ಜಾತಿಯವರೂ ಗೊರವರಾಗಬಹುದು. ಹಾಗೇಯೇ ದಾಸಯ್ಯನಾಗಲು ಯಾವ ಜಾತಿಯವರ ಅವಶ್ಯಕತೆಯೂ ಇಲ್ಲ. ಮೈಲಾರ ಕೋಮಾಲಿಯನ್ನು ತರಲು ಚಂದ್ರಗಿರಿ ಪಟ್ಟಣಕ್ಕೆ ಬಂದದ್ದು, ಅಲ್ಲಿ ಕುಳ್ಳಿಗೆ ಬಂದವರ ಹತ್ತಿರ ಅವಳಿಗೆ ಸೋದರ ಭಾವನಾಗಬೇಕೆಂದಿರುವ ಪ್ರಸಂಗಗಳಿಗೂ ಬಿಳಿಗಿರಿರಂಗ ಸೋಲಿಗರ ಕುಸುಮಾಲೆಯನ್ನು ಮೋಹಿಸಿ ಮಾಯದಿಂದ ಕರೆದುಕೊಂಡು ಬರುವ, ಅಲ್ಲದೆ ಮೈಲಾರಲಿಂಗನ ವಾಹನವಾದ ಬಿಳಿಕುದುರೆಯ ಹಾಗೇ ಬೇಟೆರಂಗನಾಥನು ಬಿಳಿಕುದುರೆಯನ್ನು ವಾಹನವಾಗಿ ಮಾಡಿಕೊಂಡಿರುವ ಸನ್ನಿವೇಶಗಳಿಗೆ ಬಹಳಷ್ಟು ಸಾಮ್ಯತೆ ಇದೆ. ದಕ್ಷಿಣ ಕರ್ನಾಟಕದಲ್ಲಿ ಪ್ರಚಲಿತವಿರುವ ಪಾಠ ಅನನ್ಯ ಸುಂದರವಾದುದು. ಇಲ್ಲಿನ ಮೈಲಾರ ಕಳ್ಳನಲ್ಲ, ಸುಳ್ಳನಲ್ಲ, ಗಾಡ ಪ್ರೇಮಿ. ಒಲಿದವಳನ್ನು ಹೇಗಾದರೂ ಕೊಂಡೊಯ್ಯಬೇಕೆನ್ನುವ ತೀವ್ರ ಆಸೆ ಉಳ್ಳವನು. ಇದಕ್ಕೆ

ಸೋಲಿಗರ ಬಿಳಿಗಿರಿ ರಂಗನು ಹೊರತಾಗಿಲ್ಲ. ಮೈಲಾರನು ಕೂಡ ಬೇಟೆ ನಾಯಿಗಳೊಂದಿಗೆ ಬೇಟೆಯಾಡಲು ಕಾಡಿಗೆ ಹೋಗುವವನಾಗಿದ್ದು, ಅಲ್ಲದೆ ಕೆಲವು ವಿವರಗಳಲ್ಲಿ ಮೈಲಾರ ರಾತ್ರಿ ತನ್ನ ವೇಶ್ಯಯರ ಮನೆಗೆ ಹೋಗುವವನು ಎಂಬ ಹಿನ್ನಲೆಯಲ್ಲಿ ದೇವಾಲಯದ ಮುಂದೆ ಚರ್ಮದ ಪಾದರಕ್ಷೆ ಇಟ್ಟು ಪೂಜಿಸುವ ಪದ್ಧತಿಯು ಪ್ರಸ್ತುತ ರಂಗನಾಥ ಸಂಪ್ರದಾಯದ ದೇವಾಲಯಗಳಲ್ಲಿಯೂ ಇದೇ ಉದ್ದೇಶದ ಹಿನ್ನಲೆಯಲ್ಲಿ ಆಚರಣೆಯಲ್ಲಿದೆ. ಉದಾಹರಣೆಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಬಾದಾಮಿ ರಂಗನಾಥ ದೇವಾಲಯ, ತಮ್ಮಿನಾಳಿನ ರಂಗನಾಥ ದೇವಾಲಯ, ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲೂಕಿನ ಹಂಪನೂರ ರಂಗನಾಥ ದೇವಾಲಯ, ಹಾಗೂ ಚಾಮರಾಜನಗರ ಜಿಲ್ಲೆಯ ಯಳಂದೂರ ತಾಲೂಕಿನ ಬಿಳಿಗಿರಿ ರಂಗನ ದೇವಾಲಯದಲ್ಲಿ ಪ್ರಸ್ತುತ ಇದೇ ಪದ್ಧತಿಯು ಆಚರಣೆಯಲ್ಲಿದೆ. ಅಲ್ಲದೆ ಪ್ರತಿ ವರ್ಷ ಹೊಸದಾಗಿ ಚರ್ಮದ ಚಪ್ಪಲಿಗಳನ್ನು ಮಾಡುವ ಪದ್ಧತಿಯೂ ಕೂಡ ಒಂದೇ ತೆರನಾಗಿದೆ.

ಕಾಡು, ಕುಲ, ನಿಸರ್ಗ, ಪ್ರಾಣಿವರ್ಗ ಎಲ್ಲವೂ ಮೈಲಾರನ ಬದುಕಿನೊಂದಿಗೆ ತಳಕು ಹಾಕಿಕೊಂಡಿದ್ದು ರಂಗಪ್ಪನು ಈ ನೆಲೆಯಲ್ಲಿಯೇ ನೆಲೆಗೊಂಡಿದ್ದಾನೆ. ಮೈಲಾರನ ದೋಣಿ ಸೇವೆ ಆಚರಣೆಯಲ್ಲಿ ದೋಣಿ ತುಂಬಿಸುವ ಪ್ರಕ್ರಿಯೆಯಲ್ಲಿ ಬಳಸುವ ಹಾಲು, ತುಪ್ಪ, ಸಕ್ಕರೆ, ಬೆಲ್ಲ, ಬಾಳೆಹಣ್ಣು ಮುಂತಾದ ಪದಾರ್ಥಗಳು, ಜೊತೆಗೆ ಈ ಸಂದರ್ಭದಲ್ಲಿ ಗೊರವ ಮಾಡುವ ಸಹಾಯ ರಂಗನಾಥ ಸಂಪ್ರದಾಯದ ಆರಾಧನೆಯಲ್ಲಿ ದಾಸಯ್ಯ ಗೋಪಾಳ ತುಂಬುವ ಕ್ರಿಯೆಯನ್ನು ನೆನಪಿಸುತ್ತದೆ. ಇಲ್ಲಿ ಗೊರವರು ದೋಣಿಯ ಪ್ರಸಾದವನ್ನು ತಿನ್ನಲು ನಾಯಿಯ ಹಾಗೆಯೇ ನಡೆಸುವ ಪೈಪೋಟಿಯು ರಂಗನ ದೊಡ್ಡ ಎಡೆ, ಮಣೇವು ಸಂದರ್ಭದಲ್ಲಿ ಹಾಕಿದ ಎಡೆ ತಿನ್ನುವ ಸಂದರ್ಭದಲ್ಲಿಯೂ ಇದೇ ರೀತಿಯ ಕ್ರಿಯೆ ನಡೆಯುತ್ತದೆ. ಜೊತೆಗೆ ದೊಡ್ಡ ಪಾದುಕೆಗಳ ಪೂಜೆ, ಯುದ್ಧ ಅನುಕರಣೆ ಮಾಡುವ ಕಡುಬಿನ ಕಾಳಗ, ಶಸ್ತ್ರ ಪವಾಡ, ಹುಲಿ ಬೇಟೆ ಬಾಣ, ಚಾವಟಿ ಸೇವೆ, ಮಣೇವು ಹಾಕುವುದು, ಉರುಳು ಸೇವೆ ಹೀಗೆ ಎಲ್ಲ ಆಚರಣೆಗಳಲ್ಲೂ ಹೋಲಿಕೆ ಸಾಮತ್ಯೆಯನ್ನು ಕಂಡುಕೊಳ್ಳಬಹುದು.

ಶಿವನ ರೂಪವಾದ ಭೈರವ ಸಂಪ್ರದಾಯವು ಮಹತ್ವತೆಯನ್ನು ಪಡೆದುಕೊಂಡು ಕರ್ನಾಟಕದಲ್ಲಿ ನೆಲೆಗೊಂಡಿದೆ. ಭೈರವನಿಗೆ ಕೆಂಪಯ್ಯ ಕೆಂಚಯ್ಯ ಎಂಬ ಹೆಸರು ಇದ್ದು, ಮಣಕತ್ತೂರಿನ ಭೈರವ ಗುಡಿಯಲ್ಲಿ ಕರಿಕೆಂಚ – ಬಿಳಿಕೆಂಚ ಎಂಬ ಅರೆಗೆಗಳಿವೆ.[೨೦] ಹಾಗೇ ರಂಗನಾಥ ಸಂಪ್ರದಾಯವಿರುವ ಪ್ರತಿ ದೇವಾಲಯಲ್ಲಿಯೂ ಪ್ರಸ್ತುತ ಈ ರೀತಿಯ ಕರಿಕೆಂಚ–ಬಿಳಿಕೆಂಚ ಅರಗೆಗಳಿದ್ದು, ರಂಗನಾಥನ ಆರಾಧನೆಯ ಭೂತಗಳಿಗೆ ಕೆಂಚರಾಯ–ಕಾಡರಾಯ ಎಂಬ ಹೆಸರುಗಳಿದ್ದು ಇವು ಏನನ್ನು

ಸಂಕೇತಿಸುತ್ತವೆ ಎಂಬುದು ಸ್ಪಷ್ಟತೆಯಿಲ್ಲ. ಜೊತೆಗೆ ಭೈರವನಿಗೆ ಭಕ್ತರು ಕೂಡ ಸಮಾಜದ ಎಲ್ಲ ವರ್ಗದವರಿದ್ದಾರೆ. ಹಾಗೇಯೇ ರಂಗನಿಗೂ ಕೂಡ ಎಲ್ಲ ವರ್ಗದವರು ಆರಾಧಕರಿದ್ದಾರೆ. ಚಂದ್ರಗುತ್ತಿಯ ಕಿನ್ನರಿ ಜೋಗಿಗಳು ಗುತ್ತೆಮ್ಮನನ್ನೂ ಭೈರವನನ್ನು ಒಟ್ಟಿಗೆ ಬೆತ್ತದ ಬುಟ್ಟಿಯಲ್ಲಿಟ್ಟು ಪೂಜಿಸುವ ಪದ್ಧತಿ, ಹಾಗೆಯೇ ಮೋಕಳಿಯ (ಅರಕಲಗೂಡು) ಕಾಪಾಲಿಕರು ಕೂಡ ಭೈರವನ ಜೊತೆ ಪೆಟ್ಟಿಗೆಯಲ್ಲಿ ಲಕ್ಷ್ಮೀದೇವಿಯನ್ನು ಪೂಜಿಸುವ ಪದ್ಧತಿ ಆಚರಣೆಯಲ್ಲಿದೆ.[೨೧] ಹಾಗೆಯೇ ರಂಗನಾಥ ಸಂಪ್ರದಾಯದಲ್ಲೂ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಜೋಗಿಹಟ್ಟಿ, ಗೌಡಗೆರೆ, ಹೊಸದುರ್ಗ ತಾಲ್ಲೂಕಿನ ಅಂಚಿಬಾರಿಹಟ್ಟಿಯಲ್ಲಿ ರಂಗನನ್ನು ಸಂಕೇತಿಸುವ ಶಿಲೆ, ಸಾಲಿಗ್ರಾಮ, ಅವರು ಕಲ್ಪಿಸಿಕೊಂಡ ವಸ್ತುಗಳನ್ನು ಬಿದಿರಿನ ಬುಟ್ಟಿಯಲ್ಲಿ ಇಟ್ಟು ಪೂಜಿಸುವ ಪದ್ಧತಿ ಇದೆ. ಭೈರವನ ನೆಲೆಗಳು ಬೆಟ್ಟ, ಕಣಿವೆ, ಗುಹೆಗಳು, ದುರ್ಗಮ, ನಿರ್ಜನ ಪ್ರದೇಶಗಳೇ ಆಗಿದ್ದು, ಇದಕ್ಕೆ ರಂಗನು ಹೊರತಾಗಿಲ್ಲ. ಇಲ್ಲಿ ಮತ್ತೊಂದು ಮಹತ್ವದ ವಿಷಯವೆಂದರೆ ಕರ್ನಾಟಕದ ಅನೇಕ ರಂಗನಾಥ ದೇವಾಲಯಲ್ಲಿ ಭೈರವನ ಒಂದು ಶಿಲ್ಪವು ಕಡ್ಡಾಯವಾಗಿ ಇರುವಂತವುಗಳು ಕಂಡುಬಂದಿವೆ. ಕದ್ರಿ ಮಠದ ನಾಥನು ಕದ್ರಿ ಮಂಜುನಾಥ ಜಾತ್ರೆಯಲ್ಲಿ ಅವಭೃತ ಸ್ನಾನದ ದಿನ ಮೃಗಯಾ ವಿಹಾರಕ್ಕೆ ಹೋಗುವ ಪದ್ಧತಿಯೂ ಬೇಟೆಯನ್ನೇ ಸಂಕೇತಿಸುವುದಾಗಿದ್ದು[೨೨] ಮುಖ್ಯವಾಗಿ ರಂಗನಾಥನು ಜಾತ್ರೆಯ ಸಂದರ್ಭದಲ್ಲಿ ಇದೇ ಪದ್ಧತಿಯನ್ನು ಅನುಸರಿಸುವುದು ಎಲ್ಲ ರಂಗನಾಥ ದೇವಾಲಯಗಳಲ್ಲೂ ಕಂಡುಬರುತ್ತದೆ. ಜೊತೆಗೆ ಇಲ್ಲಿ ರಂಗನಿಗೆ ಪ್ರತ್ಯೇಕ ಬೇಟೆಮರ, ಬೇಟೆಸೊಪ್ಪೆ ಎಂದು ಸೂಚಿಸುವ ಮರದ ಆಚರಣೆಯು ಮೂಲ ಬೇಟೆಯನ್ನು ಸಂಕೇತಿಸುವುದಾಗಿದೆ. ಮತ್ತೊಂದು ಪ್ರಮುಖ ಆಚರಣೆಯಾದ ಮಂಡ್ಯ ಸೀಮೆಯ ದಾಸಪ್ಪ-ಜೋಗಿಯರ ಸಂಪ್ರದಾಯದಲ್ಲಿ ಇಬ್ಬರು ಬೆರೆತುಕೊಂಡು ಮಧ್ಯ, ಮಾಂಸಗಳ ಸೇವನೆಯಲ್ಲಿ ಒಂದಾಗಿಸಿರುವುದು ಕಂಡುಬರುತ್ತದೆ. ಈ ಬಗೆಯ ಸಂಪ್ರದಾಯದ ಆಚರಣೆಗಳು ರಂಗನಾಥ ಸಂಪ್ರದಾಯದಲ್ಲಿಯೂ ಕಂಡುಬರುತ್ತದೆ. ಇಲ್ಲಿ ರಂಗನು ಮಾಂಸ ಮತ್ತು ಮಧ್ಯ ಪ್ರೀಯನು ಆಗಿದ್ದಾನೆ. ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಕೆಲವಡಿ ಗ್ರಾಮದಲ್ಲಿ ಇಂದಿಗೂ ಮಧ್ಯವನ್ನು ರಂಗನಾಥನಿಗೆ ನೈವೇದ್ಯ ಮಾಡುವ ಪರಂಪರೆಯಿದೆ. ಹಾಗೇ ತುಮಕೂರು, ಚಿತ್ರದುರ್ಗ, ಹಾಸನ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಮಂಡ್ಯ ಭಾಗದಲ್ಲೂ ರಂಗನಾಥನಿಗೂ ಮಾಂಸಾಹಾರ ನೈವೇದ್ಯ ಮಾಡುವ ಆಚರಣೆ ಕಂಡುಬರುತ್ತದೆ.

ಏಳು ಮಲೆಯ ಮಾದೇಶ್ವರನಿಗೆ ತನ್ನ ಗೆಳೆಯರಲ್ಲಿ ಪ್ರಮುಖನಾದವನೆಂದರೆ ಬಿಳಿಗಿರಿ ರಂಗನಾಥ. ಹರದನಹಳ್ಳಿಯಲ್ಲಿದ್ದಾಗ ರಂಗನಾಥನು ಆಗಾಗೆ ಅಲ್ಲಿಗೆ ಭೇಟಿಕೊಟ್ಟು ಆತನೊಡನೆ ಧರ್ಮ ಜಿಜ್ಞಾಸೆಯಲ್ಲಿ ತೊಡಗುತ್ತಿದ್ದನೆಂಬ ವಿವರ ದೊರೆಯುತ್ತದೆ.[೨೩] ಹಾಗಾದರೆ ಯಾವ ಧರ್ಮ ಎಂಬ ಪ್ರಶ್ನೆ ಹುಟ್ಟುತ್ತದೆ. ಬಹುಶ ಇವರಿಬ್ಬರೂ ಶೈವ, ವೈಷ್ಣವ ಧರ್ಮಗಳ ಕುರಿತು

ಚರ್ಚಿಸುತ್ತಿದ್ದವರಾಗಿದ್ದರು ಎನ್ನುವುದಾದರೆ ಈ ಎರಡು ಧರ್ಮಗಳಲ್ಲಿ ಸಾಮರಸ್ಯವಿತ್ತು ಎಂಬುದು ಗೋಚರಿಸುತ್ತದೆ. ಬಹುಶ ಆ ಕಾಲಕ್ಕಾಗಲೇ ಬಿಳಿಗಿರಿರಂಗ ವೈಷ್ಣವ ಧರ್ಮವನ್ನು ಸಂಕೇತಿಸುವವನಾಗಿದ್ದಿರಬೇಕು. ಇದರಿಂದ ಈ ಎರಡು ಧರ್ಮಗಳಲ್ಲಿ ಸಾಮರಸ್ಯವಿತ್ತು ಎಂಬುದು ಗೋಚರಿಸುತ್ತದೆ. ಇದಕ್ಕೆ ಹಿನ್ನೆಲೆಯಾಗಿ ಮಾದೇಶ್ವರನ ಎಣ್ಣೆ ಮಜ್ಜನ ಸೇವೆಯಲ್ಲಿ ಕಂಡುಕೊಳ್ಳಬಹುದು. ಏಳು ಮಲೆಯ ಮಾತೃಪ್ರಧಾನ ದೇವತೆಗಳಲ್ಲಿ ಇಕ್ಕೇರಿ ದೇವಮ್ಮನು ಒಬ್ಬಳಾಗಿದ್ದಾಳೆ. ಈಕೆಯ ಸೊಕ್ಕನ್ನು ಮುರಿಯಲು ಮಾದಯ್ಯ ತನ್ನ ಗೆಳೆಯರಾದ ಬಿಳಿಗಿರಿ ರಂಗಯ್ಯ, ಮುಡಕುತೊರೆ ಮಲ್ಲಯ್ಯನನ್ನು ಜೊತೆ ಮಾಡಿಕೊಂಡು ಭಿಕ್ಷೆಗೆ ಹೋಗುವುದನ್ನು ಗಮನಿಸಿದರೆ ಆತ ಒಬ್ಬ ಸೌಹಾರ್ದಯುತ ದೇವತೆಯಾಗಿ ಕಾಣುತ್ತಾನೆ. ಮಾದಯ್ಯ ತಾನು ನೆಲೆನಿಲ್ಲ ಬಯಸಿದ ಆಸುಪಾಸಿನ ಪಂಥಗಳ, ಸಂಸ್ಕೃತಿಗಳ ಜೊತೆ ಸೌಹಾರ್ದ ನೀತಿ ಅನುಸರಿಸುತ್ತಾನೆ. ಬಿಳಿಗಿರಿಯ ರಂಗಸ್ವಾಮಿ, ಮುಡುಕುತೊರೆ ಮಲ್ಲಯ್ಯ, ಶಾಕ್ತರಾದ ದೇವಮ್ಮ, ಕಾಳಮ್ಮ ಮೊದಲಾದವರ ಜೊತೆ ಈತ ನಡೆದುಕೊಳ್ಳುವುದರಲ್ಲಿ ಸ್ನೇಹ ಮತ್ತು ಹೊಂದಾಣಿಕೆ ನೀತಿಯನ್ನು ಕಾಣುತ್ತೇವೆ. ದೇವಯ್ಯನ ಮನೆಗೆ ಭಿಕ್ಷೆಗೆ ಹೋಗುವಾಗ ಮಾದಯ್ಯ ತನ್ನ ಸಹಾಯಕ್ಕೆ ಎಂಬಂತೆ ರಂಗಯ್ಯ, ಮಲ್ಲಯ್ಯರನ್ನು ಕರೆಯುತ್ತಾನೆ. ಹಾಗೇ ಕಂಪಣ ಬೇಡರ, ಸೋಲಿಗರ ಸೇವೆ, ಆಹಾರ, ಆರೈಕೆಯ ಏಕತಾನತೆಯನ್ನು ಮುರಿಯಲು ಎಣ್ಣೆಮಜ್ಜನ ಸೇವೆ ಬಯಸುತ್ತಾನೆ. ಅದಕ್ಕಾಗಿ ಸುರಗೂರ ನಾಡಿನ ನಡುವೆ ಇರುವ ರಾಮವ್ವ–ಮೂಗ್ಗಪ್ಪ ಶರಣರ ಒಕ್ಕಲು ಪಡೆಯಲು ಬಯಸುತ್ತಾನೆ. ಅಂದರೆ ಭಕ್ತನಾಗಿ ಪಡೆಯುತ್ತಾ ತನ್ನ ಕಾರ್ಯಕ್ಷೇತ್ರದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಮಾದಯ್ಯ ಸ್ನೇಹ, ಸಹಕಾರದ ಮಾರ್ಗವನ್ನು ಅನುಸರಿಸಿರುವುದು ಕಂಡುಬರುತ್ತದೆ. ರಾಮವ್ವ–ಮೂಗ್ಗಪ್ಪ ಶರಣರು ಆದಿಶೈವ ಕುಲದವರಾಗಿದ್ದು, ಇವರು ಮಲ್ಲಯ್ಯ, ರಂಗಯ್ಯನ ಒಕ್ಕಲನವರು. ಮಾದಯ್ಯ ಈ ಶರಣರೇ ತನಗೆ ಎಣ್ಣೆಮಜ್ಜನ ಸೇವೆ ಮಾಡಲು ಒಕ್ಕಲಾಗಬೇಕೆಂದು ಅವರನ್ನೇ ಕೇಳುತ್ತಾನೆ. ತಾಯಿ ಮನೆ ಕಡೆಯಿಂದ ರಾಮವ್ವ, ಮಲ್ಲಯ್ಯನ ಒಕ್ಕಲು, ಗಂಡನ ಮನೆಯಲ್ಲಿ ರಂಗಯ್ಯನ ಒಕ್ಕಲು. ಹೀಗಾಗಿ ಇಬ್ಬರು ಶೈವ, ವೈಷ್ಣವ ಒಕ್ಕಲಿನವರು. ಈ ಶರಣರನ್ನು ಬಿಟ್ಟುಕೊಡಲು ಮಾದಯ್ಯ ತನ್ನ ಗೆಳೆಯರನ್ನು ಕೇಳಿಕೊಳ್ಳುವುದು ಸೌಜನ್ಯ, ಸೌಹಾರ್ದತೆಯ ಸಂಕೇತವಾಗಿದ್ದು, ಅಲ್ಲದೆ ಇಡೀ ಕೆಳವರ್ಗದ ಎಲ್ಲ ತಳಸಮುದಾಯಗಳು ಯಾವ ದೈವದ ಭಕ್ತರು ಆಗಬಹುದು. ಜೊತೆಗೆ ದೈವವು ಕೂಡ ಅವರಿಗೆ ಮುಕ್ತ ಅವಕಾಶವನ್ನು ಕೊಡುತ್ತಿದ್ದವು ಎಂಬುದಕ್ಕೆ ನಿದರ್ಶನವಾಗಿದೆ. ನಂತರದಲ್ಲಿ ಮಲ್ಲಯ್ಯ, ರಂಗಯ್ಯ ದೈವಗಳೇ ಬಿಟ್ಟುಕೊಡಲು ಸಮ್ಮತಿಸಿದರೂ ಭಕ್ತರಾದ ರಾಮವ್ವ, ಮೂಗಪ್ಪ ಮಾದಯ್ಯನ ಒಕ್ಕಲಾಗಲು ಒಪ್ಪುವುದಿಲ್ಲ. ಇದು ಮನುಷ್ಯನ ಸಹಜ ಭಾವನೆಗಳನ್ನು ಅಭಿವ್ಯಕ್ತಿಸುತ್ತದೆ. ಆಗ ಮಾದಯ್ಯ ಸ್ವತಃ ಭಕ್ತರನ್ನು ಬೇಡುತ್ತಾನೆ, ಕಾಡುತ್ತಾನೆ. ಒಪ್ಪದಿದ್ದಾಗ ಅವರಿಗೆ ಕಷ್ಟಗಳನ್ನು ಕೊಟ್ಟು, ಪರೀಕ್ಷೆಗಳನ್ನು ಒಡ್ಡಿ ಒಪ್ಪುವಂತೆ ಮಾಡುತ್ತಾನೆ. ಪ್ರಸ್ತುತವು

ಜನಪದರು ನಂಬುವ ಬಗೆಯೂ ಇದೆ ಮಾದರಿಯದಾಗಿದೆ. ಈ ಸಂದರ್ಭದಲ್ಲಿ ಮಾದಯ್ಯ ಮತ್ತು ಸುರಗೂರ ಶರಣರ ಜೊತೆ ಒಂದು ಒಪ್ಪಂದವಾಗುತ್ತದೆ. ರಾಮವ್ವ, ಮೂಗಪ್ಪ ತಾವು ಯಾವ ದೈವದ ಒಕ್ಕಲಾಗಿದ್ದರೋ ಹಾಗೇ ಇರಬಹುದು. ಹಾಗಿದ್ದುಕೊಂಡೆ ಮಾದಯ್ಯನ ಎಣ್ಣೆಮಜ್ಜನ ಸೇವೆ ನಡೆಸಿಕೊಡಬಹುದು. ಅಂದರೆ ಅವರು ಮಲ್ಲಯ್ಯನ ಶೈವ ಪಂಥಕ್ಕೂ, ರಂಗಯ್ಯನ ವೈಷ್ಣವ ಪಂಥಕ್ಕೂ ನಿಷ್ಠವಾಗಿದ್ದು, ಮಾದಯ್ಯನ ಸೇವೆ ಮಾಡುವುದು. ಪ್ರಸ್ತುತ ಸುರಗೂರ ಸಮೀಪವಿರುವ ಅವರ ವಂಶಸ್ಥರು ವೈಷ್ಣವ ದಾಸ ಪಂಥದವರಾಗೆ ಇರುವುದು ಗಮನಾರ್ಹ.[೨೪]

ಹೀಗೆ ಮಾದಯ್ಯ ಸೌಹಾರ್ದಯುತನಾಗಿ ತನ್ನ ಸಮಕಾಲೀನ ಪಂಥ ಪರಂಪರೆಗಳ ಜೊತೆ ನಡೆದುಕೊಳ್ಳುತ್ತಾನೆ. ಮುಡುಕುತೊರೆ ಮಲ್ಲಯ್ಯ ಮತ್ತು ಬಿಳಿಗಿರಿರಂಗನ ಪರಿಸರದಲ್ಲಿಯೂ ಮಾದಯ್ಯನ ಆರಾಧನೆಯ ನೆಲೆಗಳಿವೆ. ಇವು ಆ ದೈವಗಳ ಜೊತೆಗಿನ ಸೌಹಾರ್ದತೆಯನ್ನು, ಸಮನ್ವಯವನ್ನು ಸೂಚಿಸುತ್ತವೆ.

ಪ್ರಸ್ತುತ ದ್ರಾವಿಡ ಜನಪದರ ಪ್ರಮುಖ ವೈಶಿಷ್ಟ್ಯವೆಂದರೆ ಶಿವ ಮತ್ತು ರಂಗನನ್ನು ಸಮಾನ ಭಾವದಿಂದ ಪೂಜಿಸುವುದು. ಹರಿಹರ ಇವರಿಗೆ ಒಂದೇ. ಅದರಲ್ಲೂ ಬುಡಕಟ್ಟು-ದ್ರಾವಿಡ ಕುಲಗಳಲ್ಲಿ ಶಿವ-ರಂಗ ಐಕ್ಯತೆ ಎದ್ದುಕಾಣುವ ಅಂಶವಾಗಿದ್ದು ವಿಶೇಷವಾಗಿದೆ. ಪ್ರಸ್ತುತ ರಂಗನಾಥ ಸಂಪ್ರದಾಯದಲ್ಲಿಯೂ ಶಿವ ಮತ್ತು ರಂಗನನ್ನು ಸಮಾನವೆಂದು ತಿಳಿದು ಪೂಜಿಸುವ ಪರಿಪಾಠವಿದೆ.[೨೫] ಅನೇಕ ರಂಗನಾಥ ದೇವಾಲಯಗಳ ಗರ್ಭಗೃಹದಲ್ಲಿ ಶಿವ ಮತ್ತು ರಂಗನನ್ನು ಸಂಕೇತಿಸುವ ಲಿಂಗಗಳನ್ನು ಇಟ್ಟು ಪ್ರಸ್ತುತ ಪೂಜಿಸುತ್ತಿದ್ದಾರೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿ, ದಾವಣಗೆರೆ ಜಿಲ್ಲೆಯ ಹರಿಹರ ತಾಲೂಕಿನ ಜಿಗಳಿ, ಚನ್ನಗಿರಿ ತಾಲೂಕಿನ ದೇವರಹಳ್ಳಿ, ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲೂಕಿನ ಪಿಳ್ಳಂಗೆರೆ, ಗೋಪಾಳ ಮುಂತಾದ ದೇವಾಲಯಗಳಲ್ಲಿ ಶಿವ ಮತ್ತು ರಂಗನನ್ನು ಒಟ್ಟಿಗೆ ಪೂಜಿಸುವ ಸಂಪ್ರದಾಯವಿದೆ. ಇಲ್ಲಿ ರಂಗನಾಥನು, ರಂಗೇಶ್ವರ ಎಂಬ ಹೆಸರಿನಿಂದ ಗುರುತಿಸಿಕೊಂಡಿದ್ದಾನೆ.

ಕೃಷಿಯ ಆರಂಭದ ಕಾಲದಲ್ಲಿ ಬೆಳವಣಿಗೆಗೊಂಡ ಸ್ತ್ರೀದೇವತೆಯ ಆರಾಧನೆಯಲ್ಲೂ ರಂಗನು ಪ್ರವೇಶವನ್ನು ಪಡೆದುಕೊಂಡು ಆರಾಧನೆಗೊಳ್ಳುತ್ತಾ ಬಂದಿದ್ದಾನೆ. ಈ ಹಂತದಲ್ಲಿ ರಂಗನು ಸ್ತ್ರೀದೇವತೆ ಮೇಲಸ್ಥಾನದ ಅಡಿಯಲ್ಲಿ ಆಕೆಯ ಅಣ್ಣನಾಗಿ, ತಮ್ಮನಾಗಿ, ಗಂಡನಾಗಿ, ಪ್ರಿಯತಮನಾಗಿ ಪರಸ್ಪರ ಸಹಕಾರ ಸಂಬಂಧವನ್ನು ಪಡೆದುಕೊಂಡಿದ್ದಾನೆ. ಉದಾಹರಣೆಗೆ ರಾಮನಗರ ಜಿಲ್ಲೆಯ ಕನಕಪುರ ತಾಲೂಕಿನ ಕಬ್ಬಾಳು ಕಬ್ಬಾಳಮ್ಮನಿಗೆ ಹಾಗೂ ಹಾಸನ ಜಿಲ್ಲೆಯ ಭರತೂರಿನಲ್ಲಿರುವ ಬಿಂದಿಗೆಮ್ಮನಿಗೆ ರಂಗನಾಥನು ಗಂಡನಾಗಿದ್ದಾನೆ. ನಂತರದಲ್ಲಿ ಬಿಳಿಗಿರಿರಂಗನ ಕಾವ್ಯದಲ್ಲಿ

ಕುಸುಮಾಲೆಯ ಪ್ರೇಮಿಯಾಗಿ ಕಂಡುಬಂದಿದ್ದಾನೆ. ಜುಂಜಪ್ಪನ ಸಂಪ್ರದಾಯದಲ್ಲಿ ಮರಡಿರಂಗನಿಗೆ ೭ ಜನ ಸೂಳೆಯರು ಇರುವಂತದ್ದು ಹಾಗೂ ಸೀರ್‍ಯಾದ ಜಾನುಕಲ್ಲು ದೊಡ್ಡಕ್ಕನ ಜೊತೆ ಸೀರ್‍ಯಾದ ರಂಗನು ಅನೈತಿಕ ಸಂಬಂಧವನ್ನು ಬೆಸೆದುಕೊಂಡು ಬೆಳೆದು ಬಂದಿದ್ದಾನೆ. ಹೀಗೆ ಸ್ಥಳೀಯ ದೈವಗಳ ಜೊತೆ ಆತನ ಒಡನಾಟವಿರುವುದು ಗೋಚರಿಸುತ್ತದೆ. ಇಲ್ಲಿಯೂ ರಂಗನು ನಿರಾಕಾರ. ಅಮೂರ್ತ, ಅವ್ಯಕ್ತ ಸ್ವರೂಪದವನು.

ರಂಗನಾಥ ಸಂಪ್ರದಾಯದ ಮತ್ತೊಂದು ಮಹತ್ವವಾದ ಘಟ್ಟವೆಂದರೆ ವೈಷ್ಣವ ಧರ್ಮ ರಂಗನನ್ನು ಒಳಗುಮಾಡಿಕೊಳ್ಳುವ ಕ್ರಿಯೆ. ಪ್ರಾರಂಭದಿಂದಲೂ ಬೇಟೆರಂಗ, ಗವಿರಂಗಪ್ಪ, ರಂಗಪ್ಪ, ರಂಗಯ್ಯ ಎಂದು ಆರಾಧನೆಗೆ ಒಳಪಟ್ಟು ರಂಗನು, ಶಿಷ್ಟ ಪರಂಪರೆಯ 'ರಂಗ' ಮತ್ತು 'ನಾಥ' ಒಂದುಗೂಡಿರುವ ರಂಗನಾಥನಾಗಿ ರೂಪಗೊಳ್ಳುತ್ತಿರುವ ಪ್ರಾರಂಭಿಕ ಹಂತ. ಈ ಕ್ರಿಯೆಯಲ್ಲಿ ತಿರುಪತಿ ತಿಮ್ಮಪ್ಪನ ಮುಖಾಂತರ ರಂಗನನ್ನು ಒಳಗುಮಾಡಿಕೊಳ್ಳುವ ಮಾರ್ಗವನ್ನು ವೈಷ್ಣವ ಧರ್ಮ ಪ್ರಾರಂಭಿಸಿರುವುದು. ಈ ನಿಟ್ಟಿನಲ್ಲಿ ಬಿಳಿಗಿರಿರಂಗನ ಕುರಿತು ಕಥೆ, ಕಾವ್ಯಗಳು ಪ್ರಸ್ತುತ ರಂಗನಾಥ ಸಂಪ್ರದಾಯದಲ್ಲಿ ಸಂಗ್ರಹಿಸಲ್ಪಟ್ಟ ಐತಿಹ್ಯಗಳು ಸ್ಪಷ್ಟವಾದ ಆಧಾರಗಳನ್ನು ಒದಗಿಸಿಕೊಡುತ್ತವೆ.

ಸೋಲಿಗರ ಒಂದು ಕಥೆಯ ಪ್ರಕಾರ ತಿರುಪತಿ ವೆಂಕಟರಮಣ, ಬಿಳಿಗಿರಿರಂಗ, ಶ್ರೀರಂಗಪಟ್ಟಣದ ರಂಗನಾಥ, ಶಿವನಸಮುದ್ರದ ರಂಗನಾಥ ಮತ್ತು ತಿರುಚ್ಚಿನಾಪಳ್ಳಿಯ ಶ್ರೀರಂಗಂ ರಂಗನಾಥ ಈ ಐವರು ಅಣ್ಣತಮ್ಮಂದಿರು ಎಂದು ಹೇಳುವಲ್ಲಿ ವೈಷ್ಣವ ಧರ್ಮದ ಪ್ರಭಾವವು ಕಂಡುಬರುತ್ತದೆ.[೨೬] ತಿರುಪತಿ ವೆಂಕಟೇಶನು ಅವರಲ್ಲಿ ಹಿರಿಯವನು ಎನ್ನುವ ಉಲ್ಲೇಖವಿದ್ದು, ಅದು ಹೇಗೆ ಸಾಧ್ಯವಾಗುತ್ತದೆ ಎನ್ನುವ ಪ್ರಶ್ನೆ ಹುಟ್ಟುತ್ತದೆ. ಯಾಕೆಂದರೆ ತಿಮ್ಮಪ್ಪ ಕಾಡಿನ ಮೂಲದಿಂದ ಬಂದವನು. ಅಲ್ಲದೆ ಆತನ ಮೂಲ ಬಗೆಗೆ ಯಾವ ಆಧಾರಗಳು ದೊರೆಯುವುದಿಲ್ಲ. ಅಲ್ಲದೆ ಶ್ರೀರಂಗಂ, ಶ್ರೀರಂಗಪಟ್ಟಣ ರಂಗನಾಥಸ್ವಾಮಿಯು ಮೊದಲು ನಿರಾಕಾರ ಸ್ವರೂಪದಲ್ಲಿಯೇ ಇದ್ದವರಾಗಿದ್ದು, ಇದಕ್ಕೆ ಬಿಳಿಗಿರಿರಂಗನು ಹೊರತಾಗಿಲ್ಲ. ಕಥೆಯಲ್ಲಿ ಬರುವ ಸೀಗೆಕಾಯಿ ತರುವ ಪ್ರಸಂಗವು ಕಾಡನ್ನು ಸೂಚಿಸುವ ಸಂಕೇತವಾಗಿದೆ. ಸೀಗೆಕಾಯಿ ತರಲು ಹೋದ ನಾಲ್ಕು ಜನ ತಮ್ಮಂದಿರು ಬೇರೆ ಬೇರೆ ಸ್ಥಳಗಳಲ್ಲಿ ನೆಲೆಸಿದರು ಎಂದು ಹೇಳುವ ಬಗೆಯು, ನಾಲ್ಕೂ ಜನರು ನೆಲೆಸಿದ ನೆಲೆಯು ಕಾಡಾಗಿತ್ತು ಎಂಬುದಾಗುತ್ತದೆ. ಅಲ್ಲದೆ ಇವರು ಆ ಸ್ಥಳಗಳಲ್ಲಿ ಪ್ರಾರಂಭದ ಹಂತದಲ್ಲಿ ನಿರಾಕಾರವಾಗಿ ನೆಲೆಗೊಂಡಿದ್ದಿರಬೇಕು. ಆದರೆ ವೈಷ್ಣವ ಧರ್ಮದ ಪ್ರಚಾರ ಪ್ರಕ್ರಿಯೆಯಲ್ಲಿ ಈ ನೆಲೆಗಳಲ್ಲಿ ಮೂರ್ತಿಶಿಲ್ಪಗಳನ್ನು ಇಟ್ಟು ಆರಾಧಿಸಲು ಪ್ರಾರಂಭಿಸಿ ಪ್ರಚಾರ ಮಾಡಿರಬೇಕು. ಅಲ್ಲದೆ ತಿಮ್ಮಪ್ಪನಿಗೆ ಶಂಖ, ಚಕ್ರಗಳನ್ನು ನೀಡಿ ಒಳಗು ಮಾಡಿಕೊಳ್ಳುವ ಪ್ರಕ್ರಿಯೆಯು ಇದೇ

ಮಾದರಿಯದಾಗಿದೆ. ಆದರೆ ಐದು ನೆಲೆಗಳು ಇವತ್ತಿಗೂ ತಮ್ಮ ಮೂಲ ಪರಂಪರೆಯನ್ನು ಬಿಡದೆ ಮುಂದುವರೆಸುತ್ತಾ ಹೊಸದನ್ನು ಸ್ವೀಕರಿಸಿಕೊಂಡು ನೆಲೆಸಿವೆ ಎಂಬುದು ಸ್ಪಷ್ಟ.

ಪ್ರಸ್ತುತ ರಂಗನಾಥ ಸಂಪ್ರದಾಯದ ಅಧ್ಯಯನದಲ್ಲಿ ದೊರೆತ ಐತಿಹ್ಯಗಳು ವೈಷ್ಣವ ಧರ್ಮ ಒಳಗು ಮಾಡಿಕೊಳ್ಳುವ ಕ್ರಿಯೆಗೆ ಸಾಕ್ಷವನ್ನು ನೀಡುತ್ತವೆ. ಈ ಮೇಲ ಸ್ಥಾಪಿತ ಧರ್ಮ, ವರ್ಗದವರು ತಿಮ್ಮಪ್ಪ, ರಂಗಪ್ಪ ಇಬ್ಬರೂ ಪರಸ್ಪರ ಅಣ್ಣತಮ್ಮಂದಿರು. ಇಲ್ಲವೆ ತಿಮ್ಮಪ್ಪನೇ ರಂಗನಾಥ. ರಂಗನಾಥನೆ ತಿಮ್ಮಪ್ಪನೆಂದು, ಇಬ್ಬರು ಒಂದೇ ಕುಟುಂಬದವರೇ, ಯಾವ ಬೇಧವೂ ಇಲ್ಲವೆಂಬ ಅಭಿಪ್ರಾಯವನ್ನು ಸ್ಥಾಪಿಸುವುದರ ಮೂಲಕ ಎರಡು ದೈವಗಳನ್ನು ಈ ದೈವದ ಆರಾಧಕರನ್ನು ತಮ್ಮ ಧರ್ಮದತ್ತ ಒಳಗುಮಾಡಿಕೊಳ್ಳುವ ಹುನ್ನಾರವನ್ನು ರಚಿಸಿರಬೇಕು ಎಂದು ಕಂಡುಬರುತ್ತದೆ.

ಮತ್ತೊಂದು ಕಥೆಯ ಪ್ರಕಾರ ವೆಂಕಟೇಶ್ವರನ ಪತ್ನಿಯಾದ ಆಲಮೇಲು ಮಂಗಮ್ಮನ ಅಣತಿಯಂತೆ ಸೀಗೆಕಾಯಿ ತರಲು ಶ್ವೇತಾದ್ರಿಯ ಅರಣ್ಯಕ್ಕೆ ಬಂದು ಅಲ್ಲಿ ಸೋಲಿಗರ ಹೆಣ್ಣೊಬ್ಬಳನ್ನು ನೋಡಿ ಅವಳಲ್ಲಿ ಅನುರಕ್ತವಾಗಿ ಅಲ್ಲಿಯೇ ನೆಲೆಸಿದ್ದನು ಎಂದು ಪ್ರತೀತಿಯಿದೆ.[೨೭] ಆದರೆ ಮಲೆಮಾದೇಶ್ವರನ ಕಾವ್ಯದಲ್ಲಿ ಮಾದಯ್ಯನು ಏಳು ಮಲೆಗೆ ಹೊರಡುವಾಗ ಮೊದಲು ಬಂದದ್ದು 'ರಂಗದೊಡ್ಡೆಗೆ', 'ರಂಗನೊಡ್ಡು' ಎಂಬ ಸ್ಥಳಕ್ಕೆ ಇದು ರಂಗನನ್ನು ಮೊದಲಿಗೆ ಸಂದರ್ಶಿಸಿದ ಸ್ಥಳವಾಗಿದ್ದು, ಇಂದಿಗೂ ಆ ನೆಲೆಯನ್ನು 'ರಂಗನೊಡ್ಡು' ಎಂದು ಕರೆಯುತ್ತಾರೆ. ಇಲ್ಲಿ ರಂಗನು ಮಾದೇಶ್ವರನನ್ನು ಕುರಿತು ತನ್ನೊಡನೆ ಬಿಳಿಗಿರಿಗೆ ಬಂದು ನೆಲೆಸುವಂತೆ ಒತ್ತಾಯಿಸಿದನು.[೨೮] ಇದು ರಂಗ ಈ ನೆಲೆಗೆ ಮೂಲ ಎಂಬುವುದನ್ನು ಸೂಚಿಸುತ್ತದೆ. ಈ ಸ್ಥಳವು ಆತನಿಗೆ ಸಂಬಂಧಿಸಿದ್ದು ಎಂಬುದು ಗೊತ್ತಾಗುತ್ತದೆ. ಆದರೆ ನಂಜನಗೂಡಿನ ನಂಜುಂಡ ಚಾಮುಂಡಿಗೂ, ಆದಿಚುಂಚನಗಿರಿಯ ಭೈರವ ಮಾಳವ್ವ, ಮೈಲಾರ ಮತ್ತು ಕೋಮಾಲೆ, ಮೇಲುಕೋಟೆಯ ಚೆಲುವರಾಯ ಮತ್ತು ವರನಂದಿ ಹಾಗೇ ಶಿಷ್ಟ ಪರಂಪರೆ ಮತ್ತು ಪರಿಶಿಷ್ಟ ಪರಂಪರೆಯ ದೈವಗಳಿಗೂ ಉಪಪತ್ನಿಯರನ್ನು ತೋರಿಸಿದ್ದು ಇದಕ್ಕೆ ವೆಂಕಟೇಶ್ವರ ಮತ್ತು ಆಲಮೇಲ ಮಂಗಮ್ಮನು ಹೊರತಾಗಿಲ್ಲ. ಇಲ್ಲಿಯೂ ವೆಂಕಟೇಶ್ವರನು ಮೂಲ ರಂಗನ ಮೇಲೆ ಪ್ರಭಾವ ಬೀರುವಲ್ಲಿ ಮಾಡಿರುವ ವೈಷ್ಣವ ಧರ್ಮದ ಪ್ರಕ್ರಿಯೆಯನ್ನು ಕಾಣುತ್ತೇವೆ. ಹೀಗಾಗಿ ಇಲ್ಲಿ ಬಿಳಿಗಿರಿರಂಗ–ಕುಸುಮಾಲೆ ಸರಿಯಾದುದು. ಕಾವ್ಯಗಳಲ್ಲಿ ಬರುವ ದಾಸಯ್ಯನ ಪಾತ್ರ, ಮುದಿದಾಸಯ್ಯ ಹರೆಯದ ಶ್ರೀಮನ್ನಾರಾಯಣನಾಗುವುದು ಎಲ್ಲವು ಶಿಷ್ಟ ಸಂಪ್ರದಾಯವು ಒತ್ತಾಯಪೂರ್ವಕವಾಗಿ ಹೇರಿರುವ ಸಂಗತಿಗಳಾಗಿವೆ. ಈ ಎಲ್ಲ ಪರಿಕರಗಳು ವಿವಿಧ ವಿಷಯವನ್ನು ನೀಡಿದರೂ ಇಲ್ಲಿಯೂ ರಂಗನ ಸ್ವರೂಪ ನಿರಾಕಾರ. ಅಮೂರ್ತ ಕಲ್ಪನೆಯು ಮುಂದುವರೆದಿದೆ.

ಪ್ರಾರಂಭದಲ್ಲಿ ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ ಹಂತದಲ್ಲಿ ಬೆಳೆದುಬಂದ ರಂಗ, ಬೇಟೆರಂಗ, ಗವಿರಂಗಪ್ಪ, ರಂಗಸ್ವಾಮಿಯಾಗಿ ಕಾಲಘಟ್ಟಗಳಲ್ಲಿ ಭಿನ್ನ ನಾಮಗಳಿಂದ ಗುರುತಿಸಿಕೊಂಡಿರುವ ರಂಗ ಕೊನೆಯ ಘಟ್ಟದಲ್ಲಿ ಪರಂಪರೆಯ ಮೇಲುಸೌಧವನ್ನೇರಿ ಪೂರ್ಣ ರೀತಿಯ ರಂಗನಾಥನಾಗಿ ನೆಲೆಗೊಂಡಿದ್ದಾನೆ. ಇಲ್ಲಿ ರಂಗನು ಮೂಲವಾಗಿದ್ದು 'ನಾಥ' ಸೇರಿ ರಂಗನಾಥನಾಗಿ ಪ್ರಸಿದ್ಧಿ ಪಡೆದಿದ್ದಾನೆ. ಇಲ್ಲಿ ರಂಗನಾಥ ಬ್ರಹ್ಮಾಂಡದ ಒಡೆಯ, ನಾಥ. ಜಗವೆಂಬ ನಾಟಕ ರಂಗಕ್ಕೆ ಇತನೆ ಒಡೆಯನಾಗಿ ನೆಲೆಗೊಂಡಿದ್ದಾನೆ. ಇಲ್ಲಿ ರಂಗನಾಥನಿಗೆ ಮೂರ್ತ ರೂಪ ನೀಡುವ ಪರಂಪರೆ ಪ್ರಾರಂಭವಾಯಿತು. ಇಲ್ಲಿಯ ರಂಗನಾಥ ಶಯನ ರೂಪದ ಅನಂತಶಯನನ ರೂಪದಲ್ಲಿ ಪೂಜಿಸಲ್ಪಡುತ್ತಿದ್ದಾನೆ.

ಮುಖ್ಯವಾಗಿ ಈ ಹಂತದಲ್ಲಿ ತಮಿಳುನಾಡಿನ ಶ್ರೀರಂಗಂ ರಂಗನಾಥ ದೇವಾಲಯ, ಶ್ರೀರಂಗಪಟ್ಟಣದ ರಂಗನಾಥ ದೇವಾಲಯ, ಶಿವನಸಮುದ್ರದ ರಂಗನಾಥ ಈ ಮೂರು ದೇವಾಲಯಗಳು ಮಹತ್ವವಾದ ಪ್ರಾಮುಖ್ಯತೆಯನ್ನು ಪಡೆದವು. ಇವೆಲ್ಲವೂ ಪ್ರಸ್ತುತ ಶಿಷ್ಟ ಪರಂಪರೆಯ ವೈಷ್ಣವ ಧರ್ಮದ ಸಂಪ್ರದಾಯವನ್ನು ಪ್ರತಿನಿಧಿಕರಿಸುವ, ಮುಂದುವರೆಸುವ ದೇವಾಲಯಗಳಾಗಿವೆ. ಜೊತೆಗೆ ಪ್ರಾರಂಭದ ಹಂತದ ರಂಗ ಪರಂಪರಾನುಗತವಾಗಿ ತನ್ನ ಮೂಲ ಹೆಸರುಗಳನ್ನು ಉಳಿಸಿಕೊಂಡು, ಅವುಗಳ ಜೊತೆಯಲ್ಲಿಯೇ ರಂಗನಾಥನೆಂಬ ಹೊಸ ನಾಮವನ್ನು ಪಡೆದು ನೆಲೆಗೊಂಡನಲ್ಲದೇ ರಾಜಾಶ್ರಯವನ್ನು ಪಡೆದುಕೊಂಡನು. ಹೀಗೆ ರಾಜಾಶ್ರಯದ, ಪ್ರಭುತ್ವದ ಆಶ್ರಯವನ್ನು ಪಡೆದುಕೊಂಡ ರಂಗ ಚಾರಿತ್ರಿಕ ಕಾಲಘಟ್ಟದಿಂದಲೂ ಶಿಷ್ಟ ಮತ್ತು ಪರಿಶಿಷ್ಟ ಎರಡು ನೆಲೆಯಲ್ಲಿ ನೆಲೆಗೊಂಡು ಇಂದಿಗೂ ಜೀವಂತ ಸಂಪ್ರದಾಯವಾಗಿ ಅಸ್ತಿತ್ವದಲ್ಲಿದೆ. ಚಾರಿತ್ರಿಕ ಕಾಲಘಟ್ಟದ ರಂಗನಾಥ ಕರ್ನಾಟಕದಲ್ಲಿ ಕ್ರಿ.ಶ. ೯ನೇ ಶತಮಾನದ ಅವಧಿಯಿಂದಲೇ ಗುರುತಿಸಿಕೊಂಡಿದ್ದರೂ, ಬಹುಮುಖ್ಯವಾಗಿ ಮತ್ತು ವ್ಯಾಪಕವಾಗಿ ನೆಲೆಗೊಂಡಿರುವುದು ವಿಜಯನಗರ ಅರಸರ ಕಾಲಾವಧಿಯಲ್ಲಿ.

ಮುಖ್ಯವಾಗಿ ತಮಿಳುನಾಡಿನ ಶ್ರೀರಂಗಂ ರಂಗನಾಥ ದೇವಾಲಯದ ಬಗೆಗೆ ಸೂಕ್ಷ್ಮವಾಗಿ ಅವಲೋಕಿಸುವುದಾದರೆ ಈ ದೇವಾಲಯವು ಸಹ ಕ್ರಿ.ಶ. ೯ನೇ ಶತಮಾನದಿಂದಲೇ ವ್ಯಾಪಕವಾದ ರಾಜಾಶ್ರಯವನ್ನು ಪಡೆದುಕೊಂಡು ನೆಲೆಗೊಂಡಿರುವುದು ಸ್ಪಷ್ಟವಾಗುತ್ತದೆ. ಈ ದೇವಾಲಯಕ್ಕೆ ಕ್ರಿ.ಶ. ೯ನೇ ಶತಮಾನದಿಂದಲೇ ಪಾಂಡ್ಯ, ಹೊಯ್ಸಳ, ವಿಜಯನಗರ ಮತ್ತು ನಾಯಕರ ಕಾಲದ ಅರಸರುಗಳು ಕೊಡುಗೆಗಳನ್ನು ನೀಡಿದ್ದು, ೩೦೦ಕ್ಕೂ ಹೆಚ್ಚು ಶಾಸನಗಳು ಪ್ರಕಟಗೊಂಡಿವೆ.[೨೯] ಆದರೆ ತಮಿಳುನಾಡಿನ ಶ್ರೀರಂಗಂ ದೇವಾಲಯದ ಇತಿಹಾಸವನ್ನು ಗಮನಿಸಿದಾಗ ಇಲ್ಲಿಯ ದೇವಾಲಯದ ಪ್ರಾರಂಭದ ನಿರ್ಮಾಣದ ಬಗ್ಗೆ ಸ್ಪಷ್ಟ ಖಚಿತತೆ ಇಲ್ಲದಿರುವುದನ್ನು ಕಾಣುತ್ತೇವೆ.

ಇಲ್ಲಿಯ ಸ್ಥಳ ಪುರಾಣದ ಪ್ರಕಾರ ಬ್ರಹ್ಮಾಂಡ ಪುರಾಣದ ಶ್ರೀರಂಗಂ ಮಹಾತ್ಮೆಯಲ್ಲಿ ಕಾಣಿಸುವಂತೆ ಬ್ರಹ್ಮಲೋಕದಲ್ಲಿ ಆರಾಧಿಸುತ್ತಿರುವ ಶ್ರೀರಂಗನಾಥನು ಅಯೋಧ್ಯೆಗೆ ವೈವಸ್ವತ ಮನುವಿನ ಅಭಿಷ್ಟದಂತೆ ವೈವಸ್ವತ ಮನ್ವಂತರದ ಪ್ರಥಮ ತ್ರೇತಾಯುಗದಲ್ಲಿ ಬಂದು ನೆಲೆಸಿದನು. ಶ್ರೀರಾಮನು ಸಹ ಶ್ರೀರಂಗನಾಥನನ್ನು ಲೋಕ ಸಂಗ್ರಹಕ್ಕಾಗಿ ಆರಾಧಿಸಿದನು ಎನ್ನುವ ಉಲ್ಲೇಖ ದೊರೆಯುತ್ತದೆ. ಅಂದರೆ ಶ್ರೀರಾಮನಿಂದ ವಿಭೀಷಣನಿಗೆ ಕೊಟ್ಟದೆನ್ನಲಾದ ಸಾಲಿಗ್ರಾಮವೊಂದಿದೆಯೆಂದು ಸ್ಥಳಪುರಾಣ ಬಣ್ಣಿಸುತ್ತದೆ. ಶ್ರೀರಾಮ ಪಟ್ಟಾಭೀಷೇಕಕ್ಕೆ ಬಂದಿದ್ದ ವಿಭೀಷಣನು ಹಿಂದಿರುಗುವಾಗ ಶ್ರೀರಾಮ ತಾನು ಆರಾಧಿಸುತ್ತಿದ್ದ ರಂಗನಾಥನ ಸಾಲಿಗ್ರಾಮವನ್ನು ನೀಡಿದನು. ಆಗ ಲಂಕೆಗೆ ವಾಪಸ್ಸಾಗುತ್ತಿದ್ದ ವಿಭೀಷಣನು ಸಂಧ್ಯೆಯ ಕಾಲದಲ್ಲಿ ದೇವರ ಪೂಜೆಗೆಂದು ಇಲ್ಲಿ ಆ ಸಾಲಿಗ್ರಾಮವನ್ನು ಇರಿಸಿ ನದಿಗಿಳಿದನು. ಆಗ ಸಾಲಿಗ್ರಾಮವು ಅದೇ ಸ್ಥಳದಲ್ಲಿ ನೆಲೆಸಿಹೋಯಿತೆಂದೂ ಪ್ರತೀತಿ. ನಂತರ ಆ ಸಾಲಿಗ್ರಾಮದ ಚೌಕಟ್ಟಿನಲ್ಲಿ ರಂಗನಾಥನ ಭವ್ಯಮೂರ್ತಿ ರಚಿಸಲಾಯಿತೆಂದು ಪ್ರಸಿದ್ಧಿ.[೩೦] ಈ ಹಿನ್ನೆಲೆಯಿಂದ ನೋಡಿದಾಗ ಮೂಲದಲ್ಲಿ ರಂಗನಾಥನು ಈ ಸ್ಥಳದಲ್ಲಿ ನಿರಾಕಾರ, ಅಮೂರ್ತ ಸ್ವರೂಪದಲ್ಲಿದ್ದನೆಂದು ತಿಳಿದುಬರುತ್ತದೆ.

ಪ್ರಸ್ತುತ ಶ್ರೀರಂಗಪಟ್ಟಣ ಪಶ್ಚಿಮ ರಂಗವೆಂದು, ಶಿವನಸಮುದ್ರ ದಕ್ಷಿಣ ರಂಗವೆಂದು, ಶ್ರೀರಂಗಂ ಪೂರ್ವಕ್ಷೇತ್ರವೆಂದು ಕ್ರಮವಾಗಿ ಆದಿರಂಗ, ಮಧ್ಯರಂಗ, ಅಂತ್ಯರಂಗ ಎಂದು ಕರೆಯಿಸಿಕೊಂಡಿರುವ ಮೂರು ಕ್ಷೇತ್ರಗಳಲ್ಲಿ ಕಾವೇರಿ ನದಿಯು ಹರಿಯುತ್ತದೆ. ಈ ಮೂರನ್ನು ರಂಗಕ್ಷೇತ್ರಗಳು ಎಂದು ಕರೆಯಲು ಕಾರಣ ಕಾವೇರಿ ನದಿ. ಕಾವೇರಿಯು ತನ್ನ ಹರಿವಿನ ಉದ್ದಕ್ಕೂ ಮೂರು ಕ್ಷೇತ್ರಗಳಲ್ಲಿ ರಂಗ ದ್ವೀಪಗಳನ್ನು ಸೃಷ್ಟಿಸಿದ್ದರಿಂದಲೇ ರಂಗ ಎನ್ನುವ ಹೆಸರು ಬಂದಿರುವುದು ಸ್ಪಷ್ಟವಾಗಿದೆ. ಹೀಗಾಗಿ ಇಲ್ಲಿಯೂ ಕೂಡ ಮೂಲ ರಂಗನ ನೆಲೆ ಕಾವೇರಿ ನಿರ್ಮಿತ ಒಂದು ವೇದಿಕೆ, ರಂಗಸ್ಥಳವಾಗಿದೆ. ಈ ರಂಗದ ದೈವವೇ ರಂಗನಾಥನೆಂದು ಪ್ರಸಿದ್ಧಿಗೆ ಬಂದಿದ್ದಾನೆ. ಹಾಗೆಯೇ ಮೂಲದಲ್ಲಿ ಇಲ್ಲಿ ರಂಗನಾಥ ನಿರಾಕಾರದ ಒಂದು ಸಾಲಿಗ್ರಾಮವಾಗಿತ್ತೆಂಬುದು ಗೋಚರಿಸುತ್ತದೆ.

ಇದೇ ರೀತಿ ಕರ್ನಾಟಕದ ಶ್ರೀರಂಗಪಟ್ಟಣ ರಂಗನಾಥಸ್ವಾಮಿಯ ಸ್ಥಳಪುರಾಣದಲ್ಲೂ ಗೌತಮ ಋಷಿಗಳ ತಪಸ್ಸಿಗೆ ಭಗವಂತನು ಪ್ರತ್ಯಕ್ಷನಾಗಿ ವಿಭೀಷಣನಿಗೆ ಶ್ರೀರಂಗಂನಲ್ಲಿ ಸೇವೆ ಕೊಟ್ಟಿರುವುದಾಗಿಯೂ ಇದೇ ಕಾವೇರಿಯ ಪ್ರಥಮದಲ್ಲಿ ಆದಿರಂಗದಲ್ಲಿ ತುಲಸಿವನದ ಹುತ್ತದಲ್ಲಿ ಶಿಲೆಯಾಗಿರುತ್ತೇನೆ ಎಂದು ತಿಳಿಸಿದನು. ನಂತರ ಗೌತಮರು ಮತ್ತು ಎಲ್ಲ ಋಷಿಗಳು ಕೂಡಿ ಕಾಮಧೇನುವಿನ ಕ್ಷೀರಸೇಚನದಿಂದ ಕರಗಿಸಿ ಅದರೊಳಗೆ ದಯಮಾಡಿಸಿರುವ ಸ್ವಾಮಿಯನ್ನು ಪೂಜಿಸಿದರು ಎನ್ನುವ ಪ್ರತೀತಿ ಇದೆ.[೩೧] ಇಲ್ಲಿಯೂ ಕಾವೇರಿ ರಂಗದಲ್ಲಿ ನೆಲೆಗೊಂಡಿದ್ದ ರಂಗನಾಥ ಮೂಲದಲ್ಲಿ ನಿರಾಕಾರ ಅಮೂರ್ತ ಸ್ವರೂಪದಲ್ಲಿಯೇ ಆರಾಧನೆಗೊಳಪಟ್ಟಿರುವುದು ಕಂಡುಬರುತ್ತದೆ.

ಹಾಗೇ ದೇವಾಲಯದ ಪ್ರಾರಂಭದ ನಿರ್ಮಾಣದ ಬಗ್ಗೆ ಸ್ಪಷ್ಟ ಖಚಿತತೆ ಇಲ್ಲದಿರುವುದು ತಿಳಿದುಬರುತ್ತದೆ.

ಪ್ರಸ್ತುತ ಕರ್ನಾಟಕದಂತೆ ತಮಿಳುನಾಡಿನಲ್ಲೂ ಅನೇಕ ರಂಗನಾಥ ದೇವಾಲಯಗಳಿದ್ದು, ಅವು ಗವಿ, ಬೆಟ್ಟ-ಗುಡ್ಡ, ಬೃಹತ್ ಬಂಡೆಗಳ ಆಶ್ರಯದಲ್ಲಿ ದುರ್ಗಮವಾದ ಪರಿಸರದಲ್ಲಿ ನೆಲೆಗೊಂಡಿವೆ. ಅಲ್ಲದೆ ರಂಗನಾಥಸ್ವಾಮಿ ದೇವಾಲಯಕ್ಕೆ ಬಡಗರು, ತೋಟರು ಮತ್ತು ಇರುಳರು ಮುಂತಾದ ಬುಡಕಟ್ಟು ಜನಸಮುದಾಯಗಳನ್ನೊಳಗೊಂಡಂತೆ ಹಸು ಪೊದೆಯಲ್ಲಿ ಲಿಂಗದ ಮೇಲೆ ಹಾಲು ಸುರಿಸುವ ವಿವಿಧ ರೀತಿಯ ಐತಿಹ್ಯವನ್ನು ಒಳಗೊಂಡಂತೆ ಅನೇಕ ದೇವಾಲಯಗಳು ನಿರ್ಮಾಣಗೊಂಡಿವೆ. ಉದಾಹರಣೆಗೆ ಕರಮಡೈ ರಂಗನಾಥ ದೇವಾಲಯ ಇಲ್ಲಿಯ ಮೂರ್ತಿಯು ಉದ್ಭವಲಿಂಗ ಮೂರ್ತಿಯಾಗಿದೆ.

ಶಿಷ್ಟ ಪರಂಪರೆಯ ಮೂಲಗಳನ್ನು ಗಮನಿಸಿದಾಗ ದೇವಾಲಯಗಳ ಮೂರ್ತಿಗಳು ನಿರಾಕಾರವಾಗಿದ್ದು, ಅಮೂರ್ತವಾಗಿದ್ದವು ಎಂದು ಸ್ಥಳ ಮಹಾತ್ಮೆಗಳಿಂದ ತಿಳಿದುಬರುತ್ತದೆ. ತಮಿಳುನಾಡಿನಲ್ಲಿ ಕಾಲಾಂತರದಲ್ಲಿ ವೈಷ್ಣವ ಧರ್ಮ ಭಕ್ತಿಪ್ರಧಾನವಾಗಿ ಹೆಚ್ಚು ಪ್ರಚಲಿತಕ್ಕೆ ಬಂದಿತು. ಕ್ರಿ.ಶ. ೯ನೇ ಶತಮಾನ ಭಾಗವತದ ಪ್ರಕಾರ ದಕ್ಷಿಣ ಭಾರತವೇ ಭಕ್ತಿಯ ತವರೂರು. ತಮಿಳುನಾಡಿನ ವೈಷ್ಣವ ಧರ್ಮದ ಇತಿಹಾಸದ ಆರಂಭದಲ್ಲಿ ಆಳ್ವಾರರು ಪ್ರಮುಖ ಪಾತ್ರವಹಿಸಿದ್ದು, ಭಾಗವತ ಮತವನ್ನು ಪ್ರಚಾರ ಮಾಡುತ್ತಲೇ ಇದ್ದರು. ಶಿಷ್ಟ ಸಂಪ್ರದಾಯದ ರಂಗನಾಥನನ್ನು ಆರಾಧಿಸುವುದರಲ್ಲಿ ಆಳ್ವಾರರ ಪಾತ್ರ ಮಹತ್ವದ್ದಾಗಿದೆ. ಆಳ್ವಾರ ಎಂದರೆ ಭಗವದ್ಧ್ಯಾನದಲ್ಲೂ, ಭಗವದ್ಭಕ್ತಿಯಲ್ಲೂ, ಕೈಂಕರ್ಯದಲ್ಲೂ ಸದಾ ಮುಳುಗಿದ್ದುದರಿಂದ ಇವರಿಗೆ ಆಳ್ವಾರ್ ಎಂದು ಕರೆಯುವರು.[೨೨] ಇವರ ನಂಬಿಕೆಯ ಪ್ರಕಾರ ಭಕ್ತರ ಉದ್ಧಾರಕ್ಕಾಗಿ ಮಹಾವಿಷ್ಣು ಹಲವು ರೂಪಗಳನ್ನು ತಾಳಿರುವನು. ವೈಕುಂಠದಲ್ಲಿ ಪರವಾಸುದೇವ ರೂಪ, ಕ್ಷೀರಾಬ್ಧಿಯಲ್ಲಿ ವ್ಯೂಹರೂಪ, ಭೂಲೋಕದಲ್ಲಿ ರಾಮಕೃಷ್ಣಾದಿಗಳ ಅವತಾರದಲ್ಲಿ ವಿಭವರೂಪ, ಯೋಗಿಗಳ ಹೃದಯದಲ್ಲಿ ಅಂತರ್ಯಾಮಿರೂಪ ಮತ್ತು ದೇವಸ್ಥಾನಗಳಲ್ಲಿ ಅರ್ಚಾರೂಪದಲ್ಲಿ ನೆಲೆಸಿದ್ದಾನೆ. ಕಲ್ಲು, ಮರ, ಕಂಚು ಮುಂತಾದ ಪ್ರತಿಮೆಗಳಲ್ಲಿ ಅಚಲರೂಪಿಯಾಗಿ ತನ್ನ ಭಕ್ತರಿಗೆ ದರ್ಶನ ನೀಡುತ್ತಾ ಅವರಿಂದ ಅರ್ಚಿಸಲ್ಪಡುತ್ತಿದಾನೆಂದು ಹೇಳಿದ ಆಳ್ವಾರರ ಕಾಲ ಕ್ರಿ.ಶ. ೭ ಮತ್ತು ೮ನೇ ಶತಮಾನವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೨೩] ಅಲ್ಲದೆ ಆಳ್ವಾರರ ಸಿದ್ಧಾಂತದಲ್ಲಿ ಜಾತಿ ಬೇಧವಿಲ್ಲ. ಇವರಲ್ಲಿ ಅಂತ್ಯಜರಿಂದ ಅಗ್ರಜರವರೆಗೆ ಎಲ್ಲರೂ ಇದ್ದಾರೆ. ದೇವರನ್ನು ಅರಿಯಲು ಜಾತಿಯ ಅಡತಡೆ ಇಲ್ಲವೆಂದು, ಭಕ್ತಿಯಿಂದ ಯಾರೂ ಬೇಕಾದರೂ ದೇವರ ಸಾಕ್ಷಾತ್ಕಾರ ಮಾಡಿಕೊಳ್ಳಬಹುದೆಂದೂ ಆಳ್ವಾರರು ಸಾರಿದ್ದಾರೆ. ಆದರೆ ಇವರು ರಂಗನಾಥನನ್ನು

ಅಚಲರೂಪದಲ್ಲಿಯೇ ಕಂಡುಕೊಳ್ಳುವ ಬಗೆಯನ್ನು ಹೊಂದಿದ್ದವರು. ಹೀಗಾಗಿ ಬಹುಶಃ ಮೂಲ ರಂಗನಾಥನ ಸಾಲಿಗ್ರಾಮದ ಜೊತೆಗೆ ವಿಷ್ಣುವಿನ ಶಯನರೂಪದ ಶಿಲ್ಪವನ್ನು ಪ್ರತಿಷ್ಠಾಪಿಸಿ ಆರಾಧಿಸಿರಬಹುದೆಂದು ತಿಳಿಯಬಹುದು. ಅಥವಾ ಈ ನಿಟ್ಟಿನಲ್ಲಿ ಊಹಿಸಬಹುದು.

ಇವರ ನಂತರ ಆಚಾರ್ಯ ಪರಂಪರೆ ಆರಂಭವಾಗಿ ಮುಂದುವರೆದುಕೊಂಡು ಬಂದಿತು. ಇವರಲ್ಲಿ ಶ್ರೀ ರಾಮಾನುಜರ (ಕ್ರಿ.ಶ. ೧೦೧೭–೧೧೩೭) ಕಾಲದಲ್ಲಿ ನಾರಾಯಣನೇ ಸರ್ವೋತ್ತಮನೆಂದು ನಂಬಿ, ವೈಷ್ಣವ ಮತಕ್ಕೆ ಹೊಸ ರೂಪವನ್ನು ಕೊಟ್ಟರು. ಹೀಗೆ ತಮಿಳುನಾಡಿನ ವೈಷ್ಣವ ಧರ್ಮವು ಬಹುಶಃ ಕ್ರಿಸ್ತಶಕದ ಆದಿಯ ಶತಕಗಳಲ್ಲಿ ಆರಂಭವಾದರೂ ಅದರ ನಿಯೋಜನೆ ಕಾರ್ಯವನ್ನು ನಾಥಮುನಿಗಳೇ ಆರಂಭಿಸಿದ್ದರೂ, ಅದಕ್ಕೆ ಪೂರ್ಣರೂಪವು ಒದಗಿ ಅದೊಂದು ಸಿದ್ಧಾಂತವಾಗಿ ನೆಲೆಗೊಂಡಿದ್ದು ಕ್ರಿ.ಶ. ೧೨ನೇ ಶತಮಾನದಲ್ಲಿ ಶ್ರೀರಾಮಾನುಜಾಚಾರ್ಯರಿಂದ.[೩೪] ಮುಂದೆ ಅದು 'ಶ್ರೀವೈಷ್ಣವಧರ್ಮ'ವಾಗಿ ಪ್ರಚಲಿತಕ್ಕೆ ಬಂದಿತು. ಹೀಗೆ ಕರ್ನಾಟಕಕ್ಕೆ ಶ್ರೀವೈಷ್ಣವಧರ್ಮ ಪ್ರಬಲವಾಗಿ ಅದರ ಆಚಾರ್ಯರಾದ ರಾಮಾನುಜರೊಡನೆ ಪ್ರವೇಶ ಮಾಡಿತು. ಇವರು ಕರ್ನಾಟಕದ ರಾಮನಾಥ, ಮಿರ್ಲೆ, ಸಾಲಿಗ್ರಾಮ, ತೊಂಡನೂರ, ಮೇಲುಕೋಟೆ ಮುಂತಾದ ವಿವಿಧ ಭಾಗಗಳಲ್ಲಿ ತಂಗಿದ್ದರು. ಇವರ ಪ್ರಭಾವಕ್ಕೆ ಒಳಗಾಗಿ ಕ್ರಿ.ಶ. ೧೦೯೩ರಲ್ಲಿ ಹೊಯ್ಸಳ ಬಿಟ್ಟಿದೇವನು ವೈಷ್ಣವ ದೀಕ್ಷೆಯನ್ನು ಸ್ವೀಕರಿಸಿ ವಿಷ್ಣುವರ್ಧನನಾದನೆಂದು ಪ್ರತೀತಿ ಇದೆ.[೩೫]

ಶ್ರೀರಾಮಾನುಜಾಚಾರ್ಯರು ಮೊದಲು ಶ್ರೀರಂಗಂನಲ್ಲಿ ನೆಲೆಸಿದ್ದರಿಂದ ಅವರು ಶ್ರೀರಂಗನಾಥನ ಪರಮಭಕ್ತರಾಗಿದ್ದರು. ಆದರೆ ಇವರು ಕರ್ನಾಟಕಕ್ಕೆ ಬರುವ ಮೊದಲೇ ರಂಗ ಸಂಪ್ರದಾಯವು ಈ ಮೊದಲು ತಿಳಿಸಿದ ನಾಲ್ಕು ಹಂತಗಳಲ್ಲಿಯೂ ಅಸ್ತಿತ್ವದಲ್ಲಿದ್ದು, ಯಾವುದೇ ಒಂದು ವರ್ಗ, ಧರ್ಮ, ಮತ, ಪಂಥಗಳಿಗೆ ಅಂಟಿಕೊಳ್ಳದೇ ತನ್ನ ನೆಲೆಯಲ್ಲಿ ನೆಲೆಗೊಂಡಿತ್ತು. ಆದರೆ ಶ್ರೀವೈಷ್ಣವಧರ್ಮ ಕರ್ನಾಟಕಕ್ಕೆ ಪ್ರವೇಶಿಸಿದ ಕಾಲಘಟ್ಟದಲ್ಲಿ ಅದು ನಾಲ್ಕು ಹಂತದ ರಂಗ ಸಂಪ್ರದಾಯವನ್ನು ತನ್ನೊಳಗೆ ಒಳಗುಮಾಡಿಕೊಂಡು ಶಿಷ್ಟ ಪರಂಪರೆಯ ಸ್ಪಷ್ಟ ರೂಪವನ್ನು ನೀಡಿತು. ಒಳಗುಮಾಡಿಕೊಳ್ಳುವ ಹಂತದಲ್ಲಿ ಶ್ರೀವೈಷ್ಣವಧರ್ಮ ತನ್ನದೇ ಆದ ಕಥೆ, ಐತಿಹ್ಯ, ಪುರಾಣ, ಸ್ಥಳ ಪುರಾಣ, ಆಚರಣೆ, ನಂಬಿಕೆಗಳನ್ನು ಸೃಷ್ಟಿಸಿ ಮೊದಲೇ ಅಸ್ತಿತ್ವದಲ್ಲಿದ್ದ ರಂಗ ಸಂಪ್ರದಾಯದ ಮೇಲೆ ಹೇರಿತೆಂಬುದು ಸ್ಪಷ್ಟ. ಅಷ್ಟೇ ಅಲ್ಲದೆ ಅಸ್ತಿತ್ವದಲ್ಲಿರುವ ಎಲ್ಲ ರಂಗ ದೇವಾಲಯಗಳ ಮೇಲೆಯು ಪ್ರಭಾವ ಬೀರಿತು. ಹೀಗಾಗಿ 'ಶ್ರೀವೈಷ್ಣವಧರ್ಮ'ವನ್ನು ಸ್ವೀಕರಿಸಿದ ಎಲ್ಲ ರಾಜಮನೆತನಗಳು ಅದರಲ್ಲೂ ವಿಶೇಷವಾಗಿ ವಿಜಯನಗರ ಸಾಮ್ರಾಜ್ಯವು ಕರ್ನಾಟಕದಲ್ಲಿ ನಾಲ್ಕು ಹಂತದ ನೆಲೆಯಲ್ಲಿ ನೆಲೆಗೊಂಡಿರುವ ರಂಗನನ್ನು, ರಂಗನಾಥನನ್ನಾಗಿಸಿಕೊಂಡು ಈ

ಸಂಪ್ರದಾಯವನ್ನು ಪ್ರೋತ್ಸಾಹಿಸಿದರು. ಜೊತೆಗೆ ಮೂಲ ಹಂತದ ಎಲ್ಲ ಲಕ್ಷಣಗಳನ್ನು ಒಳಗೊಂಡು ಆಗಲೇ ಅಸ್ತಿತ್ವದಲ್ಲಿದ್ದ ರಂಗನ ನೆಲೆಗಳಿಗೆ ರಾಜಾಶ್ರಯದಡಿಯಲ್ಲಿ ದೇವಾಲಯಗಳನ್ನು ನಿರ್ಮಿಸಿದರು. ಅಷ್ಟೇ ಅಲ್ಲದೆ ಇವರ ಕಾಲಾವಧಿಯಲ್ಲಿ ಬೇಟೆರಂಗನನ್ನು ಸೂಚಿಸುವ ಒಂದು ಹೊಸ ಮೂರ್ತಿಶಿಲ್ಪಕ್ಕೆ ದೇವಾಲಯದಲ್ಲಿ ಸ್ಥಳವನ್ನು ನೀಡಿರುವುದು ಗಮನಾರ್ಹ.

ಮುಖ್ಯವಾಗಿ ಶ್ರೀ ರಾಮಾನುಜರು ಶ್ರೀವೈಷ್ಣವಧರ್ಮದ ಪ್ರಚಾರವನ್ನು ಕೈಗೊಂಡು ಸಹಸ್ರಾರು ಜನರಿಗೆ ದೀಕ್ಷೆಯನ್ನು ಅನುಗ್ರಹಿಸಿದ್ದರು. ಅವರ ಮೂಲ ಉದ್ದೇಶ ಧರ್ಮ ಪ್ರಚಾರ ಮತ್ತು ಶ್ರೀವೈಷ್ಣವ ಧರ್ಮದಡಿಯಲ್ಲಿ ತನ್ನದೇ ಆದ ಶ್ರೀವೈಷ್ಣವ ಧರ್ಮದ ಪಂಥಗಳನ್ನು ಸೃಷ್ಟಿ ಮಾಡುವುದಾಗಿತ್ತು. ಈ ಹಿನ್ನೆಲೆಯಲ್ಲಿ ಅನ್ಯಮತಸ್ಥರಿಗೆ 'ಶ್ರೀವೈಷ್ಣವ ಪಂಚ ಸಂಸ್ಕಾರ' ಎಂಬ ಮತದೀಕ್ಷೆಯನ್ನು ಕೊಟ್ಟು ತನ್ನ ಪರಂಪರೆಯ ತೆಕ್ಕೆಗೆ ತೆಗೆದುಕೊಳ್ಳುವಲ್ಲಿ ಪ್ರಯತ್ನಿಸಿತು.[೩೬] ಆದರೆ ರಂಗ ಸಂಪ್ರದಾಯವು ಯಾವ ತನ್ನ ಮೂಲ ಬೇರುಗಳನ್ನು ಬಿಡದೇ ಪರಂಪರಾನುಗತವಾಗಿ ಮುಂದುವರೆಸಿಕೊಂಡು, ಅವುಗಳ ಜೊತೆಯಲ್ಲಿಯೇ ಹೊಸ ಪಂಥದ ಸಂಪ್ರದಾಯಗಳನ್ನು ಒಳಗುಮಾಡಿಕೊಂಡು ಪ್ರಸ್ತುತ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದೆ.

ಹೀಗೆ ಶಿಷ್ಟ ಪರಂಪರೆಯಲ್ಲಿ ಗುರುತಿಸಿಕೊಂಡ ರಂಗನಾಥ ರಾಜಾಶ್ರಯವನ್ನು ಪಡೆದರೂ, ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದರೂ ಆಳರಸರಿಂದ ಯಥೇಚ್ಚವಾಗಿ ದಾನದತ್ತಿಗಳನ್ನು ಪಡೆಯದೆ ಇರುವುದು ಗಮನಾರ್ಹ. ಪ್ರಸ್ತುತ ಕರ್ನಾಟಕದಲ್ಲಿ ಶ್ರೀರಂಗಪಟ್ಟಣ ರಂಗನಾಥ ದೇವಾಲಯವು ಪ್ರಮುಖವಾದ ದೇವಾಲಯವಾಗಿದೆ. ಈ ದೇವಾಲಯದ ಗರ್ಭಗೃಹವನ್ನು ಕ್ರಿ.ಶ. ೮೧೭ನೇ ಸಂವತ್ಸರದ ಹಿಂದೆ ವೇಶ್ಯೆ ಜಾತಿಯ ಹಂಬಿ ಎಂಬ ಪ್ರಸಿದ್ಧವಾದ ಹೆಂಗಸು ಕಟ್ಟಿಸಿದಳೆಂದು ತಿಳಿದುಬರುತ್ತದೆ. ಕ್ರಿ.ಶ. ೮೯೪ನೇ ಸಂವತ್ಸರದಲ್ಲಿ ಗಂಗರಸರು ಆಳುತ್ತಿರುವಾಗ ತಿರುಮಲಯ್ಯನೆಂಬಾತನು ನವರಂಗ ಮಂಟಪವನ್ನು ಮತ್ತು ಮಹಾದ್ವಾರದ ಎಡಪಾರ್ಶ್ವದಲ್ಲಿ ತಿರುಮಲ ದೇವರಿಗೆ ಒಂದು ದೇವಾಲಯವನ್ನು ಕಟ್ಟಿಸಿ ತಿರುಮಲ (ಶ್ರೀನಿವಾಸ) ದೇವರನ್ನು ಪ್ರತಿಷ್ಠೆ ಮಾಡಿಸಿ 'ಶ್ರೀರಂಗಪುರಿ' ಎಂದು ಈ ಊರಿಗೆ ಹೆಸರಿಟ್ಟನೆಂದು ಪ್ರಚಲಿತದಲ್ಲಿದೆ.

ನಂತರದಲ್ಲಿ ಕಲ್ಯಾಣ ಚಾಲುಕ್ಯರ ಮನೆತನದ ಒಂದು ಶಾಸನ ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ ತಾಲೂಕಿನ ಯಾತನೂರು ಗ್ರಾಮದಲ್ಲಿ ದೊರಕಿದೆ. ಈ ಗ್ರಾಮವನ್ನು ಆರನೇ ವಿಕ್ರಮಾದಿತ್ಯನಿಂದ ಸರ್ವಮಾನ್ಯವಾಗಿ ಪಡೆದ ಮುದ್ದಿಗಲ್ಲ ಭಟ್ಟೋಪಾಧ್ಯಾಯರು ೧೦೨೧ರಲ್ಲಿ ಏವಂತನೂರಲ್ಲಿ ಶ್ರೀರಂಗ ದೇವಾಲಯವನ್ನು ನಿರ್ಮಿಸಿ ದೇವರ ಸೇವೆಗೆಂದು ೩೦ ಮೊತ್ತರ ಹೊಲ, ೪೫೦ ಕಮ್ಮತೋಟ ಹಾಗೂ ಇನ್ನಿತರ ಸುಂಕಗಳನ್ನು ದಾನಕೊಟ್ಟ ವಿಷಯಗಳನ್ನು ತಿಳಿಸುತ್ತದೆ. ಜೊತೆಗೆ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಭೂಮಿಯನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ಪ್ರಸ್ತುತ

ಶಾಸನವು ಮಹತ್ವದ್ದಾಗಿದ್ದು, ಶ್ರೀರಂಗನನ್ನು ಸೂಚಿಸುವ ಈ ಮನೆತನದ ಒಂದೇ ಒಂದು ಶಾಸನವಾಗಿದೆ. ಪ್ರಸ್ತುತ ದೇವಾಲಯವು ಸಂಪೂರ್ಣವಾಗಿ ಭಗ್ನಗೊಂಡಿದ್ದು, ಊರ ದಕ್ಷಿಣಕ್ಕೆ ಇರುವ ಹನುಮಂತನ ಗುಡಿಯ ಪರಿಸರವೇ ಶಾಸನೋಕ್ತ ಶ್ರೀರಂಗ ದೇವಾಲಯವಿದ್ದ ಸ್ಥಳವೆಂದು ತೋರುತ್ತದೆ. ಇಲ್ಲಿ ದೇವಾಲಯದ ಪ್ರಾಚೀನ ದ್ವಾರಬಂಧ, ಕಂಬ, ಅವಶೇಷಗಳು ಚದುರಿಕೊಂಡಿರುವುದು ಕಂಡುಬರುತ್ತದೆ.[೩೭]

ಕಲ್ಯಾಣ ಚಾಲುಕ್ಯರ ನಂತರ ಅಧಿಕಾರಕ್ಕೆ ಬಂದ ಹೊಯ್ಸಳರು ಶ್ರೀವೈಷ್ಣವ ಧರ್ಮಕ್ಕೆ ವಿಶೇಷ ಪ್ರೋತ್ಸಾಹವನ್ನು ನೀಡಿದರು. ತಮಿಳುನಾಡಿನಿಂದ ಆಗಮಿಸಿದ ಶ್ರೀರಾಮಾನುಜಾಚಾರ್ಯರ ಪ್ರಭಾವದಿಂದ ಬಿಟ್ಟಿದೇವನು ಶ್ರೀವೈಷ್ಣವಧರ್ಮವನ್ನು ಸ್ವೀಕರಿಸಿದ್ದು ತಿಳಿದುಬರುತ್ತದೆ. ಈ ಕಾಲಾವಧಿಯಲ್ಲಿ ಹೊಯ್ಸಳ ಅರಸನಾದ ವಿಷ್ಣುವರ್ಧನ, ಎರಡನೇ ವೀರನರಸಿಂಹ, ಸೋಮೇಶ್ವರ, ರಾಮನಾಥ ಅರಸರುಗಳು ಉದಾರವಾಗಿ ತಮಿಳುನಾಡಿನ ಶ್ರೀರಂಗನಾಥ ದೇವಾಲಯಕ್ಕೆ ದಾನಕೊಟ್ಟಿರುವರು.[೩೮] ಆದರೆ ಈ ಮನೆತನದ ಅರಸರು ಕರ್ನಾಟಕದ ರಂಗನಾಥ ದೇವಾಲಯಗಳಿಗೆ ದಾನ ನೀಡಿರುವುದು ತುಂಬಾ ವಿರಳ. ಕ್ರಿ.ಶ. ೧೨೧೦ ರ ಕಾಲಾವಧಿಯ ಒಂದು ಶಾಸನ ಶ್ರೀರಂಗಪಟ್ಟಣ ರಂಗನಾಥಸ್ವಾಮಿ ದೇವಾಲಯದ ಗರ್ಭಗೃಹದ ಹೊರಗೋಡೆಯ ದಕ್ಷಿಣ ತಳಪಾದಿಯ ಕೆಳಪಟ್ಟಿಯಲ್ಲಿದ್ದು, ದೇವಾಲಯದ ಬಗೆಗೆ ಯಾವುದೇ ವಿವರಣೆಯನ್ನು ನೀಡಿರುವುದಿಲ್ಲ. ಇದು ತಮಿಳು ಮತ್ತು ಸಂಸ್ಕೃತ ಭಾಷೆಯಲ್ಲಿದೆ.[೩೯] ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕಿನ ಇಟ್ಟಿಗೆಯ ಕ್ರಿ. ಶ. ೧೧೯೪ ರ ಹಿತ್ತಾಳೆ ಶಾಸನವು ಹೊಯ್ಸಳ ವೀರಬಲ್ಲಾಳನ ಅನುಮತಿಯನ್ನು ಪಡೆದು ಸಿಂಗೆಯಪ್ಪನು ಗುಡ್ಡದ ಮೇಲಿನ ರಂಗನಾಥ ದೇವರಿಗೆ ದಾನವನ್ನು ಬಿಟ್ಟಿದ್ದನ್ನು ತಿಳಿಸುತ್ತದೆ.[೪೦] ಅಲ್ಲದೇ ಕೊಪ್ಪಳ ಜಿಲ್ಲೆಯ ಅಳವಂಡಿಯ ಕ್ರಿ. ಶ. ೧೨೦೪ ರ ವೀರಬಲ್ಲಾಳನ ಶಾಸನವು ಹೆಚ್ಚು ತ್ರುಟಿತಗೊಂಡಿದ್ದು, ಶ್ರೀರಂಗನಾಥ ದೇವರಿಗೆ ದಾನ ಬಿಟ್ಟಿರುವುದನ್ನು ತಿಳಿಸಿದರು ಯಾವ ರಂಗನಾಥ ದೇವಾಲಯವೆಂದು ತಿಳಿದುಬರುವುದಿಲ್ಲ.[೪೧] ಹೀಗೆ ಹೊಯ್ಸಳ ಕಾಲದ ಶಾಸನಗಳು ಅಲ್ಪ ಮಾಹಿತಿಯನ್ನು ನೀಡುತ್ತವೆ.

ನಂತರ ವಿಜಯನಗರ ಕಾಲಾವಧಿಯಲ್ಲಿ ರಂಗನಾಥ ಸಂಪ್ರದಾಯವು ಹೆಚ್ಚು ಪ್ರಚಲಿತಕ್ಕೆ ಬಂದಿತು. ವಿಜಯನಗರ ಸಾಮ್ರಾಜ್ಯದ ವೈಭವ ಕಾಲದಲ್ಲಿ ಸಂಗಮ, ಸಾಳುವ, ತುಳು, ಅರವೀಡು ವಂಶಗಳ ಅರಸರ ಆಳ್ವಿಕೆಯಲ್ಲಿ ಶೈವ, ವೀರಶೈವ, ವೈಷ್ಣವ, ಜೈನ ಪಂಥಿಯರೊಂದಿಗೆ ಶ್ರೀವೈಷ್ಣವ ಧರ್ಮಕ್ಕೂ ಮನ್ನಣೆ ದೊರಕಿತು. ಶ್ರೀಕೃಷ್ಣದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯರ ಕಾಲದಲ್ಲಿ ಶ್ರೀವೈಷ್ಣವ ಧರ್ಮ ಹೆಚ್ಚು ಪ್ರೋತ್ಸಾಹ ಪಡೆಯಿತು. ಆದರೆ ವಿಜಯನಗರ ಕಾಲಾವಧಿಯಲ್ಲಿ ಯಾಕೆ ರಂಗನಾಥ ದೇವಾಲಯಗಳು ಮತ್ತು ರಂಗನಾಥ

ಸಂಪ್ರದಾಯ ಹೆಚ್ಚು ಪ್ರಚಲಿತಗೊಂಡವು. ಅಲ್ಲದೆ ವಿಜಯನಗರ ನಂತರದ ಪಾಳೆಯಗಾರರ ಕಾಲಾವಧಿಯಲ್ಲಿ ಯಾಕೆ ರಂಗನಾಥ ಸಂಪ್ರದಾಯ ವ್ಯಾಪಕವಾಗಿ ಹರಡಿಕೊಂಡಿತು. ಈ ನಿಟ್ಟಿನಲ್ಲಿ ಗಮನಿಸುವುದಾದರೆ ವಿಜಯನಗರ ಅರಸರ ಕಾಲದಲ್ಲಿ ಬಹಳಷ್ಟು ಪಾಳೆಯಗಾರರು ಹುಟ್ಟಿಕೊಂಡರು. ಇವರು ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಅಲ್ಲದೆ ಪಾಳೆಯಗಾರರಲ್ಲಿ ಬಹುತೇಕವಾಗಿ ಬೇಡರೇ ಅಧಿಕ ಸಂಖ್ಯೆಯಲ್ಲಿದ್ದರು. ಹೀಗಾಗಿ ಬೇಡ ಜನಾಂಗ ಮೂಲತಃ ಬುಡಕಟ್ಟು ನೆಲೆಯಿಂದಲೇ ಬಂದವರಾಗಿದ್ದರು. ಇವರೆಲ್ಲರ ಆರಾಧ್ಯ ದೈವ ಪರಂಪರೆಯಿಂದ ಬಂದ ಬೇಟೆರಂಗನಾಗಿದ್ದು, ಇತನ ಆರಾಧನೆಯನ್ನು ಜನಸಮುದಾಯಗಳು ಬಿಟ್ಟಿರಲಿಲ್ಲ. ಕಾರಣ ಇದು ಜನಸಮುದಾಯದಲ್ಲಿ ನೆಲೆಗೊಂಡ ಸಂಪ್ರದಾಯವಾಗಿತ್ತು. ಈ ಕಾಲದಲ್ಲಿ ಪ್ರಭಲ ಸಾಮ್ರಾಜ್ಯದ ಅಧೀನದಲ್ಲಿದ್ದರು, ಪ್ರಭಾವಿ ದೇವ-ದೇವತೆಗಳಿದ್ದರೂ ಬೇಟೆರಂಗನ ಆರಾಧನೆಯು ಮುಂದುವರೆದು ರಾಜಾಶ್ರಯವನ್ನು ಪಡೆದುಕೊಂಡಿತು. ಅಷ್ಟೇ ಅಲ್ಲದೆ ಪ್ರಾರಂಭದ ಹಂತದಿಂದಲೂ ಬಂದ ನಾಲ್ಕು ಹಂತದ ರಂಗನಾಥ ಸಂಪ್ರದಾಯವನ್ನು ಒಪ್ಪಿಕೊಂಡು ಮುಂದುವರೆಸಿದ್ದು ಕರ್ನಾಟಕದಲ್ಲಿರುವ ಸುಮಾರು ೨೭೪ ಕ್ಕೂ ಹೆಚ್ಚು ದೇವಾಲಯಗಳು ಸಾಕ್ಷಿಯಾಗಿವೆ.

ವಿಜಯನಗರ ಕಾಲಾವಧಿಯಲ್ಲಿ ರಂಗನಾಥ ಸಂಪ್ರದಾಯವು ಮುಂದುವರೆದರು ಈ ಹಂತದಲ್ಲಿ ನಿರ್ಮಿಸಿದ ದೇವಾಲಯಗಳು ತುಂಬಾ ವಿರಳ. ಹಾಗೆಯೇ ಶಾಸನಗಳು ಸಹ ವಿರಳವಾಗಿವೆ. ಆದರೆ ವಿಜಯನಗರದ ಅರಸರು ಶ್ರೀವೈಷ್ಣವ ಧರ್ಮದ ಸಂಪರ್ಕದಿಂದಾಗಿ ತಮಿಳುನಾಡಿನ ಶ್ರೀರಂಗಂ ರಂಗನಾಥ ದೇವಾಲಯಕ್ಕೆ ಉದಾರವಾದ ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ. ಮುಖ್ಯವಾಗಿ ಕಂಪಣ, ಬುಕ್ಕ, ವಿರೂಪಾಕ್ಷ, ವೀರಭೂಪತಿ, ಮೊದಲನೆ ದೇವರಾಯ, ವಿಜಯಭೂಪತಿ, ಎರಡನೆ ದೇವರಾಯ, ಪ್ರೌಢ ದೇವರಾಯ, ಮಲ್ಲಿಕಾರ್ಜುನ, ವೀರನರಸಿಂಹ, ಕೃಷ್ಣದೇವರಾಯ, ತಿರುಮಲದೇವಮಹಾರಾಯ, ಅಚ್ಯುತದೇವ ಮಹಾರಾಯ, ಸದಾಶಿವರಾಯ, ಶ್ರೀರಂಗ, ವೆಂಕಟ, ಮೂರನೆ ಶ್ರೀರಂಗ ಮುಂತಾದ ಅರಸರುಗಳ ಕಾಲಾವಧಿಯಲ್ಲಿ ಅನೇಕ ಶಾಸನಗಳನ್ನು ಶ್ರೀರಂಗಂ ದೇವಾಲಯಕ್ಕೆ ನೀಡಿರುವುದು ಕಂಡುಬರುತ್ತದೆ.[೪೨] ಶ್ರೀರಂಗಂ ದೇವಾಲಯವು ವಿಜಯನಗರ ಸಂಗಮರ ಪೂರ್ವದಿಂದ ಸಾಮ್ರಾಜ್ಯದ ಕೊನೆಯವರೆಗೂ ರಾಜಾಶ್ರಯವನ್ನು ಅನುಭವಿಸಿದ ಪ್ರಮುಖ ಏಕೈಕ ದೇವಾಲಯವಾಗಿದೆ.

ಕರ್ನಾಟಕದಲ್ಲಿ ಶ್ರೀರಂಗಪಟ್ಟಣವು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟು ಅವರ ಪ್ರತಿನಿಧಿಯಾಗಿ ಬಂದವರಲ್ಲಿ ಶ್ರೀರಂಗರಾಯರು ಶ್ರೀರಂಗಪಟ್ಟಣದ ರಂಗನಾಥ ದೇವಾಲಯದ ಒಳಪ್ರಾಕಾರವನ್ನು ಕಟ್ಟಿಸಿ, ದೇವಾಲಯವನ್ನು ವಿಸ್ತರಿಸಿದ್ದರೆಂದು ತಿಳಿದುಬರುತ್ತದೆ. ವಿಜಯನಗರ

ಕಾಲಾವಧಿಯಲ್ಲಿ ಶ್ರೀರಂಗಪಟ್ಟಣ ದೇವಾಲಯ ಒಂದೇ ಪ್ರಮುಖ ದೊಡ್ಡ ದೇವಾಲಯವಾಗಿದೆ. ಇವರು ರಂಗನಾಥ ಸಂಪ್ರದಾಯಕ್ಕೆ ಆಶ್ರಯ ನೀಡಿದ್ದರೂ, ದೇವಾಲಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಿಸಿರುವುದು ಕಂಡುಬಂದಿಲ್ಲ. ಅವರ ಸಾಮ್ರಾಜ್ಯದ ರಾಜ್ಯಧಾನಿಯಾದ ಹಂಪಿಯಲ್ಲಿ ಒಂದು ಹಾಗೂ ಆನೆಗೊಂದಿಯಲ್ಲಿ ಎರಡು ರಂಗನಾಥ ದೇವಾಲಯಗಳು ಕಂಡುಬರುತ್ತವೆ. ಆದರೆ ಈ ದೇವಾಲಯಗಳು ಸಣ್ಣ ಪ್ರಮಾಣದ ಕಟ್ಟಡವನ್ನು ಹೊಂದಿವೆ.

ಮುಖ್ಯವಾಗಿ ಕೃಷ್ಣದೇವರಾಯನ ಕಾಲದಲ್ಲಿ ಚಾಮರಾಜನಗರ ಜಿಲ್ಲೆಯ ಉಮ್ಮತ್ತೂರು, ರಾಮನಗರ ಜಿಲ್ಲೆಯ ಮಾಗಡಿ, ತುಮಕೂರು ಜಿಲ್ಲೆಯ ಹಂದರಹಾಳು ಗ್ರಾಮಗಳಲ್ಲಿ ರಂಗನಾಥ ದೇವಾಲಯಗಳು ನಿರ್ಮಾಣಗೊಂಡವು. ಅಲ್ಲದೆ ಈ ದೇವಾಲಯಗಳಿಗೆ ಸಂಬಂಧಿಸಿದಂತೆ ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ಕ್ರಿ.ಶ. ೧೫೧೩[೪೩], ಕ್ರಿ.ಶ. ೧೫೨೬[೪೪], ಕ್ರಿ.ಶ.೧೫೩೧[೪೫] ರ ಈ ಶಾಸನಗಳು ಚಾಮರಾಜನಗರ ಜಿಲ್ಲೆಯ ಉಮ್ಮತ್ತೂರಿನ ರಂಗನಾಥ ದೇವಾಲಯಗಳಿಗೆ ಸಂಬಂಧಪಟ್ಟವುಗಳಾಗಿದ್ದು, ಶ್ರೀರಂಗನಾಥ ದೇವರ ಸೇವೆಗಾಗಿ ಕೃಷ್ಣದೇವರಾಯನ ಅಧಿಕಾರಿಗಳು ದಾನ ನೀಡಿರುವ ವಿಷಯವನ್ನು ತಿಳಿಸುತ್ತವೆ. ಅಲ್ಲದೆ ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಹಂದರಹಾಳು ಕ್ರಿ.ಶ. ೧೫೧೧[೪೬] ರ ಶಾಸನವು ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಕ್ರಿ.ಶ. ೧೫೨೪[೪೭] ರ ಮತ್ತು ಕ್ರಿ.ಶ. ೧೫೨೮[೪೮] ರ ಶಾಸನಗಳು ಕೃಷ್ಣದೇವರಾಯನಿಗೆ ಪುಣ್ಯವಾಗಲೆಂದು ಆತನ ಅಧಿಕಾರಿಗಳು ಈ ಸ್ಥಳದಲ್ಲಿರುವ ರಂಗನಾಥ ದೇವಾಲಯಗಳಿಗೆ ದಾನ ಬಿಟ್ಟಿರುವ ವಿಷಯವನ್ನು ಪ್ರಸ್ತಾಪಿಸುತ್ತವೆ. ಕ್ರಿ.ಶ. ೧೫೨೫[೪೯] ರ ಶಾಸನವು ಕೃಷ್ಣದೇವರಾಯನ ಕಾಲದ್ದಾಗಿದ್ದು, ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ರೌಡಕುಂದೆ ರಂಗನಾಥ ದೇವರಿಗೆ ದಾನ ನೀಡಿರುವ ವಿಷಯವನ್ನು ತಿಳಿಸುತ್ತದೆ.

ನಂತರದಲ್ಲಿ ವಿಜಯನಗರ ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಚಿತ್ರದುರ್ಗ ಜಿಲ್ಲೆ ಹಿರಿಯೂರ ತಾಲೂಕಿನ ಅಂಬಲಗೆರೆ ರಂಗನಾಥ ದೇವಾಲಯವು ನಿರ್ಮಾಣವಾಗಿದ್ದು, ಕ್ರಿ.ಶ.೧೪೭೬[೫೦], ಕ್ರಿ.ಶ.೧೫೫೪[೫೧] ರ ಶಾಸನಗಳು ದೇವಾಲಯಕ್ಕೆ ದಾನ ಬಿಟ್ಟಿರುವುದನ್ನು ತಿಳಿಸುತ್ತವೆ. ಶಾಸನಗಳಲ್ಲಿ ರಂಗನಾಥನನ್ನು ತಿರುವೆಂಗಳನಾಥನೆಂದು ಕರೆದಿರುವುದು ವಿಶೇಷವಾಗಿದೆ. ಹೀಗಾಗಿ ವಿಜಯನಗರದ ಸದಾಶಿವದೇವರಾಯನ ಕಾಲದಲ್ಲಿ ರಂಗನಾಥನಿಗೂ ತಿರುವೆಂಗಳನಾಥನೆಂದು ಕರೆಯುವುದು ಪ್ರಚಲಿತದಲ್ಲಿತ್ತು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೪೩೫[೫೨] ರ ಶಾಸನವು ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕಿನ ಬೆಳಗುತ್ತಿ ಹೊನ್ನಮರಡಿ ರಂಗನಾಥ ದೇವಾಲಯವನ್ನು ಹಿರಿಯಚವುಡನಾಯಕನು ಕಟ್ಟಿಸಿದ್ದುದರ ಕುರಿತು ತಿಳಿಸುತ್ತದೆ. ಕ್ರಿ.ಶ. ೧೫೫೨[೫೩]ರ ಶಾಸನವು ತುಮಕೂರು ಜಿಲ್ಲೆಯ ಮಧುಗಿರಿ ಮಹಾನಾಡು ಪ್ರಭುಗಳ ಕಾಲಕ್ಕೆ

ಸಂಬಂಧಿಸಿದ್ದಾಗಿದ್ದು, ಬಿಜ್ಜಾವರದ ಕೆಂಚಯ್ಯನಾಯಕರು ತುಂಗೋಟಿಯ ರಂಗನಾಥ ದೇವಾಲಯಕ್ಕೆ ದಾನ ಬಿಟ್ಟಿರುವುದನ್ನು ತಿಳಿಸುತ್ತದೆ.

ವಿಜಯನಗರದ ನಂತರ ಮೈಸೂರು ಒಡೆಯರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡಿದ್ದು, ಈ ಮನೆತನದ ಅರಸರು ಕೂಡ ಶ್ರೀರಂಗನಾಥನ ಆರಾಧಕರಾಗಿದ್ದರು. ಮುಖ್ಯವಾಗಿ ಶ್ರೀರಂಗಪಟ್ಟಣವು ಹೊಯ್ಸಳರ ಕಾಲದಲ್ಲಿ ಪ್ರಮುಖ ಅಗ್ರಹಾರವಾಗಿತ್ತು. ನಂತರ ವಿಜಯನಗರ ಸಾಮ್ರಾಜ್ಯದ ಅಡಿಯಲ್ಲಿ ಕ್ರಿ.ಶ. ೧೪೯೫ರಲ್ಲಿ ಪ್ರಾಂತೀಯ ಕೇಂದ್ರವಾಗಿದ್ದು, ಕ್ರಿ.ಶ. ೧೬೧೦ರಿಂದ ಮೈಸೂರು ಅರಸರ ರಾಜಧಾನಿಯಾಗಿತ್ತು. ಇವರ ಕಾಲಾವಧಿಯಲ್ಲಿಯೇ ಹೈದರ್ ಮತ್ತು ಟೀಪ್ಪುವಿನ ಕಾಲದವರೆಗೂ ಅವರ ರಾಜಧಾನಿಯಾಗಿಯೇ ಮುಂದುವರೆಯಿತು. ಮುಂದೆ ಟೀಪ್ಪುವಿನ ಮರಣದ ನಂತರ ತಮ್ಮ ಅಧಿಕಾರವನ್ನು ಪುನರಾರಂಭಿಸಿದ ಒಡೆಯರ ಮನೆತನ ಮೈಸೂರನ್ನು ಮತ್ತೆ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಮೈಸೂರು ಅರಸರ ಹೆಚ್ಚು ಶಾಸನಗಳು, ಶ್ರೀರಂಗಪಟ್ಟಣದ ರಂಗನಾಥನಿಗೆ ನೀಡಿರುವ ದಾನಗಳನ್ನು ಉಲ್ಲೇಖಿಸುತ್ತವೆ. ಒಡೆಯರ ಬಗೆಗೆ ರಚಿತವಾಗಿರುವ ಮಹಿಶೂರ ಶ್ರೀಮನ್ಮಹಾರಾಜ ಚಾಮರಾಜ ಒಡೆಯರ್‌ವರ ವಂಶರತ್ನಾಕರ, ಬಿ. ರಾಮಕೃಷ್ಣರಾವ್ ರಚಿಸಿರುವ ಶ್ರೀಮನ್‌ಮಹಾರಾಜ ವಂಶಾವಳಿ ಕೃತಿಗಳಲ್ಲಿ ಮೈಸೂರು ಅರಸರು ನೀಡಿದ ಕೊಡಗೆಗಳ ವಿವರಗಳಿವೆ. ಆದರೆ ಮೈಸೂರು ಒಡೆಯರು ಶ್ರೀರಂಗಪಟ್ಟಣದ ರಂಗನಾಥ ದೇವಾಲಯಕ್ಕೆ ಮಾತ್ರ ಹೆಚ್ಚಿನ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಅರಸರ ಕಾಲಾವಧಿಯಲ್ಲಿ ರಂಗನಾಥನ ಆರಾಧನೆಗೆ ಹೆಚ್ಚು ಪ್ರೋತ್ಸಾಹ ದೊರೆಕಿತು. ಅಷ್ಟೇ ಅಲ್ಲದೆ ಮೇಲುಕೋಟೆಯ ಚೆಲುವನಾರಾಯಣನಿಗೂ ಅಷ್ಟೇ ಮಹತ್ವವನ್ನು ನೀಡಿದರು. ಪ್ರಸ್ತುತ ಕಾಲಾವಧಿಯ ಸಾಹಿತ್ಯದಲ್ಲಿ ಶ್ರೀವೈಷ್ಣವ ಕವಿಗಳು ಮತ್ತು ಇತರರು ಮಹಾತ್ಮೆಗಳನ್ನು ಮತ್ತು ಪುರಾಣೇತಿಹಾಸಗಳನ್ನು ಗದ್ಯರೂಪದಲ್ಲಿ ಜನಪ್ರಿಯಗೊಳಿಸಿದರು. ಇವುಗಳಲ್ಲಿ ಶ್ರೀರಂಗಪಟ್ಟಣ ಮತ್ತು ಶ್ರೀರಂಗಂ ದೇವಾಲಯಕ್ಕೆ ಸಂಬಂಧಪಟ್ಟಂತೆ ಚಿಕ್ಕುಪಾಧ್ಯಾಯ ಮತ್ತು ತಿಮ್ಮಕವಿಯು ಮಹಾತ್ಮೆ, ಸಾಂಗತ್ಯ, ಚರಿತ್ರೆ ಸಂಬಂಧಪಟ್ಟಂತೆ ಕೃತಿಗಳನ್ನು ರಚಿಸಿದರು. ಟಿಪ್ಪುವಿನ ಕಾಲದಲ್ಲಿಯೂ ಶ್ರೀರಂಗಪಟ್ಟಣ ರಂಗನಾಥ ದೇವರಿಗೆ ಬೆಳ್ಳಿಯ ವಸ್ತುಗಳನ್ನು ದಾನ ನೀಡಿರುವ ಕುರಿತು ತಿಳಿದುಬರುತ್ತದೆ.

ಕ್ರಿ.ಶ.೧೫೬೫ ರಲ್ಲಿ ವಿಜಯನಗರ ಪತನದ ನಂತರ ಅಲ್ಲಲ್ಲಿ ಸಣ್ಣ ಪುಟ್ಟ ಸ್ವತಂತ್ರ ರಾಜ್ಯಗಳ ಉದಯವಾದವು. ಹೀಗಾಗಿ ವಿಜಯನಗರ ಅರಸರ ಪ್ರೋತ್ಸಾಹದಿಂದಾಗಿ ಅನೇಕ ಪಾಳೆಯಪಟ್ಟುಗಳು ಪ್ರಾಬಲ್ಯಕ್ಕೆ ಬಂದವು. ಇವುಗಳನ್ನು ಹಲವಾರು ಸಾಮಂತರಾಜರುಗಳು ಕೆಲವು ಬೇಡ ಯೋಧರು ಆಳುತ್ತಿದ್ದರು. ಪಾಳೆಯಗಾರರು ದಕ್ಷಿಣ ಭಾರತದಲ್ಲಿ ೧೬ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಅತ್ಯಂತ ಪ್ರಭಾವ ಶಾಲಿಗಳಾಗಿದ್ದರು. ಮುಖ್ಯವಾಗಿ ಬೇಡಯೋಧರಿಂದ ಸ್ಥಾಪಿತವಾದ ಬಳ್ಳಾರಿ, ಚಿತ್ರದುರ್ಗ, ತುಮಕೂರು ಪ್ರದೇಶದ ಪಾಳೆಯಗಾರರು ಪ್ರಮುಖವಾಗಿದ್ದು ಇವರು ಸುಮಾರು

೩೦೦ ವರ್ಷಗಳವರೆಗೆ (ಕ್ರಿ.ಶ.೧೪೪೫-೧೭೭೯) ರಾಜ್ಯವಾಳಿದರು. ಅಲ್ಲದೆ ಹೈದರಾಲಿ, ಟೀಪ್ಪುಸುಲ್ತಾನ, ಮರಾಠ ಹಾಗೂ ಬ್ರಿಟಿಷರ ಸಂಪರ್ಕವನ್ನು ಪಡೆದವರಾಗಿದ್ದರು. ಅಷ್ಟೇ ಅಲ್ಲದೆ ಗುಡೇಕೋಟೆ ಪಾಳೆಯಗಾರರು, ದೇವದುರ್ಗ ಪಾಳೆಯಗಾರರು, ಕನಕಗಿರಿ ಪಾಳೆಯಗಾರರು, ಮತ್ತೋಡು ಪಾಳೆಯಗಾರರು, ಉಮ್ಮತ್ತೂರಿನ ಪಾಳೆಗಾರರು, ಗುಮ್ಮನಾಯಕನಹಳ್ಳಿ ಪಾಳೆಯಗಾರರು, ಕೆಳದಿ ಮುಂತಾದವರ ಕಾಲದಲ್ಲಿ ರಂಗನಾಥನ ಆರಾಧನೆಗೆ ಪ್ರೋತ್ಸಾಹ ನೀಡಿದರು. ಈ ಪಾಳೆಯಗಾರರು ಪ್ರಭುತ್ವದ, ಸಾಮ್ರಾಜ್ಯದ ಆಶ್ರಯದಲ್ಲಿದ್ದರೂ, ತಮ್ಮ ಮೂಲ ಪರಂಪರೆಯ ಬೇಟೆರಂಗನ ಆರಾಧನೆಯನ್ನು ಮುಂದುವರೆಸಿಕೊಂಡು ಬಂದಿದ್ದರಿಂದ ಅದು ವಿಜಯನಗರ ಸಾಮ್ರಾಜ್ಯದ ಅಡಿಯಲ್ಲಿ ಶ್ರೀವೈಷ್ಣವ ಧರ್ಮದ ನೆರಳಿನಲ್ಲಿ ಗುರುತಿಸಿಕೊಂಡು ವ್ಯಾಪಕವಾಗಿ ವಿಸ್ತಾರವನ್ನು ಪಡೆಯಿತು.

ಮುಖ್ಯವಾಗಿ ಕರ್ನಾಟಕದಲ್ಲಿ ಸುಮಾರು ೨೭೪ಕ್ಕೂ ಹೆಚ್ಚು ದೇವಾಲಯಗಳು ರಂಗನಾಥನಿಗೆ ಸಂಬಂಧಿಸಿದವುಗಳಾಗಿದ್ದು, ಇವುಗಳಲ್ಲಿ ಕೆಲವು ಬೆರಳೆಣಿಕೆಯಷ್ಟು ದೇವಾಲಯಗಳನ್ನು ಬಿಟ್ಟರೆ ಉಳಿದ ದೇವಾಲಯಗಳು ಪಾಳೆಯಗಾರರ ಕಾಲಾವಧಿಯಲ್ಲಿ ಮತ್ತು ಸ್ಥಳೀಯ ಅಧಿಕಾರಿ, ಮುಖಂಡರ ಕಾಲದಲ್ಲಿ ನಿರ್ಮಿಸಿದ ದೇವಾಲಯಗಳಾಗಿವೆ. ಆದರೆ ಪಾಳೆಯಗಾರರ ಕಾಲದಲ್ಲಿ ದೊರತ ಶಾಸನಗಳು ತೀರ ಕಡಿಮೆ. ಮುಖ್ಯವಾಗಿ ರಂಗನಾಥನ ಆರಾಧನಾ ಸಂಪ್ರದಾಯವು ಜನಸಮುದಾಯದಲ್ಲಿಯೇ ನೆಲೆಗೊಂಡಿದ್ದರಿಂದ ಇವರು ತಮ್ಮ ದೈವಕ್ಕೆ ದೇವಾಲಯಗಳನ್ನು ನಿರ್ಮಿಸಿಕೊಂಡರು. ಹೊರತು ದಾನದತ್ತಿಗಳನ್ನು ನೀಡಿರುವುದನ್ನು ದಾಖಲಿಸದೇ ಇರುವುದು ಕಂಡುಬರುತ್ತದೆ.

ಬಳ್ಳಾರಿ ಪಾಳೆಯಗಾರರ ಕಾಲಾವಧಿಯಲ್ಲಿ ನಿರ್ಮಿಸಲ್ಪಟ್ಟ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ, ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದ ನೀರ್ಥಡಿ ರಂಗನಾಥ ದೇವಾಲಯ, ಸಿಂಗೇನಹಳ್ಳಿ ಕೋಟೆಯಲ್ಲಿರುವ ರಂಗನಾಥ ದೇವಾಲಯ ಮತ್ತು ವೇಣುಕಲ್ಲು ಗುಡ್ಡದ ಕೋಟೆಯಲ್ಲಿ ನಿರ್ಮಾಣವಾದ ರಂಗನಾಥ ದೇವಾಲಯ, ಮಧುಗಿರಿ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದ ತುಂಗವಟಿ, ದಾವಣಗೆರೆ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದ ದೇವರಹಳ್ಳಿ ರಂಗನಾಥ ದೇವಾಲಯ ಪ್ರಮುಖವಾಗಿದ್ದು, ಆಯಾ ಪಾಳೆಯಗಾರರ ಕಾಲಾವಧಿಯಲ್ಲಿ ನಿರ್ಮಾಣವಾಗಿರುವುದನ್ನು ಸೂಚಿಸುತ್ತವೆ. ಆದರೆ ಹೆಚ್ಚಿನ ದೇವಾಲಯಗಳಿಗೆ ಯಾವುದೇ ರೀತಿಯ ಆಧಾರಗಳು ದೊರೆಯುವುದಿಲ್ಲ. ದೇವಾಲಯದ ಕಲೆ ಮತ್ತು ವಾಸ್ತುಶಿಲ್ಪವನ್ನು ಗಮನಿಸಿದಾಗ ಪಾಳೆಯಗಾರರ ಕಾಲದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಸ್ಥಳೀಯವಾಗಿ ಜನರು ತಮ್ಮ ಪ್ರದೇಶದ ಪಾಳೆಯಗಾರರ ಹೆಸರುಗಳನ್ನು ಉಲ್ಲೇಖಿಸುತ್ತಾರೆ. ಅಲ್ಲದೆ ಮೌಖಿಕ ಆಕರಗಳಲ್ಲಿಯೇ ಅನೇಕ ಉಲ್ಲೇಖಗಳು ಕಂಡುಬರುತ್ತವೆ.

## ಅಡಿಟಿಪ್ಪಣಿಗಳು

೧. ಷೇಕಅಲಿ ಬಿ., ೧೯೯೭, ಕರ್ನಾಟಕ ಚರಿತ್ರೆ, ಸಂ.೧., ಪು.೩.

೨. ಶಿವತಾರಕ್ ಕೆ. ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು.

೩. ರೆಡ್ಡಿರಾಮದಾಸ್ ಎಸ್. ಜಿ., ೨೦೦೯, ಚಿತ್ರದುರ್ಗ ಜಿಲ್ಲೆಯ ಪಾಕ್ಚಾರಿತ್ರಿಕ ಅಧ್ಯಯನ, ಪು.೯೨.

೪. ಕೃಷ್ಣಮೂರ್ತಿ ಎಮ್.ಎಸ್., ಮಹಾದೇವಯ್ಯ ಎಂ.ಪಿ., ೧೯೯೯, ಕಲ್ಲುಸೇವೆ/ಕಲ್ಸೇವೆ (ಕಲ್ಲು ಸೇವೆ) ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಪರಂಪರೆಯೇ, ನಾಗರಾಜ್ ಎಂ. ಜಿ., ಕೃಷ್ಣಮೂರ್ತಿ ಪಿ. ವಿ.(ಸಂ.), ಇತಿಹಾಸ ದರ್ಶನ, ಸಂ.೧೪, ಪು.೧–೪.

೫. ಮೈಸೂರು ನಾಗರಾಜ ಶರ್ಮ., ೧೯೯೯, ಕಲ್ಲುಮಲ್ಲಯ್ಯ ಅಪರೂಪದ ಶವಸಂಸ್ಕಾರ, ನಾಗರಾಜ್ ಎಂ. ಜಿ., ಕೃಷ್ಣಮೂರ್ತಿ ಪಿ. ವಿ.(ಸಂ.), ಇತಿಹಾಸ ದರ್ಶನ, ಸಂ.೧೪, ಪು.೫–೭.

೬. ಕನ್ನಡ ಸಾಹಿತ್ಯ ಪರಿಷತ್ತು., ೨೦೧೩, ಸಂಕ್ಷಿಪ್ತ ಕನ್ನಡ ನಿಘಂಟು, ಪು.೧೦೭೮.

೭. ರಾಮಚಂದ್ರರಾವ್ ಸಾ. ಕೃ., ೧೯೮೦, ಭಾರತದ ದೇವಾಲಯ ನೆಲೆ–ಹಿನ್ನಲೆ, ಪು.೬.

೮. ಅದೇ, ಪು.೭.

೯. ಹಂಜಿ ಎಸ್.ವ್ಹಿ., ೨೦೧೧, ಸಂಸ್ಕೃತ ಕನ್ನಡ ಶಬ್ದಕೋಶ, ಪು. ೧೮೧.

೧೦. ಹಿರಿಯಳಿಕೆ ಅಂಬಣ್ಣ., ೧೯೯೯, ಮಲೆನಾಡಿನ ವೈಷ್ಣವರ ಒಕ್ಕಲಿಗರ ಸಂಸ್ಕೃತಿ, ಪು.೧೩೧.

೧೧. ಕ್ಷೇತ್ರಕಾರ್ಯ ಆಧರಿತ ಮಾಹಿತಿ.

೧೨. ಅದೇ

೧೩. ಅದೇ

೧೪. ಕಂಬಾರ ಚಂದ್ರಶೇಖರ.(ಸಂ.), ೧೯೮೫, ಕನ್ನಡ ಜಾನಪದ ವಿಶ್ವಕೋಶ, ಪು.೧೭೮.

೧೫. ಶಂಕರನಾರಾಯಣ ತೀ. ನಂ., ೧೯೮೨, ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪು.೬೫.

೧೬. ಅದೇ, ಪು.೬೯–೭೦.

೧೭. ಅದೇ

೧೮. ಅದೇ, ಪು.೭೦–೭೬

೧೯. ಅದೇ, ಪು.೮೦.

೨೦. ರಹಮತ್ ತರೀಕೆರೆ., ೨೦೧೩, ಕನಾಟಕದ ನಾಥಪಂಥ, ಪು.೬೩.

೨೧. ಅದೇ, ಪು.೮೫.

೨೨. ಅದೇ, ಪು.೬೬.

೨೩. ಶಿವಶಂಕರಪ್ಪ ಹ. ಜ., ಸಂಶೋಧನೆಯ ಕಮ್ಮಟದಲ್ಲಿ ಮಾದೇಶ್ವರ, ಪು.೧೪೭

೨೪. ಅದೇ, ಪುಟ–೧೬೩.

೨೫. ಹಿರೇಮಠ ಎಸ್.ಎಸ್. ೨೦೦೦, ಮೈಲಾರ ಪ್ರಾಚೀನ ಶೈವ ಪಂಥವಾಗಿ, ರಹಮತ್ ತರಿಕೇರಿ (ಸಂ), ಕನ್ನಡ ಅಧ್ಯಯನ, ಸಂ–೧, ಪುಟ. ೪೪.

೨೬. ಕನ್ನಡ ವಿಷಯ ವಿಶ್ವಕೋಶ (ಪರಿಷ್ಕೃತ), ೨೦೦೭, ಕರ್ನಾಟಕ ಸಂಪುಟ–೨, ಪುಟ.೪೪೨.

೨೭. ಅದೇ,

೨೮. ಶಿವಶಂಕರಪ್ಪ ಹ.ಜ., ೧೯೮೦, ಸಂಶೋಧನೆಯ ಕಮ್ಮಟದಲ್ಲಿ ಮಾದೇಶ್ವರ, ಪುಟ–೧೪೭.

೨೯. ಸೌ. ಇ. ಇ., ಸಂ–೨೪, ಪು.೨೧–೨೨.

೩೦. ಮಂಜಪ್ಪಶೆಟ್ಟಿ ಎಂ. ಪಿ., ೧೯೮೧, ಚಿಕ್ಕುಪಾಧ್ಯಾಯ ವಿರಚಿತ ಶ್ರೀರಂಗಮಹಾತ್ಮ್ಯಂ, ಪು. ೧೯–೨೫.

೩೧. ನಾಯಕ ಹಾ. ಮಾ. (ಪ್ರಸಂ.)., ೧೯೮೦, ತಿಮ್ಮಕವಿ ವಿರಚಿತ ಪಶ್ಚಿಮರಂಗಕ್ಷೇತ್ರಮಹಾತ್ಮ್ಯಂ, ಪು. ೧೬–೨೩.

೩೨. ವಿನೋದಾಬಾಯಿ ಎಸ್., ೧೯೬೯, ಅಂಡಾಳ್ ಮಹದೇವಿ ಮೀರ, ಪು.೨೨.

೩೩. ಚಿದಾನಂದಮೂರ್ತಿ ಎಂ., ೨೦೦೭, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೮೨.

೩೪. ಅದೇ.

೩೫. ಕೃಷ್ಣಸ್ವಾಮಿಅಯ್ಯಂಗಾರ್ ಎಚ್. ಎಸ್.(ಸಂ.)., ೧೯೮೫, ಅವಲೋಕನ, ಪು. ೧೭೩.

೩೬. ಮಂಜುನಾಥ ಸಿ. ಯು., ೨೦೧೧, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೧೧೧.

೩೭. ಪಾಟೀಲ ಎಂ. ಬಿ., ೧೯೯೭, ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (ಪರಿಷ್ಕೃತ), ಪು.೭೬೬.

೩೮. ಸೌ. ಇ. ಇ., ಪುರ್ವೋಕ್ತ.

೩೯. ಶ್ರೀಕಂಠೇಗೌಡ ಎಂ. ಎಲ್., ೨೦೦೮, ಶ್ರೀರಂಗಪಟ್ಟಣ ಐತಿಹಾಸಿಕ ಹಿನ್ನೆಲೆ ಒಂದು ಅಧ್ಯಯನ (ಅಪ್ರಕಟಿತ ಎಂ.ಫಿಲ್ ಪ್ರಬಂಧ), ಪು. ೯.

೪೦. ಎ. ಕ., ಸಂ.೧೨, ಸಂಖ್ಯೆ.೧೭, ಪು. ೩೫೫-೫೭.

೪೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-ಕೊಪ್ಪಳ ಜಿಲ್ಲೆ., ಪು.೧೫.

೪೨. ಸೌ. ಇ. ಇ., ಪುರ್ವೋಕ್ತ.

೪೩. ಪರಶಿವಮೂರ್ತಿ ಡಿ. ವಿ., ೨೦೧೦, ಕೃಷ್ಣದೇವರಾಯನ ಶಾಸನಗಳು, ಪು.೫೧೬.

೪೪. ಎ. ಕ., ಸಂ.೩, ಸಂಖ್ಯೆ.೫೨, ಪು.೪೩.

೪೫. ಪರಶಿವಮೂರ್ತಿ ಡಿ. ವಿ., ಪೂರ್ವೋಕ್ತ, ಪು.೫೩೦-೫೩೨.

೪೬. ಅದೇ, ಪು.೨೩.

೪೭. ಅದೇ, ಪು.೩೬೫.



೪೮. ಅದೇ, ಪು.೫೧೬.

೪೯. ಅದೇ, ಪು.೪೫.

೫೦. ಎ. ಕ., ಸಂ.೬., ಸಂಖ್ಯೆ.೨೨., ಹಿರಿಯೂರು, ಪು.೨೯೫.

೫೧. ಅದೇ, ಪು.೩೦೭.

೫೨. ಎ. ಕ., ಸಂ.೧೪., ಸಂಖ್ಯೆ.೭೩, ಪು.೧೭.

೫೩. ಗಂಗಾನಾಯಕ್ ಕೆ. ಎನ್.,೨೦೧೨, ಪಾಳೆಯಗಾರರ ಶಾಸನಗಳು. ಸಂ.೧, ಪು.೧೯೭.

## ಅಧ್ಯಾಯ–ಮೂರು

# ಐತಿಹ್ಯಗಳು

ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ, ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತವೆ. ತಲೆಮಾರುಗಳ ಮೂಲಕ ಹರಿದು ಬರುವಾಗ ಐತಿಹ್ಯವಾಗಿ ರೂಪಗೊಂಡ ಇಂತಹ ಘಟನೆಗಳು ಪ್ರಸ್ತುತ ಇತಿಹಾಸ ರಚನೆಗೆ ಪ್ರಮುಖ ಆಕರಗಳಲ್ಲಿ ಒಂದು ಎಂದು ಪರಿಗಣಿಸಲಾಗುತ್ತಿದೆ. ಐತಿಹ್ಯ ಎನ್ನುವುದು ನೇರವಾಗಿ ನೆಲದ ಅಭಿವ್ಯಕ್ತಿಯಾಗಿದ್ದು, ಆ ನೆಲದ ಮೌಖಿಕ ಪರಂಪರೆಯ ಪ್ರತಿಬಿಂಬವಾಗಿದೆ. ಚರಿತ್ರೆ ಎಂಬ ಲಿಖಿತ ಪ್ರಜ್ಞೆಯ ಅರಿವೇ ಇಲ್ಲದ ಅಲಿಖಿತ ಚರಿತ್ರೆಯಲ್ಲಿ ಬದುಕಿದ ಜನಪದರ ಜೀವನ ಚರಿತ್ರೆ ಐತಿಹ್ಯಗಳ ಕ್ರಿಯಾಶೀಲತೆಯಾಗಿದೆ. ಆಯಾ ಪ್ರದೇಶದ ಭೌಗೋಳಿಕ ಮತ್ತು ಅದರ ಮೇಲೆ ನೆಲೆಯೂರಿರುವ ಸಂಸ್ಕೃತಿಯನ್ನು ತಿಳಿಸಿಕೊಡುತ್ತವೆ. ಹೀಗಾಗಿ ಇವು ಮಾನವನ ಸಾಮಾಜಿಕ ಜೀವನಕ್ಕೆ ಹತ್ತಿರವಾದ ಹಾಗೂ ನಡೆಯಬಹುದಾದ ಘಟನೆಗಳನ್ನು ಆಧಾರ ಸಹಿತವಾಗಿ ಹಾಗೂ ವಾಸ್ತವಕ್ಕೆ ಹತ್ತಿರವಾದ ವಿಚಾರಗಳನ್ನು ಬಿಂಬಿಸುವ ಘಟನೆಗಳೆಂಬಂತೆ ಕಂಡುಬರುತ್ತವೆ.

"ಒಂದು ಸಂಸ್ಕೃತಿಯ ಚರಿತ್ರೆಯನ್ನು ದೇವಾಲಯ, ಸ್ಮಾರಕ, ಶಾಸನ, ನಾಣ್ಯ, ಶಿಲ್ಪ, ಕೆರೆ, ಬಾವಿ, ಚಿತ್ರ ಮುಂತಾದ ಗೋಚರ ರೂಪದ ಆಕರಗಳಂತೆ ಮೌಖಿಕ ರೂಪದಲ್ಲಿ ಉಳಿದುಕೊಂಡು ಬಂದಿರುವ ಜನಪದ ಸಾಹಿತ್ಯ ರೂಪಗಳಾದ ಐತಿಹ್ಯಗಳು, ಗಾದೆಗಳು, ಒಗಟು, ಹಾಡು, ಕಥೆ ಮುಂತಾದವುಗಳ ಸಹಕಾರದಿಂದಲೂ ಕಟ್ಟಬಹುದಾಗಿದೆ. ಇವು ಚರಿತ್ರೆ ಕಾಣದ ಅನೇಕ ಸಂತ್ಯಾಶಗಳನ್ನು ಒಳಗೊಂಡಿದ್ದು, ಶಿಷ್ಟ ಇತಿಹಾಸದ ಪರಿಮಿತಿಗೆ ಒಂದು ಸವಾಲಾಗಿ ಪರಿಣಮಿಸಿವೆ. ಐತಿಹ್ಯವು ಜನಪದ ಇತಿಹಾಸ ದಾಖಲೆಯಾಗಿದ್ದು, ಶ್ರೀಮಂತವಾದ ಮತ್ತು ಸಿದ್ಧವಾದ ಆಕರ ಸಾಮಗ್ರಿಯಾಗಿದೆ. ಇವು ಇತಿಹಾಸದ ಆಕರಗಳು ಹೌದು, ಆಕರಗಳ ಇತಿಹಾಸವು ಹೌದು.

ಪ್ರಸ್ತುತ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯವು ನೆಲೆಗೊಂಡಿದ್ದು ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ತುಮಕೂರು, ಚಿಕ್ಕಮಗಳೂರು, ಹಾಸನ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಮಂಡ್ಯ, ಮೈಸೂರು, ಚಾಮರಾಜನಗರ, ರಾಮನಗರ, ಚಿಕ್ಕಬಳ್ಳಾಪುರ, ಕೋಲಾರ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಧಾರವಾಡ, ಹಾವೇರಿ, ಕೊಡಗು, ಬಾಗಲಕೋಟೆ ಮುಂತಾದ ೨೨ ಜಿಲ್ಲೆಗಳಲ್ಲಿ ಹರಡಿಕೊಂಡಿದ್ದು ಬಹು ವ್ಯಾಪಕವಾದ ವಿಸ್ತಾರವನ್ನು ಪಡೆದುಕೊಂಡಿದೆ.

ಕರ್ನಾಟಕವು ಬಹುಸಂಸ್ಕೃತಿ, ಮತ, ಪಂಥ, ಧರ್ಮ, ಜನಸಮುದಾಯಗಳನ್ನು ಒಳಗೊಂಡ ಸಂಪದ್ಭರಿತವಾದ ಪ್ರದೇಶವಾಗಿದೆ. ಇದರ ಅಡಿಯಲ್ಲಿ ರಂಗನಾಥ ಸಂಪ್ರದಾಯವು ಬೆಳೆದು ಬಂದಿದ್ದು, ತನ್ನದೇ ಆದ ಅಸ್ತಿತ್ವವನ್ನು ಪಡೆದು ನೆಲೆಗೊಂಡಿದೆ. ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಈ ಸಂಪ್ರದಾಯವು ಮಹತ್ವವನ್ನು ಪಡೆದುಕೊಂಡಿದ್ದು, ಅನಾದಿ ಕಾಲದಿಂದಲೂ ಬೆಳೆದು ಹಂತ ಹಂತವಾಗಿ ಬದಲಾಗುತ್ತಾ, ಹೊಸದನ್ನು ಒಳಗುಮಾಡಿಕೊಂಡು ನೆಲೆಗೊಂಡಿದೆ. ಈ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಐತಿಹ್ಯಗಳು ಅನೇಕ ಮಹತ್ವದ ಮಾಹಿತಿಯನ್ನು ನೀಡುತ್ತಿದ್ದು, ಅವುಗಳನ್ನು ತಿಳಿಯುವ ಪ್ರಯತ್ನವನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

ಕರ್ನಾಟಕದ ೨೨ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಕೈಕೊಂಡು ಎಲ್ಲ ಜಿಲ್ಲೆಯಲ್ಲಿಯ ಸಮಗ್ರ ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದರ ಮೂಲಕ ರಂಗನಾಥ ಸಂಪ್ರದಾಯದ ಚರಿತ್ರೆಯಲ್ಲಿ ಅವುಗಳ ಪಾಲು-ಪಾತ್ರಗಳ ಮಹತ್ವವನ್ನು ತಿಳಿಯಬಹುದಾಗಿದೆ. ಅಧ್ಯಯನದ ಅನುಕೂಲತೆಗಾಗಿ ಇಲ್ಲಿಯ ಐತಿಹ್ಯಗಳನ್ನು ೧. ಪೌರಾಣಿಕ ಐತಿಹ್ಯಗಳು ೨. ಸ್ಥಳ ಐತಿಹ್ಯಗಳು ೩. ಚಾರಿತ್ರಿಕ ಐತಿಹ್ಯಗಳು ೪. ಸಂಚಾರಿ ಐತಿಹ್ಯಗಳು ೫. ಪವಾಡ ಸಂಬಂಧಿ ಐತಿಹ್ಯಗಳು ೬. ಆಚರಣೆ ಸಂಬಂಧಿ ಐತಿಹ್ಯಗಳೆಂದು ವಿಭಾಗಿಸಿಕೊಳ್ಳಲಾಗಿದೆ.

**ಪೌರಾಣಿಕ ಐತಿಹ್ಯಗಳು :**

ಕರ್ನಾಟಕದ ಪ್ರಮುಖ ಸ್ಥಳಗಳ ಅನೇಕ ಪೌರಾಣಿಕ ಕಥೆಗಳು ಸ್ಥಳೀಯವಾಗಿ ಹೆಣೆಯಲ್ಪಟ್ಟಿರುವ ಐತಿಹ್ಯಗಳು ವೈವಿಧ್ಯತೆಯಿಂದ ಕೂಡಿವೆ. ಮುಖ್ಯವಾಗಿ ಮಾನವ ಭಕ್ತಿ ಮತ್ತು ಭಗವಂತನ ಸುತ್ತ ಹೆಣೆಯಲ್ಪಟ್ಟಿವೆ. ಪ್ರಸ್ತುತ ಅಧ್ಯಯನದಲ್ಲಿ ಕಂಡುಬರುವ ಸ್ಥಳೀಯ ಐತಿಹ್ಯಗಳು ಮತ್ತು ಸ್ಥಳ ಪುರಾಣಗಳು ಈ ಸಂಪ್ರದಾಯದ ರಂಗನಾಥನನ್ನು ರಾಮಾಯಣ ಮತ್ತು ಪೌರಾಣಿಕ ವ್ಯಕ್ತಿ, ದೈವ, ಸ್ಥಳ, ವಿವಿಧ ಘಟನೆ, ಸನ್ನಿವೇಶಗಳಿಗೆ ತಳುಕುಹಾಕುವ ಮೂಲಕ ಈ ಸಂಪ್ರದಾಯವನ್ನು ಪುರಾಣಗಳಷ್ಟು ಹಿಂದಕ್ಕೆ ಗುರುತಿಸಲು ಪ್ರೇರೆಪಿಸುತ್ತವೆ. ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ, ಚಾಮರಾಜನಗರ ಜಿಲ್ಲೆಯ ಶಿವನಸಮುದ್ರ, ಚಿಕ್ಕಬಳ್ಳಾಪುರ ಜಿಲ್ಲೆಯ ರಂಗಸ್ಥಳ, ಚಿತ್ರದುರ್ಗ ಜಿಲ್ಲೆಯ ಗವಿರಂಗಾಪುರ, ಲೋಕದೊಳಲು, ಚಿಕ್ಕಮಗಳೂರ ಜಿಲ್ಲೆಯ ಕಡೂರು, ಶಿವಮೊಗ್ಗ

ಜಿಲ್ಲೆಯ ಪಿಳ್ಳಂಗೆರೆ, ಮುಂತಾದ ಸ್ಥಳಗಳು ವೈವಿಧ್ಯಮಯ ಸ್ಥಳ ಪುರಾಣಗಳಿಂದಾಗಿ ಗಮನ ಸೆಳೆಯುತ್ತವೆ.

**ಶ್ರೀರಂಗಪಟ್ಟಣ :**

ಮಹೇಶ್ವರನು ನಾರದರಿಗೆ ಶ್ರೀರಂಗಪಟ್ಟಣದ ಕ್ಷೇತ್ರ ಮಹಿಮೆಯನ್ನು ಹೇಳುವ ಪ್ರಸಂಗವಿದ್ದು, ಈ ಆದಿರಂಗವು ಮಹಾಕ್ಷೇತ್ರವು, ಎಲ್ಲ ಕ್ಷೇತ್ರಕ್ಕಿಂತಲೂ ಉತ್ತಮವು, ಈ ಕ್ಷೇತ್ರಕ್ಕಿಂತ ಉತ್ತಮ ಸಮನಾದ ಕ್ಷೇತ್ರವು ಬ್ರಹ್ಮಾಂಡದಲ್ಲಿ ಎಲ್ಲು ಇಲ್ಲ. ಶ್ರೀಪಶ್ಚಿಮರಂಗನಾಥನ ರಾಜಧಾನಿಯಾದ ಈ ಪಟ್ಟಣಕ್ಕೆ ಸಮಾನವಾದ ಪಟ್ಟಣವು ಜಗತ್ರಯದಲ್ಲಿ ಎಲ್ಲೂ ಇಲ್ಲ. ಇದಕ್ಕೆ ಸಮವಾದ ಕ್ಷೇತ್ರವು ಹಿಂದೆ ಇರಲಿಲ್ಲ. ಮುಂದೆ ಆಗುವುದಿಲ್ಲ. ಶ್ರೀರಂಗನಾಥನಿಗೆ ಸಮನಾದ ಮೂರ್ತಿಯು ಲೋಕದಲ್ಲಿ ಎಲ್ಲಿಯೂ ಇಲ್ಲವೆಂದು ಕ್ಷೇತ್ರದ ಪವಿತ್ರತೆಯನ್ನು ಹೊಗಳಲಾಗಿದೆ.

ಕಾವೇರಿ ನದಿಯ ಮೂರು ಸಂಗಮದ ಮಧ್ಯಪ್ರದೇಶದ ಪಶ್ಚಿಮ ದ್ವೀಪವಾದ ಶ್ರೀರಂಗಪಟ್ಟಣದಲ್ಲಿ ಆದಿಶೇಷನ ಮೇಲೆ ಶಯನಿಸಿರುವ ಶ್ರೀರಂಗನಾಥನನ್ನು ಕಾವೇರಿಯು ತಪಸ್ಸು ಮಾಡಿದಳು. ಭಗವಂತನು ಕಾವೇರಿಗೆ ಪ್ರಸನ್ನನಾಗಿ ಅವಳ ಪ್ರಾರ್ಥನೆಯಾದ ಮೂರು ವರಗಳನ್ನು ಅಂದರೆ ಗಂಗಾ ನದಿಗಿಂತಲೂ ಕಾವೇರಿಗೆ ಹೆಚ್ಚು ಮಹಿಮೆಯುಂಟಾಗಬೇಕೆಂಬುದು, ಈ ಸ್ಥಳವು ಒಂದು ಮಹಾಕ್ಷೇತ್ರವಾಗಬೇಕೆಂಬುದು ಮತ್ತು ಯುಗಯುಗಾಂತರದಲ್ಲೂ ಭಕ್ತರಿಗೆ ಅಭೀಷ್ಟವನ್ನು ನೆರವೇರಿಸುತ್ತಾ ಇಲ್ಲಿಯೇ ನೆಲೆಸಿರಬೇಕೆಂದು ಕೇಳಿದಳು. ಆಗ ರಂಗನಾಥ ಕೇಳಿದ ವರಗಳನ್ನು ಅನುಗ್ರಹಿಸಿದನು. ಜೊತೆಗೆ ಕಾವೇರಿಯಿಂದ ಅರ್ಘಪಾದ್ಯಾದಿ ಪೂಜೆಗಳನ್ನು ಸ್ವೀಕರಿಸಿದನು. ನಂತರ ಆದಿಶೇಷನ ಮೇಲೆ ಶಯನಿಸಿ ಕಾವೇರಿಯಿಂದ ಪಾದ ಸೇವೆಯನ್ನು ಪಡೆಯುತ್ತಾ ಕಾವೇರಿ ಸಮೇತನಾಗಿ ಶಿಲಾರೂಪಿ ರಂಗನಾಥನು ನೆಲೆಸಿರುವುದನ್ನು ತಿಳಿಸಲಾಗಿದೆ. ಶ್ರೀಮಹಾಲಕ್ಷ್ಮೀಯು ಸ್ವಾಮಿಯನ್ನು ನೋಡಲು ಬಂದು ಕಾವೇರಿ ಮಧ್ಯೆ ಶಿಲಾರೂಪಿಯಾಗಿ ಕಾವೇರಿ ಸಮೇತನಾಗಿ ಇರುವುದನ್ನು ಕಂಡಳು. ಕ್ಷೇತ್ರ ಮಹಿಮೆಯನ್ನು ಅರಿತವಳಾಗಿ ಕಾವೇರಿಯಲ್ಲಿ ಸ್ನಾನಮಾಡಿದಳು. ನಂತರ ಸ್ವಾಮಿಯನ್ನು ಪ್ರದಕ್ಷಿಣೆಗೈದು ನಮಸ್ಕಾರ ಮಾಡಿ ಪಾದಭಾಗದ ವಾಯುವ್ಯ ದಿಕ್ಕಿನಲ್ಲಿ ಕುಳಿತು ಶಿಲೆಯಾದಳು. ಇದನ್ನು ತಿಳಿದು ಬ್ರಹ್ಮ, ರುದ್ರಾದಿ ದೇವತೆಗಳು ಇಲ್ಲಿಗೆ ಬಂದರು. ಭಗವಂತನ ದರ್ಶನ ಮಾಡಿ ಸಂತೋಷಪಟ್ಟು ಬ್ರಹ್ಮನು ಸ್ವಾಮಿಗೂ, ಅಮ್ಮನವರಿಗೂ ವಿಮಾನವನ್ನು ನಿರ್ಮಾಣ ಮಾಡಿದನು. ಎಲ್ಲರೂ ಭಗವಂತನನ್ನು ಪೂಜಿಸಿದರು. ಅನಂತರ ಭಗವಂತ ಆದಿಶೇಷನ ಪೂಜೆಗೋಸ್ಕರ ಬ್ರಹ್ಮನು ನಾರದನಿಗೆ ಪಾಂಚರಾತ್ರ ಪೂಜಾ ವಿಧಿಯನ್ನು ಉಪದೇಶಿಸಿದನು.

ಗೌತಮಋಷಿಗಳ ತಪಸ್ಸಿಗೆ ಭಗವಂತನು ಪ್ರತ್ಯಕ್ಷನಾಗಿ, ಕಾವೇರಿಯ ಪ್ರಥಮದಲ್ಲಿ ಆದಿರಂಗ ಕ್ಷೇತ್ರವಾದ ಸ್ಥಳದಲ್ಲಿ ಪೂಜಾರ್ಥವಾಗಿ ಸೇವೆಯನ್ನು ಪಡೆಯಿರಿ ಎಂದು ಅಪ್ಪಣೆ ನೀಡಿದನು.

ಗೌತಮರು ಜೊತೆಯಲ್ಲಿ ಬಂದ ಋಷಿಗಳಿಗೆ ಶ್ರೀರಂಗನಾಥನ ವೈಭವವನ್ನು ಹೇಳಿದರು. ದೈವಯೋಗದಿಂದ ಬಂದ ಭೋದಾಯನ, ಅತಿ ಯಜ್ಞವಲ್ಕ್ಯ, ಕಣ್ವ, ಶುಕ, ಪರಶುರಾಮಾದಿ ಋಷಿಗಳನ್ನು ನೋಡಿ ಸಂತುಷ್ಟರಾಗಿ ಶತನಂದಾಧಿ ಋತ್ವಿಕ್ ಸಮೇತ ಯಜ್ಞ ಮೂರ್ತಿಯಾದ ಶ್ರೀರಂಗನಾಥನನ್ನು ಕುರಿತು ಯಜ್ಞವನ್ನು ಮಾಡಿದರು. ವಾಸುದೇವಾಧ್ವರ, ವೈಷ್ಣವೇಷ್ಟಿ ಮತ್ತು ನಾರಾಯಣಾಧ್ವರ ಇವುಗಳ ಅವಭೃತ ಸ್ನಾನವನ್ನು ಮಾಡಿದರು. ಇದರಿಂದ ಸಂತೋಷಿತನಾದ ರಂಗನಾಥನು ಪ್ರಸನ್ನನಾಗಲು ಋಷಿಗಳ ಸಮೂಹವು ನಮಸ್ಕರಿಸಿತು. ರಂಗನಾಥನು ಗೌತಮರನ್ನು ಕುರಿತು ಮುಂದೆ ಕಾಣುತ್ತಿರುವ ತುಲಸೀವನದ ಹುತ್ತದಲ್ಲಿ ಹಿಂದೆ ಕಾವೇರಿಯ ಪ್ರಾರ್ಥನೆಯಿಂದ ಶಿಲೆಯಾಗಿರುತ್ತೇನೆ. ನೀವು ದರ್ಶನವನ್ನು ಪಡೆಯಿರಿ ಎಂದು ಭಗವಂತನ ಅಪ್ಪಣೆಯಾಯಿತು. ಆ ಪ್ರಕಾರವಾಗಿ ತುಲಸೀವನವನ್ನು ಪ್ರವೇಶಿಸಲು ಬ್ರಹ್ಮರುದ್ರಾದಿಗಳನ್ನು, ಇಂದ್ರಾದಿ ದೇವತೆಗಳನ್ನು, ಕಾಮಧೇನುವನ್ನು ಆಹ್ವಾನಿಸಿದರು. ಈ ಕ್ಷೇತ್ರಕ್ಕೆ ದೇವಲೋಕವೆ ಬರುವ ಮೂಲಕ ಕ್ಷೇತ್ರದ ಮಹತ್ವವನ್ನು ತೋರಿಸಲಾಗಿದೆ.

ಆಹ್ವಾನಿಸಿ ಬಂದವರು ಮತ್ತು ಋಷಿಗಳ ಸಮೇತರಾಗಿ ತುಲಸೀವನವನ್ನು ಪ್ರವೇಶಿಸಿದರು. ನೂರಾರು ಶೃಂಗಗಳೊಡನೆ ಕೂಡಿ ನಾಗಲೋಕದಿಂದ ಅವಿರ್ಭವಿಸಿರುವ ದೊಡ್ಡ ಹುತ್ತವನ್ನು ಕಂಡು ನಮಸ್ಕರಿಸಿದರು. ಅದನ್ನು ಕಾಮಧೇನುವಿನ ಕ್ಷೀರ ಸೇಚನದಿಂದ ಕರಗಿಸಿ ಅದರೊಳಗೆ ದಯಮಾಡಿಸಿರುವ ಶ್ರೀರಂಗನಾಥನನ್ನು ಮೇಘ ಮಾಸ ಶುಕ್ಲ ಸಪ್ತಮಿ ಅಭಿಜಿತ್ ಲಗ್ನದಲ್ಲಿ ದರ್ಶನ ಮಾಡಿದರು. ನಂತರ ಎಲ್ಲರೂ ಶ್ರೀವಿಶ್ವಕ್ಸೇನ, ಗರುಡ–ಚಕ್ರರಾಜ ಮೊದಲಾದ ವಿಷ್ಣುಪಾರ್ಶದವರನ್ನು ಪ್ರದಕ್ಷಿಣೆ ಮಾಡಿಕೊಂಡು, ವಾಯವ್ಯ ದಿಗ್ಭಾಗದಲ್ಲಿರುವ ಶ್ರೀರಂಗನಾಯಕಿ ಅಮ್ಮನವರನ್ನು ದರ್ಶನ ಮಾಡಿ ಸ್ತೋತ್ರ ಹೇಳಿ, ವರವನ್ನು ಪಡೆದು ಅಂಜಲೀಬದ್ಧರಾಗಿ ಪ್ರದಕ್ಷಿಣವಾಗಿ ಬಂದು ರಂಗ ವಿಮಾನವನ್ನು ನಮಸ್ಕರಿಸಿ ಗರ್ಭಗೃಹವನ್ನು ಪ್ರವೇಶಿಸಿದರು.

ಮೇಲೆ ಹಾಸಿಗೆಯಲ್ಲಿ ಶಯನಿಸಿ ಬಲಭುಜವನ್ನು ಶಿರಸ್ಸಿಗೆ ಇಟ್ಟಕೊಂಡು, ಎಡಭುಜವನ್ನು ನೀಡಿ ಮತ್ತು ದಕ್ಷಿಣ ಪಾದವನ್ನು ನೀಡಿ, ವಾಮಪಾದವನ್ನು ಸ್ವಲ್ಪ ಸಂಕುಚಿತವಾಗಿ ನೀಡಿಯೂ ವೃಕ್ಷ ಸ್ಥಳದಲ್ಲಿ ಶ್ರೀಲಕ್ಷ್ಮೀಯನ್ನು ಹೊಂದಿ ಕಾವೇರಿ ದೇವಿಯ ಹಸ್ತಗಳಿಂದ ಲಾಲಿಸಲ್ಪಟ್ಟ ಪಾದಗಳುಳ್ಳ ಸುಂದರವಾದ ಲಲಾಟದಿಂದ ಸೂರ್ಯಕೋಟಿಗೆ ಸಮಾನವಾದ ಕಾಂತಿಯುಳ್ಳ ಬ್ರಹ್ಮರುದ್ರಾದಿಗಳಿಂದ ಸ್ತೋತ್ರ ಮಾಡಲು ಭಗವಂತನು ಪ್ರಸನ್ನನಾದನು. ನಂತರ ರಂಗನಾಥನು ಗೌತಮರನ್ನು ಉದ್ದೇಶಿಸಿ "ಈ ಕ್ಷೇತ್ರಕ್ಕೆ ನಿಮ್ಮ ಹೆಸರಾದ ಗೌತಮಕ್ಷೇತ್ರವೆಂದೂ, ಈ ವಿಮಾನಕ್ಕೆ ಬ್ರಹ್ಮಾನಂದ ವಿಮಾನವೆಂದೂ ಇನ್ನು ಮುಂದೆ ಹೆಸರಾಗಲಿ" ಎಂದು ಆಜ್ಞೆ ಮಾಡಿದನು.

**ಶಿವನಸಮುದ್ರ :**

ಶಿವನಸಮುದ್ರಕ್ಕೆ ಪುರಾಣೋಕ್ತವಾಗಿ ಇರುವ ಹೆಸರು ಶಿಲಾಭೇಧೀ ಕ್ಷೇತ್ರ ಎಂದಾಗಿದೆ. ಬ್ರಹ್ಮಾಂಡ ಪುರಾಣದಲ್ಲಿ ಶಿಲಾಭೇಧಿ ಕ್ಷೇತ್ರದ ರಂಗನಾಥ ಮಹಿಮಾನು ವರ್ಣನೆ ಎಂಬುದಾಗಿ ವಿಸ್ತಾರವಾದ ವರ್ಣನೆ ಇರುವುದು. ದೇವೇಂದನು ವ್ರತ್ರಾಸುರನನ್ನು ಮಹರ್ಷಿ ದಧಿಚೀಯ ಬೆನ್ನು ಮೂಳೆಯಿಂದ ಮಾಡಿದ ವಜ್ರಾಯುಧವನ್ನು ಬಳಸಿ ಸಂಹಾರ ಮಾಡಿದನು. ಅದರಿಂದಾಗಿ ಕೂಡಿ ಬಂದ ಬ್ರಹ್ಮಹತ್ಯಾ ದೋಷದ ನಿವಾರಣೆಗಾಗಿ ಈ ಕ್ಷೇತ್ರಕ್ಕೆ ಬಂದು ತಪ್ಪಸ್ಸು, ವ್ರತಾಚರಣೆಗಳಲ್ಲಿ ಮಗ್ನನಾದನು. ಆಗ ಕಾವೇರಿಯು ನದಿಯಾಗಿ ಹರಿದುಬಂದು ಸ್ಥಳದಲ್ಲಿದ್ದ ಮಹಾಪರ್ವತ ಶ್ರೇಣಿಯನ್ನು ನೋಡಿದಳು. ನಂತರ ಹೇಗೆ ದಾಟಿ ಹೋಗುವುದು ಎಂದು ಚಿಂತಿಸಿದಳು. ಆಗ ದೇವಿಯ ಇಂಗೀತವನ್ನು ತಿಳಿದ  ಇಂದ್ರನು ತನ್ನ ವಜ್ರಾಯುಧವನ್ನು ಬಳಸಿ ಪರ್ವತವನ್ನು ಎರಡು ಭಾಗವಾಗಿ ಸೀಳುತ್ತಾನೆ. ಕಾವೇರಿಯು ಸುಗಮವಾಗಿ ಮುಂದೆ ಹರಿಯುತ್ತಾಳೆ. ಇಂದ್ರನ ಪ್ರಾರ್ಥನೆಯಂತೆ ಕಾವೇರಿಯು ತಪೋನಿಷ್ಠರ ಸೌಕರ್ಯ ಹಾಗೂ ಉದ್ಧಾರಕ್ಕಾಗಿ ಎರಡು ಭಾಗವಾಗಿ ಮುಂದೆ ಕವಲೊಡೆದು ಸಾಗುತ್ತಾಳೆ. ಹೀಗಾಗಿ ಈ ಕ್ಷೇತ್ರಕ್ಕೆ ಶಿಲಾಭೇಧಿ ಕ್ಷೇತ್ರವೆಂದು ಹೆಸರು ಪ್ರಖ್ಯಾತವಾಗಿದ್ದು, ಇಂದ್ರನಿಗೆ ಹಾಗೂ ವ್ರತ್ರಾಸುರನಿಗೆ ಇಲ್ಲಿ ಪಾಪದೋಷ ನಿವಾರಣೆ ಆಗಿರುವುದು ಕಂಡುಬರುತ್ತದೆ. ಇದನ್ನು ಮುಕ್ತಿಕ್ಷೇತ್ರ ಎಂದು ಕರೆಯವ ಪ್ರತೀತಿ ಇದೆ.

**ರಂಗಸ್ಥಳ :**

ಚಿಕ್ಕಬಳ್ಳಾಪುರ ಜಿಲ್ಲೆಯ ರಂಗಸ್ಥಳವು ಶ್ರೀರಂಗನಾಥ ನೆಲೆಸಿರುವ ಪುಣ್ಯಭೂಮಿಯೆಂದು, ವೈಕುಂಠದಲ್ಲಿ ಮಲಗಿರುವಂತೆ ದರ್ಶನವನ್ನು ನೀಡುತ್ತಿದ್ದಾನೆ ಎಂದು ವೈಕುಂಠದ ಜೊತೆ ಸಂಬಂಧ ಕಲ್ಪಿಸಲಾಗಿದೆ. ಅಲ್ಲದೆ ಈತನು ಸಪ್ತ ಋಷಿಗಳಿಂದ ಪ್ರತಿಷ್ಠಾಪಿಸಲ್ಪಟ್ಟಿದ್ದಾನೆಂದು ಹೇಳಲಾಗಿದೆ. ಈತನು  ಶ್ರೀಮದನಂತ ಗರುಡಾದಿಗಳಿಂದ ಪೂಜಿಸಿಗೊಳ್ಳತ್ತಾ, ಸುತ್ತ ಬ್ರಹ್ಮ, ಮಹೇಶ್ವರ, ಅಷ್ಟ ದಿಕ್ಪಾಲಕರಿಂದ ಸೇವಿತನಾಗಿ ಶಂಖ, ಚಕ್ರ, ಗದೆ, ಧನಸ್ಸು, ಕಲ್ಪವೃಕ್ಷ, ಕಾಮಧೇನುವಿನಿಂದ ಶೋಭಿತನಾಗಿ ನೆಲೆಗೊಂಡಿರುವನು. ಗರ್ಭಗೃಹವು ಬಿದಿರಿನ ಬುಟ್ಟಿಯ ಆಕಾರದಲ್ಲಿದ್ದು, ಇದನ್ನು ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿ ವಿಭೀಷಣನಿಗೆ ಶ್ರೀರಂಗನಾಥ ಸ್ವಾಮಿಯನ್ನು ಬುಟ್ಟಿಯಲ್ಲಿಟ್ಟು ಕೊಡುವ ಸನ್ನಿವೇಶವನ್ನು ನೆನಪಿಸುತ್ತದೆ. ಸಪ್ತ ಋಷಿಗಳು ಜ್ಞಾಪಕಾರ್ಥವಾಗಿ ಶ್ರೀರಂಗನಾಥನನ್ನು ಪ್ರತಿಷ್ಠಾಪಿಸಲಾಗಿದ್ದು, ಅದರ ಸಂಕೇತವಾಗಿ ಪ್ರತಿನಿತ್ಯ ಶ್ರೀಮದ್ರಾಮಾಯಣ ಪಾರಾಯಣ ನಡೆಯುತ್ತಿರುತ್ತದೆ. ಶ್ರೀರಂಗಪಟ್ಟಣ, ಶ್ರೀರಂಗಂ, ಶಿವನಸಮುದ್ರ ಪುಣ್ಯಕ್ಷೇತ್ರಗಳನ್ನು ದರ್ಶಿಸಿದ ನಂತರ ಶ್ರೀರಂಗಸ್ಥಳದ ಶ್ರೀರಂಗನಾಥ ಸ್ವಾಮಿಯನ್ನು ದರ್ಶನ ಮಾಡಿದರೆ ಮಾತ್ರ ಮೋಕ್ಷ ಪ್ರಾಪ್ತಿಯಾಗುತ್ತದೆ ಎಂಬ ಪ್ರತೀತಿ ಇರುವುದರಿಂದ ಮೋಕ್ಷ ರಂಗನಾಥನಾಗಿಯೇ ಪ್ರಸಿದ್ಧಿಯಾಗಿದ್ದಾನೆ.

**ಗವಿರಂಗಾಪುರ :**

ಸಮುದ್ರಮಥನ ಮಾಡುವಾಗ ಮಂದರಪರ್ವತವೇ ಕಡೆಗೋಲು, ವಾಸುಕೀಯನ್ನೇ ಹಗ್ಗವಾಗಿ ಮಾಡಿಕೊಂಡು ಸುರಾಸುರರು ಸಮುದ್ರಮಥನ ಮಾಡುತ್ತಾರೆ. ಆಗ ಲೋಕಕಲ್ಯಾಣಾರ್ಥವಾಗಿ ಮಹಾವಿಷ್ಣುವು ಕೂರ್ಮಾವತಾರಿಯಾಗಿ ಅವತರಿಸಿ ಹೊಸದುರ್ಗ ತಾಲ್ಲೂಕಿನ ಗವಿರಂಗಾಪುರದಲ್ಲಿ ನೆಲೆಸಿರುವನೆಂದು ಪ್ರತೀತಿ ಇದೆ. ಈ ಹಿನ್ನಲೆಯಿಂದ ಶ್ರೀಗಿರಿಯನ್ನು ಕೂರ್ಮಗಿರಿ ಎಂದು ಕರೆಯುವುದು ಕಂಡುಬರುತ್ತದೆ. ಇಲ್ಲಿಯ ಮೂಲ ಉದ್ಭವ ಮೂರ್ತಿಯು ಕೂರ್ಮಾವತಾರಿಯಾಗಿದ್ದು, ಸಮುದ್ರಮಥನ ಪ್ರಸಂಗಕ್ಕೆ ಹೋಲಿಸಿರುವುದು ಕಂಡುಬರುತ್ತದೆ.

**ದೇವರಹಳ್ಳಿ :**

ಉಡುಗಿರಿಕ್ಷೇತ್ರ, ಧೂಪದಮರಡಿ ಎಂದು ಪ್ರತೀತಿ ಇರುವ ದೇವಗಿರಿ ಅಥವಾ ದೇವರಹಳ್ಳಿಯಲ್ಲಿ ಹರಿ–ಹರ ಇಬ್ಬರೂ ನೆಲೆಸಿದ ಕ್ಷೇತ್ರವಾಗಿದೆ. ಇದು ಹರಿ–ಹರ ಕ್ಷೇತ್ರ ಎಂದು ಪ್ರಸಿದ್ಧಿಗೊಂಡಿದೆ. ಗುಹಾರಣ್ಯ ಬೆಟ್ಟದಲ್ಲಿ ಶ್ರೀಲಕ್ಷ್ಮೀ ಪಾರ್ವತಿಯರೊಡನೆ ಒಂದು ಕುಟೀರವನ್ನು ನಿರ್ಮಿಸಿಕೊಂಡು ಹರಿಶಂಕರರು ನೆಲೆಸಿದ್ದರು. ಲೋಕಕಲ್ಯಾಣಕ್ಕಾಗಿ ಭೂಸಂಚಾರ ಮಾಡಬೇಕೆಂದು ನಿರ್ಧರಿಸಿ ತಮ್ಮ ರೂಪವನ್ನು ಬದಲಾಯಿಸಿ ಉಡರೂಪ (ಕಾಡುಹಲ್ಲಿ) ರೂಪವನ್ನು ತಾಳಿದರು. ಹೀಗೆ ಸಂಚರಿಸುತ್ತಾ ಬಂದು ದೇವಗಿರಿಯ ಗೋದಿಕಾದ್ರಿ ಪರ್ವತದ ಹತ್ತಿರ ಬಂದರು. ಈ ಸಮಯದಲ್ಲಿ ಹಾಹಾಕಾರವೆಂಬ ಗಂಧರ್ವ ರಾಜನು ಅಹಂಕಾರದಿಂದ ಬ್ರಾಹ್ಮಣರಿಗೆ ಹಿಂಸೆಯನ್ನು ಕೊಡುತ್ತಿದ್ದು, ಸುಧರ್ಮನೆಂಬ ಮಹಾಮುನಿಯ ಬ್ರಹ್ಮಶಾಪಕ್ಕೆ ಗುರಿಯಾಗಿದ್ದನು. ಈ ಕಾರಣಕ್ಕಾಗಿ ಗಂಧರ್ವ ರಾಜನಿಗೆ ವಾಧ್ಯ ಜನ್ಮ ಉಂಟಾಯಿತು. ಆಗ ಗಂಧರ್ವ ರಾಜನು ಶಾಪವಿಮೋಚನೆಗಾಗಿ ಪರಿಹಾರ ಕೇಳಿದಾಗ ಸುಧರ್ಮ ಮಹಾಮುನಿಯು ಕೆಲವು ಕಾಲದ ನಂತರ ಹರಿಹರರು ಹರಿದ್ರಾ ನದಿಯ ಸಮೀಪ ಸಂಚರಿಸುವರು. ಅವರಿಂದ ನಿನಗೆ ಶಾಪವಿಮೋಚನೆಯಾಗುವುದೆಂದು ತಿಳಿಸಿದರು. ಹೀಗಾಗಿ ವ್ಯಾಧಜನ್ಮ ಉಂಟಾದ ಗಂಧರ್ವರಾಜನು ತನ್ನ ಸ್ವಜಾತಿಯವರೊಡನೆ ಬೇಟೆಯಾಡುತ್ತಾ ಅರಣ್ಯದಲ್ಲಿ ನೆಲೆಸಿದ್ದಾಗ, ಉಡಗಳ ರೂಪಧಾರಿಗಳಾದ ಹರಿಶಂಕರರು ವ್ಯಾಧನ ಕಣ್ಣಿಗೆ ಬಿದ್ದರು. ಗಂಧರ್ವರಾಜನು ಉಡದ ಮೇಲೆ ಬಾಣಪ್ರಯೋಗ ಮಾಡಿದನು. ಇದನ್ನು ತಿಳಿದ ಹರಿಹರರಿಬ್ಬರೂ ಬೇರೆರೂಪವನ್ನು ತಾಳಿ ಧನಸ್ಸಿನಿಂದ ಬಾಣಗಳನ್ನು ಬಿಟ್ಟರು. ಈ ಯುದ್ಧದಲ್ಲಿ ದೇವಗಿರಿಯನ್ನು ಯುದ್ಧರಂಗವನ್ನಾಗಿ ಮಾಡಿಕೊಂಡರು. ಯುದ್ಧ ಮುಗಿದನಂತರ ದೇವಗಿರಿ ಪರ್ವತದಲ್ಲಿ ಒಂದು ಬಿಲವನ್ನು ನೋಡಿ ಅದರಲ್ಲಿ ಹರಿಹರರು ಪ್ರವೇಶಿಸಿದರು. ಹರಿಶಂಕರರ ಬಿಲಪ್ರವೇಶವನ್ನು ಗಂಧರ್ವರಾಜನು ನೋಡಿ ಪರ್ವತವನ್ನು ಅಗೆಯಲು ಪ್ರಾರಂಭಿಸಿದನು. ಅಲ್ಲದೆ ತನ್ನ ಜೊತೆ ಬೇಟೆನಾಯಿಗಳನ್ನು ಸೇರಿಸಿಕೊಂಡು ಏಳು ದಿವಸಗಳವರೆಗೂ ದೇವಗಿರಿಯನ್ನು ಅಗೆದನು. ನಂತರ ಚೈತ್ರಶುದ್ಧ ಪೂರ್ಣಿಮ ಗುರುವಾರ

ಚಿತ್ತ ನಕ್ಷತ್ರದೊಡನೆ ಕೂಡಿದ ಮಧ್ಯಾಹ್ನದಲ್ಲಿ ಜಗದೀಶ್ವರರಾದ ಹರಿಹರರಿಬ್ಬರೂ ಲಿಂಗರೂಪದಿಂದ ಉದ್ಭವಿಸಿದರು. ಇಂಥ ಸಮಯವನ್ನು ಕಾಯುತ್ತಿದ್ದ ದೇವತೆಗಳು ನಾಗ, ಕಿನ್ನರ, ಸಿದ್ಧ, ಯಕ್ಷರು ಇನ್ನೂ ಮೊದಲಾದ ದೇವತೆಗಳು ಹರಿಶಂಕರರ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ತರುವಾಯ ಗಂಧರ್ವರಾಜನಿಗೆ ಶಬರ ಜನ್ಮ ಬಿಡಿಸಿದರು. ಗಂಧರ್ವರಾಜನು ತನ್ನಲೋಕಕ್ಕೆ ತೆರಳಿದನು. ಈ ರೀತಿಯಾಗಿ ಕ್ಷೇತ್ರದ ಮಹಿಮೆಯನ್ನು ತಿಳಿಸುವ ಕಥೆ ಪ್ರಚಲಿತದಲ್ಲಿದೆ.

**ಶಕುನಗಿರಿ :**

ಸಖರಾಯಪಟ್ಟಣ ಪ್ರಸ್ತುತ 'ಸಕ್ರೆಪಟ್ಟಣ' ಎಂದು ಕರೆಯುವ ಪಟ್ಟಣವು ಇತಿಹಾಸ ಪ್ರಸಿದ್ಧವಾಗಿ ಬೆಳೆದು, ಬಾಳಿ ಶಿಥಿಲ ಹೊಂದಿದ ಗ್ರಾಮವಾಗಿದೆ. ಇದನ್ನು ಶಕುನಗಿರಿ ಬೆಟ್ಟದಲ್ಲಿರುವ ಅವಶೇಷಗಳು ತೋರ್ಪಡಿಸುತ್ತವೆ. ಇದು ಚಿಕ್ಕಮಗಳೂರು ಜಿಲ್ಲೆಗೆ ಸೇರಿರುವ ಕೇಂದ್ರವಾಗಿದೆ. ಇದು ರಾಮಾಯಣದ ಜೊತೆ ತನ್ನ ಸಂಬಂಧವನ್ನು ಬೆಳೆಸಿಕೊಂಡಿದೆ. ರಾಮಾಯಣದ ಯುದ್ಧದ ಸನ್ನಿವೇಶದಲ್ಲಿ ಲಕ್ಷ್ಮಣನು ಮೂರ್ಛೆ ಹೋಗುತ್ತಾನೆ. ಆಗ ಶ್ರೀರಾಮನು ಸುಷೇಣನ ಮಾತಿನಂತೆ ಲಕ್ಷ್ಮಣನನ್ನು ಎಚ್ಚರಗೊಳಿಸಲು, ಚಂದ್ರದ್ರೋಣ ಪರ್ವತದಲ್ಲಿರುವ ಸಂಜೀವಿನಿಯನ್ನು ತರಲು ಆಂಜನೇಯನನ್ನು ಶಕುನಗಿರಿ ಪರ್ವತಕ್ಕೆ ಕಳುಹಿಸುತ್ತಾನೆ.

ಆಂಜನೇಯನು ಸಂಜೀವಿನಿ ತರಲು ಹೋಗುವ ದಾರಿಯಲ್ಲಿ ಕಾಲನೇಮಿ ಎಂಬ ರಾಕ್ಷಸನಿಗೆ ಸಿಕ್ಕಿ ಬಂಧಿಯಾಗುತ್ತಾನೆ. ರಾವಣ ತನ್ನ ಗೂಢಾಚಾರರ ಮೂಲಕ ಮುಂಚಿತವಾಗಿ ವಿಷಯವನ್ನು ತಿಳಿದು ತನ್ನ ಸೇವಕ ಕಾಲನೇಮಿ ಎಂಬ ರಾಕ್ಷಸನನ್ನು ಆಂಜನೇಯನು ಮುಂದೆ ಪ್ರಯಾಣ ಮಾಡದಂತೆ ಅಡ್ಡಿಪಡಿಸಲು ಕಳುಹಿಸಿದನು. ಅದರಂತೆ ಕಾಲಮೇನಿಯು ಶಕುನದ ಗಿರಿಯಲ್ಲಿ ತನ್ನ ಮಾಯಾ ಜಾಲದಿಂದ ಕೃತಕವಾದ ಮತ್ತು ಸುಂದರವಾದ ಉದ್ಯಾನವನ್ನು ಸೃಷ್ಟಿಸಿ ಆಂಜನೇಯನನ್ನು ಸ್ವಾಗತಿಸಿ ಆತಿಥ್ಯವನ್ನು ನೀಡಿದನು. ಆಂಜನೇಯನು ಕಾಲನೇಮಿಯ ಆತಿಥ್ಯಕ್ಕೆ ಮರುಳಾಗಿ ತಾನು ಬಂದು ಕಾರ್ಯವನ್ನು ಮರೆತು ನಿಂತನು. ನಂತರ ಶ್ರೀರಾಮನು ಆಂಜನೇಯನನ್ನು ಎಚ್ಚರಿಸಿದನು. ಆಗ ಮೊಸಳೆ ರೂಪದಲ್ಲಿದ್ದ ಮಾಯಾವಿ ರಾಕ್ಷಸನಾದ ಕಾಲನೇಮಿಯನ್ನು ಹನುಮಂತನು ಹಿಡಿದು ಎರಡು ಭಾಗವಾಗಿ ಸೀಳಿ, ಎರಡು ದಿಕ್ಕುಗಳಿಗೆ ಎಸೆದನು. ಮೊಸಳೆಯ ಭಾಗಗಳು ಬಿದ್ದ ಸ್ಥಳಗಳು ಇಂದಿನ 'ಮದಗದ ಕೆರೆ' ಮತ್ತು 'ಅಯ್ಯನ ಕೆರೆ'ಗಳಾದುವೆಂದು ಪ್ರತೀತಿ ಇದೆ. ಆಂಜನೇಯನು ಜಾಗ್ರತಗೊಂಡ ಶಕುನಗಿರಿಯ ಸ್ಥಳದಲ್ಲಿ ಶ್ರೀರಾಮನು ಚತುರ್ಭುಜನಾಗಿ ನೆಲೆಸಿದನೆಂದು ಹೇಳಿರುವುದು ಕಂಡುಬರುತ್ತದೆ. ಈ ಮೂಲಕ ಬೇಟೆರಂಗನಾಥನ ಮೂರ್ತಿಶಿಲ್ಪಕ್ಕೆ ಶ್ರೀರಾಮನನ್ನು ಹೋಲಿಸಲಾಗಿದೆ.

**ಲೋಕದೊಳಲು :**

ಕಲಿಯುಗದಲ್ಲಿ ಭೂಮಿಯಲ್ಲಿ ಕಲಿಕಲ್ಮಷದಿಂದ ನರಳುತ್ತಿರುವವರನ್ನು ರಕ್ಷಿಸಲು ಶ್ರೀಭಗವಂತನು ಶ್ರೀವಾಯುದೇವರನ್ನು ಕೇಸರಿ ಅಂಜನಾಸುತ ಶ್ರೀಆಂಜನೇಯನಾಗಿ ಅವತರಿಸಲು ಆಜ್ಞಾಪಿಸಿ ಕಳುಹಿಸಿದ್ದನು. ಈತನು ಭೂಲೋಕದ ಎಲ್ಲ ಪರ್ವತಾಗ್ರಗಳಲ್ಲಿ ನೆಲೆಸಿ ಕಲಿಕಲ್ಮಷದಿಂದ ಪೀಡಿತರಾದವರನ್ನೆಲ್ಲ ಸಂರಕ್ಷಿಸತೊಡಗಿದನು. ತದನಂತರ ಶ್ರೀಹರಿಯು ವೈಕುಂಠದಿಂದ ತಾನೇ ಪರೀಕ್ಷೆಗಾಗಿ ಹೊರಟನು. ಹೀಗೆ ಹೊರಟವನು ತನ್ನನ್ನು ಆರಾಧಿಸುವ ಭಕ್ತವೃಂದವನ್ನು ಹುಡುಕುತ್ತಾ ಈ ಕ್ಷೇತ್ರಕ್ಕೆ ಬಂದನು. ಇಲ್ಲಿ ಶ್ರೀಹರಿಯು ದಾಸಯ್ಯನ ವೇಷದಿಂದ ಬಂದನೆಂದು ಪ್ರತೀತಿ. ಅಲ್ಲದೆ ಇಲ್ಲಿ ಮೊದಲೆ ನೆಲೆಸಿದ್ದ ಅಂಜನಾಸುತನು ಈ ಸ್ಥಳವನ್ನು ಶ್ರೀಹರಿಗೆ ಬಿಟ್ಟುಕೊಟ್ಟನೆಂದು, ಆತನೇ ಶ್ರೀದೊಡ್ಡಹೊಟ್ಟೆ ಲಕ್ಷ್ಮೀರಂಗನಾಥಸ್ವಾಮಿ ಎಂದು ಪ್ರಚಲಿತದಲ್ಲಿರುವುದು ಕಂಡುಬರುತ್ತದೆ. ಪ್ರಸ್ತುತ ಚಿತ್ರದುರ್ಗ ಜಿಲ್ಲೆ ಹೊಳಲಕೆರೆ ತಾಲ್ಲೂಕಿನ ಈ ಗ್ರಾಮದಲ್ಲಿ ನೆಲೆಸಿ ಪ್ರಸಿದ್ಧನಾಗಿದ್ದಾನೆ.

**ಪಿಳ್ಳಂಗೆರೆ :**

ಗೌತಮ ಋಷಿಯಿಂದ 'ಸಹಸ್ರಾಕ್ಷನಾಗು' ಎಂದು ಶಾಪವನ್ನು ಪಡೆದ ಇಂದ್ರನು ಸ್ಥಳದ ಮಹಿಮೆಯನ್ನರಿತು ಬರುತ್ತಾನೆ. ಶಾಪವಿಮೋಚನೆಗಾಗಿ ನಿತ್ಯವು ತುಂಗಾ ನದಿಯಲ್ಲಿ ಸ್ನಾನ ಮಾಡಿ, ಬೆಟ್ಟದ ಮೇಲೆ ಕುಳಿತು ತಪ್ಪಸ್ಸು ಮಾಡುತ್ತಾನೆ. ತುಂಗಾ ನದಿ ಹರಿಹರರಿಬ್ಬರ ಸಾನಿಧ್ಯವಾಗಿದ್ದು, ಹರಿಹರರಿಬ್ಬರೂ ಅವನಿಗೆ ದರ್ಶನ ಕೊಡುತ್ತಾರೆ. ಇದರಿಂದ ಶಾಪವಿಮೋಚನೆ ಹೊಂದಿ ಇಂದ್ರನು ದೇವಲೋಕಕ್ಕೆ ಹೋಗುತ್ತಾನೆ. ಅಂದಿನಿಂದ ಈ ಬೆಟ್ಟಕ್ಕೆ ಮಹೇಂದ್ರ ಗಿರಿ ಎಂಬ ಹೆಸರು ಪ್ರಚಲಿತಕ್ಕೆ ಬಂದಿರುವುದು ತಿಳಿದುಬರುತ್ತದೆ. ಅಲ್ಲದೆ ಇಂದ್ರನು ಸ್ನಾನ ಮಾಡಿದ ಸ್ಥಳಕ್ಕೆ ಮಹೇಂದ್ರತೀರ್ಥ ಎಂಬ ಹೆಸರು ಬಂದಿತು.

**ಸ್ಥಳ ಐತಿಹ್ಯಗಳು :**

ಒಂದು ನಿರ್ದಿಷ್ಟ ಭೌಗೋಳಿಕ ಪರಿಸ್ಥಿತಿಗೆ ಸೀಮಿತಗೊಂಡು ಹುಟ್ಟುವ ಅಥವಾ ರೂಪಗೊಂಡಿರುವ ಸ್ಥಳ ಐತಿಹ್ಯಗಳು ಸ್ಥಳವೊಂದರ ವಿಶಿಷ್ಟತೆಯನ್ನು ಕುರಿತಂತೆ ನಿರೂಪಿತವಾಗಿರುತ್ತವೆ. ಇವು ಸ್ಥಳದ ವೈಶಿಷ್ಟ್ಯವನ್ನು ಆಕರ್ಷಕವಾಗಿ ಮನಬಂದಂತೆ ನಂಬುವ ರೀತಿಯಲ್ಲಿ ವರ್ಣಿಸುತ್ತವೆ. ಸ್ಥಳೀಯ ವಸ್ತು, ವ್ಯಕ್ತಿ ಅಥವಾ ಘಟನೆಯ ವಿಶಿಷ್ಟ ಸ್ವಭಾವವನ್ನು ವಿವರಿಸುವುದೇ ಈ ಐತಿಹ್ಯಗಳ ವೈಶಿಷ್ಟ್ಯ. ಸ್ಥಳೀಯ ಸಂಪ್ರದಾಯ ಅಥವಾ ಪರಂಪರೆಯ ಜೊತೆಗೆ ಈ ಹಿಂದೆ ನಡೆದಿರಬಹುದಾದ ಚಾರಿತ್ರಿಕ ಘಟನೆಗಳನ್ನಾಗಲೀ ನಡೆದಿವೆಯೆಂದು ನಂಬುವ ಪೌರಾಣಿಕ ಅಂಶಗಳನ್ನಾಗಲೀ

ನೆನಪಿಸುತ್ತವೆ. ಬೃಹತ್ ಗಾತ್ರದ ಬೆಟ್ಟ, ಬಂಡೆ, ಗುಡ್ಡ, ಗುಹೆ, ನದಿ, ಹಳ್ಳ, ಕೆರೆ, ಕೋಟೆ, ದುರ್ಗ ಇತ್ಯಾದಿಗಳೆಲ್ಲವೂ ಸ್ಥಳ ಐತಿಹ್ಯಗಳಿಗೆ ನೆಲೆಗಳಾಗುತ್ತವೆ.

ಪ್ರಸ್ತುತ ಸ್ಥಳ ಐತಿಹ್ಯಗಳು ಸ್ಥಳೀಯ ಗುಣಗಳಿಂದ ವಿಶಿಷ್ಟವಾಗಿವೆ. ಒಂದೊಂದು ಐತಿಹ್ಯವು ಆಯಾ ಸ್ಥಳಕ್ಕೆ ಸಿಮೀತವಾಗಿ ರಚನೆಯಾಗಿರುವುದು ಕಂಡುಬರುತ್ತದೆ. ಪ್ರಮುಖವಾಗಿ ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ದೇವರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಹೊಳಲಕೆರೆ ತಾಲ್ಲೂಕಿನ ಹೊರಕೆರೆದೇವರಪುರ, ಮೈಸೂರು ಜಿಲ್ಲೆಯ ಬನ್ನೂರು, ಮಂಡ್ಯ ಜಿಲ್ಲೆಯ ಕದಬಹಳ್ಳಿ, ಬಿಲ್ಲೇನಹಳ್ಳಿ ಮೊದಲಾದವುಗಳ ಪ್ರಮುಖವಾದ ಸ್ಥಳ ಐತಿಹ್ಯಗಳನ್ನು ಹೊಂದಿದವುಗಳಾಗಿವೆ.

**ದೇವರಹಳ್ಳಿ :**

ರಂಗನಾಥನು ಉಡದ ರೂಪ ತಾಳಿಬಂದು ದೇವಗಿರಿ ಅಥವಾ ದೇವರಹಳ್ಳಿ ಬೆಟ್ಟದಲ್ಲಿ ತಗಿದ್ದರಿಂದ ಈ ಸ್ಥಳಕ್ಕೆ ಉಡುಮರಡಿ ಎಂದು ಹೆಸರು ಬಂದಿರುವುದು ತಿಳಿದುಬರುತ್ತದೆ. ಪ್ರಸ್ತುತ ಕ್ಷೇತ್ರವೇ ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲೂಕಿನ ದೇವರಹಳ್ಳಿ.

ಇಲ್ಲಿನ ಹರಿದ್ರಾಮಹಾತ್ಮೆಯೆಂಬ ಸ್ಥಳಪುರಾಣದಲ್ಲಿ ಇದರ ಉಲ್ಲೇಖವಿದೆ. ವಿಜಯನಗರ ಇಮ್ಮಡಿ ಹರಿಹರನ ಕಾಲದಲ್ಲಿ ಅವನ ಸಂಗಡ ಒಂದು ಬೇಟೆಗಾರರ ತಂಡವು ಬಂದಿದ್ದು, ಈ ಸ್ಥಳದಲ್ಲಿ ನೆಲೆಗೊಂಡಿದ್ದರು. ಇವರು ಬೇಟೆಯಾಡುತ್ತ ಚನ್ನಗಿರಿ ತಾಲೂಕಿನ ತೋಪೇನಹಳ್ಳಿಯಿಂದ ಅನತಿ ದೂರದಲ್ಲಿರುವ 'ದೂಪದಮರಡಿ' ಎಂಬ ಗುಡ್ಡವನ್ನು ಪ್ರವೇಶಿಸಿದರು. ಅಲ್ಲಿ ಒಂದು ಉಡವನ್ನು ಕಂಡು ಹಿಂಬಾಲಿಸಿದರು. ನಂತರ ಆ ಉಡವು ಬೆಳ್ಳಿಗನುಡು ಎಂಬಲ್ಲಿ ಬೆಳ್ಳಿಯ ಬಣ್ಣದಿಂದಲೂ, ಚಿನ್ನಾಪುರ ಎಂಬಲ್ಲಿ ಚಿನ್ನದ ಬಣ್ಣದಿಂದಲೂ, ಚಿಕ್ಕಡ ಎಂಬಲ್ಲಿ ಗಾತ್ರದಲ್ಲಿ ಚಿಕ್ಕದಾಗಿಯೂ ಹಿರೇಉಡು ಎಂಬಲ್ಲಿ ಗಾತ್ರದಲ್ಲಿ ದೊಡ್ಡದಾಗಿಯು ಕಾಣಿಸಿಕೊಂಡು ಕಗ್ಗದೂರು ಎಂಬಲ್ಲಿ ತನ್ನ ಶಕ್ತಿಯನ್ನು ಪ್ರದರ್ಶಿಸಿತು. ನಂತರ ರಾಮಗೊಂಡನಹಳ್ಳಿ ಎಂಬಲ್ಲಿ ರಾಮ ಎಂದು ಕೂಗಿ, ನಿಂತಾಪುರ ಎಂಬಲ್ಲಿ ಸ್ವಲ್ಪ ಕಾಲನಿಂತಿತು. ಅನಂತರ ನೀತಿಗೆರೆ ಎಂಬಲ್ಲಿಗೆ ಹೋಗಿ ಮುಂದೆ ದೇವರಹಳ್ಳಿಗೆ ತಲುಪಿದ ತಕ್ಷಣವೇ ಮಾಯವಾಯಿತೆಂದು ಪ್ರತೀತಿಯಿದೆ. ಆದರೆ ಪ್ರಸ್ತುತ ಐತಿಹ್ಯದಲ್ಲಿ ಉಲ್ಲೇಖಿಸಲಾದ ಹಳ್ಳಿಗಳು ಈಗಲೂ ಅದೇ ಹೆಸರಿನಲ್ಲಿ ಕರೆಯಿಸಿಕೊಂಡು ನೆಲೆಗೊಂಡಿವೆ. ಇಲ್ಲಿ ರಂಗನಾಥನು ಉಡದ ರೂಪ ತಾಳಿ ಬಂದಿದ್ದನು ಎಂಬ ನಂಬಿಕೆಯಿದೆ.

**ಹೊರಕೆರೆದೇವರಪುರ :**

ಹೊರಕೆರೆದೇವರಪುರ ಗ್ರಾಮಕ್ಕೆ ನಂದನಗರಿ, ನಂದರಾಜಪಟ್ಟಣವೆಂದು ಪ್ರಾಚೀನ ಹೆಸರಿದ್ದು ಈಗ ಹೊರಕೆರೆದೇವರಪುರವಾಗಿದೆ. ಇಲ್ಲಿ ಹಿಂದೆ ನಂದನೆಂಬ ದೈತ್ಯರಾಜನಿದ್ದನು. ಆತನು ದರ್ಪಿಷ್ಠನಾಗಿದ್ದು, ಪ್ರಜೆಗಳಿಗೆ ತೊಂದರೆಯನ್ನು ಕೊಡುವವನಾಗಿದ್ದನು. ಅದೇ ಗ್ರಾಮದಲ್ಲಿ

ರಂಗದಾಸನೆಂಬ ಹರಿದಾಸನು ತಿಮ್ಮಪ್ಪನ ಭಕ್ತನಾಗಿದ್ದು, ತಿರುಪತಿಯಾತ್ರೆಗಾಗಿ ಮೀಸಲು ವಸ್ತ್ರ ನೇಯ್ದಿದ್ದನು. ಅದು ಅಪೂರ್ವವಾಗಿದ್ದಿತ್ತು. ಇದನ್ನು ನೋಡಿದ ನಂದನು ಬಲತ್ಕಾರದಿಂದ ಪಡೆದು ಚರ್ಮದ ನಾಣ್ಯಗಳನ್ನು ಕೊಟ್ಟನೆಂದು ಪ್ರತೀತಿ ಇದೆ. ಆಗ ದಾಸಯ್ಯ ಅವುಗಳನ್ನೇ ತಿರುಪತಿಯ ದೇವಸ್ಥಾನದ ಹುಂಡಿಯಲ್ಲಿ ಅರ್ಪಿಸಿದನು. ಆಗ ತಿರುಪತಿ ತಿಮ್ಮಪ್ಪನು ಕೋಪಗೊಂಡು ಗ್ರಾಮದ ಹತ್ತಿರದಲ್ಲಿರುವ ಕರೇಕಲ್ಲು ಬೆಟ್ಟಕ್ಕೆ ಬಂದು ಕೊಪಾಗ್ನಿಯಿಂದ ನಂದನನ್ನು, ನಂದನಗರಿಯನ್ನು ಧ್ವಂಸಮಾಡಿದನು. ಇದನ್ನು ಕಂಡ ಬಾಸಿಂಗದವರ ಮನೆಯ ಸ್ವಾಧಿಯೋರ್ವಳು 'ನಂದನನ್ನು ಕೊಂದೆ, ನನ್ನ ಕಂದನ ಸಲಹು' ಎಂದು ಕರ್ಪೂರದಾರತಿ ಎತ್ತಿ ಬೆಳಗಿದಳು. ಹೀಗಾಗಿ ಶ್ರೀ ಸ್ವಾಮಿಯು ಶಾಂತನಾಗಿ ಇಲ್ಲಿಯ ಹುತ್ತದಲ್ಲಿ ಶ್ರೀರಂಗನಾಥನಾಗಿ ನೆಲೆಸಿದನೆಂದು ಪ್ರತೀತಿ ಇದೆ.

**ಬಿಲ್ಲೇನಹಳ್ಳಿ :**

ಸಂತೆ ಬಾಚನಹಳ್ಳಿ– ಕೃಷ್ಣರಾಜಪೇಟೆ ರಸ್ತೆಯಲ್ಲಿ ರಂಗನಾಥಪುರದಿಂದ ಪಶ್ಚಿಮಕ್ಕೆ ಒಂದು ಮೈಲಿ ದೂರದಲ್ಲಿ ಬಿಲ್ಲೇನಹಳ್ಳಿಯಲ್ಲಿ 'ಗವಿರಂಗನಾಥಸ್ವಾಮಿ' ಎಂಬ ಹೆಸರಿನ ಬಂಡೆಗಲ್ಲಿನ ಗುಡ್ಡವಿದೆ. ಪ್ರಸ್ತುತ ಸ್ಥಳದಲ್ಲಿ ಈಡೀ ಬಂಡೆಗಲ್ಲಿನ ಬೆಟ್ಟವನ್ನೇ ರಂಗನಾಥಸ್ವಾಮಿಯೆಂದು ಕರೆದು ಆರಾಧಿಸುವ ಸಂಪ್ರದಾಯವಿದೆ. ಇಲ್ಲಿ ಯಾವುದೇ ರೀತಿಯ ದೇವಾಲಯ ವಾಸ್ತು ರಚನೆ ಕಂಡುಬರುವುದಿಲ್ಲ. ಪಶುಪಾಲಕ ವರ್ಗದವರಿಗಂತೂ ಇದು ಪವಿತ್ರ ಕ್ಷೇತ್ರವಾಗಿದೆ.

ಬಿಲ್ಲೇನಹಳ್ಳಿಯಲ್ಲಿ 'ಗವಿರಂಗನಾಥಸ್ವಾಮಿ' ದೇವಾಲಯ ಒಂದಕ್ಕೆ ಸಂಬಂಧಿಸಿದಂತೆ ನಾಲ್ಕೂ ರೀತಿಯ ಐತಿಹ್ಯವು ಪ್ರಚಲಿತದಲ್ಲಿವೆ. ಇಲ್ಲಿ ವಿಷ್ಣು ಋಷಿ ವೇಷದಲ್ಲಿ ಬೆಟ್ಟದಲ್ಲಿ ತಪಸ್ಸು ಮಾಡುತ್ತಿದ್ದನೆಂಬ ನಂಬಿಕೆ. ಇಲ್ಲಿಗೆ ಮೇಯಲು ಬರುತ್ತಿದ್ದ ಹಸುಗಳು ವಿಷ್ಣು ತಪಸ್ಸು ಮಾಡುವ ಸ್ಥಳಕ್ಕೆ ಹೋಗಿ ಹಾಲು ಕರೆಯುತ್ತಿದ್ದವು. ಈ ಹಸುಗಳು ಮನೆಯಲ್ಲಿ ಹಾಲು ಕರೆಯದಿದ್ದಾಗ ಯಜಮಾನ ದನಕಾಯುವವನನ್ನು ತರಾಟೆಗೆ ತೆಗೆದುಕೊಂಡನು. ಇದರಿಂದ ಭಯಗೊಂಡು ಹಸುವನ್ನು ಕಾಯುವ ಬಾಲಕ ಒಂದು ದಿನ ನಡೆಯುವ ಪ್ರಸಂಗವನ್ನು ಕಂಡುಹಿಡಿಯಬೇಕೆಂದು ನಿರ್ಧರಿಸಿಕೊಂಡನು. ಅಂದು ಹಸುವನ್ನೇ ಗಮನಿಸಿದ. ಹಸು ಸ್ವಲ್ಪ ಹೊತ್ತು ಮೇಯ್ದು ನಂತರ ಗವಿಯತ್ತ ಸಾಗಿತು. ಬಾಲಕನು ಹಿಂಬಾಲಿಸಿದ. ಹಸು ಗವಿಯೊಳಗೆ ಹೋಗುವುದನ್ನು ನೋಡಿದ ಬಾಲಕ ಗವಿಯಲ್ಲಿಯೇ ಸ್ತಬ್ದನಾಗಿ ನಿಂತನು. ಗವಿಯ ಬಾಗಿಲು ಮುಚ್ಚಿತು. ಆತ ಹಿಂದಿರುಗಿ ಬರಲಿಲ್ಲ. ಬಾಲಕನನ್ನು ಕಾಣದ ತಂದೆ–ತಾಯಿ ಹುಡುಕಿದರು, ಎಲ್ಲಿಯೂ ಬಾಲಕ ಕಾಣಲಿಲ್ಲ. ತಾಯಿಗೆ ಕನಸಿನಲ್ಲಿ ನಿಮ್ಮ ಮಗ ದೇವರಾಗಿ ಗುಡ್ಡದ ಗವಿಬಂಡೆಯಲ್ಲಿ ನೆಲೆಸಿದ್ದಾನೆ ಎಂದು ಹೇಳಿದಂತಾಯಿತು. ಆಗ ಆ ತಂದೆ–ತಾಯಿ ಬಂಡೆಯನ್ನು ಪೂಜಿಸಿ ನಮಸ್ಕರಿಸಿದರು.

ಮತ್ತೊಂದು ಐತಿಹ್ಯದ ಪ್ರಕಾರ ಈ ಗುಡ್ಡದ ಮೇಲೆ ಸುತ್ತಲ ಹಳ್ಳಿಗಳಿಂದ ದನ, ಹಸು, ಕರು, ಎಮ್ಮೆಗಳನ್ನು ಹೊಡೆದುಕೊಂಡು ಮೇಯಿಸಲು ಹಳ್ಳಿಗರು ಬರುತ್ತಿದ್ದರು. ಗುಡ್ಡದ ಬಳಿ ರಾಸುಗಳನ್ನು ಮೇಯಿಸಲು ಬರುತ್ತಿದ್ದವರಲ್ಲಿ ಕುರಿಕಾಯುವ ಗವಿಯ ಮತ್ತು ರಂಗ ಎಂಬ ಇಬ್ಬರು ಹುಡುಗರಿದ್ದರು. ಇವರಿಬ್ಬರು ಕುತೂಹಲದಿಂದ ಒಂದು ದಿನ ಗುಹೆಯ ದ್ವಾರದ ಬಳಿ ಹೋದರು. ಗವಿಯ 'ವೀರನೆಂಬ' ಖ್ಯಾತಿಯನ್ನು ಪಡೆದಿದ್ದ. ಈತನಿಗೆ ಗುಹೆಯ ಒಳಗೆ ಏನಿರಬಹುದು ಎಂಬ ಕುತೂಹಲ ಕೆರಳಿ ಗುಹೆಯ ದ್ವಾರದ ಒಳಕ್ಕೆ ಹೋದ. ಹೋದವನು ಎಷ್ಟು ಹೊತ್ತಾದರು ಒಳಗಿನಿಂದ ಹೊರಕ್ಕೆ ಬರಲಿಲ್ಲ. ರಂಗ ಗವಿಯನಿಗಾಗಿ ಕೂಗಿದರೂ ಗವಿಯ 'ಓ' ಗೊಡಲಿಲ್ಲ. ಕಾದು ಮತ್ತಷ್ಟು ಕಂಗಾಲಾದ ರಂಗ. ಹೊತ್ತು ಮುಳುಗುವಷ್ಟರಲ್ಲಿ ರಂಗನು ಗವಿಯನ ಮನೆಗೆ ಸುದ್ದಿ ಹೇಳಿದ. ಗವಿಯನ ತಂದೆ-ತಾಯಿ ಕೂಗಿದರೂ ಗವಿಯ ಉತ್ತರಿಸಲಿಲ್ಲ. ಗವಿಯ ಗವಿಯಲ್ಲಿಯೇ ಕಣ್ಮರೆಯಾಗಿದ್ದನು. ಒಂದು ದಿನ ಗವಿಯ ತನ್ನ ತಾಯಿಯ ಕನಸಿನಲ್ಲಿ ಅವ್ವಾ, ನನಗೆ ಹಿಟ್ಟು ಸೊಪ್ಪಿನ ಸಾರ ತಂದು ಕೊಡ್ಡವ್ವ ಎಂದನಂತೆ. ಹೆತ್ತಕರಳು ಈ ಮಾತಿಗೆ ಮರುಕಗೊಂಡು ತನ್ನ ಯಜಮಾನ ಮತ್ತು ಮನೆಯವರೊಡನೆ ಗುಹೆ ಬಳಿ ಬಂದು ಗುಹೆಯ ಬಾಯಿಗೆ ಹಿಟ್ಟು-ಸೊಪ್ಪಿನ ಸಾರನ್ನು ಎಡೆಯಿಟ್ಟು ಪೂಜಿಸಿ ನಮಸ್ಕರಿಸಿ ಹೋದರಂತೆ. ಪ್ರಸ್ತುತ ಈಗಲೂ ಈ ರೀತಿಯ ಅಡುಗೆ ನೈವೇದ್ಯಗೊಳ್ಳುತ್ತದೆ. ಅಂದಿನಿಂದ ಗುಡ್ಡದ ಗುಹೆಯನ್ನು 'ಗವಿರಂಗನಾಥ' ಎಂದು ಕರೆದು, ಜನಪದರು ಭಕ್ತಿಯಿಂದ ಎಡೆಯಿಟ್ಟು ಪೂಜಿಸತೊಡಗಿದರು. ಆ ಗುಹೆಗೆ ಗವಿಯ ಮತ್ತು ರಂಗ ಒಡೆಯರಾದರೆಂಬ ಅರ್ಥದಲ್ಲಿ ಗವಿರಂಗನಾಥನ ಬೆಟ್ಟ ಎಂದು ಹೆಸರು ಅನ್ವರ್ಥವಾಯಿತು.

ಇನ್ನೊಂದು ಐತಿಹ್ಯದ ಪ್ರಕಾರ ಬಿಲ್ಲೇನಹಳ್ಳಿ ರಂಗನಾಥಪುರದಲ್ಲಿ ಒಬ್ಬ ರೈತನಿದ್ದ. ಅವನ ಹೆಸರು ರಂಗಪ್ಪ. ಇತನು ತೀರಿಹೋದ ಮೇಲೆ ಅವನ ಮನೆಯಲ್ಲಿ ಮಾತನಾಡುವ ಹಸುವಿನ ಕರು ಕಾಮಧೇನು ಜನಿಸಿತು. ಇಲ್ಲಿ ಅತ್ತೆ, ಸೊಸೆ ಹಾಗೂ ಕಾಮಧೇನು ಹಸುಗಳ ಮಾತಿನ ಪ್ರಸ್ತಾಪ ಬರುತ್ತದೆ. ಒಂದು ದಿನ ಸೊಸೆಯು ಕಾಮಧೇನು ಹಸುವನ್ನು ಮನೆಬಿಟ್ಟು ಹೊರಗೆ ಹಾಕಿದಾಗ ಹಸು ಕಾಡುಮೇಡುಗಳನ್ನದೆ ಒಂದು ದಟ್ಟವಾದ ಕಾಡಿನ ಮಧ್ಯ ಬಂದು ಅಳುತ್ತಾ ರಂಗಾ, ವಿಠ್ಠಲಾ, ಗೋವಿಂದ, ಗೋಪಾಲಕೃಷ್ಣ ಎಂದು ರೋಧನ ಮಾಡುತ್ತಾ ನನ್ನನ್ನು ಕಾಪಾಡುವವರು ಯಾರೂ ಇಲ್ಲವೆ ಎಂದು ಕಂಬನಿ ಮಿಡಿಯುತ್ತಾ ಅಲ್ಲಿಯ ಒಂದು ಬೆಟ್ಟದ ಗುಹೆಯಲ್ಲಿ ಬಂದು ಮಲಗಿತು. ಇಲ್ಲಿ ರಂಗಪ್ಪನ ಮೊಮ್ಮಗನು ಕಾಮಧೇನುವನ್ನು ಕಳೆದುಕೊಂಡ ಅಜ್ಜಿಯ ನೋವನ್ನು ನೋಡಲಾಗದೆ ಹಸುವನ್ನು ಹುಡುಕಲು ಬೆಟ್ಟಕ್ಕೆ ಹೋಗುತ್ತಾನೆ. ಅಲ್ಲಿ ಆ ಬಾಲಕ ದೇವರನ್ನು ನೆನೆಯುತ್ತಾ ಕೃಷ್ಣಾ ಗೋಪಾಲ, ಗೋವಿಂದ ನನ್ನನ್ನು ಕಾಪಾಡು, ನನ್ನ ಹಸುಕರುವನ್ನು ತೋರಿಸುಕೊಡು ಎಂದು ಪ್ರಾರ್ಥಿಸಿದನು. ಆಗ ಸ್ವಾಮಿಯು ಪ್ರತ್ಯಕ್ಷನಾಗಿ

ಗೋಪಾಲಕೃಷ್ಣ ಗವಿರಂಗನಾಗಿ ಹೇ ಮಗು ರಂಗಪ್ಪಾ ಬಾ ನಾನು ಈ ಆದಿಶೇಷನ ಬೆಟ್ಟದ ಗವಿಯಲ್ಲಿ ನಿನ್ನ ಕಾಮಧೇನುವಿನ ಜೊತೆಯಲ್ಲಿರುವೆ ಬಾ ಎಂದು ಕೂಗಿ ಕರೆದನು. ಕೊನೆಗೆ ಪರಮಾತ್ಮನು ಮಗು ರಂಗಪ್ಪನನ್ನು, ಹಸುವನ್ನು ಕರೆದುಕೊಂಡು ಹೋಗಿ ಆದಿಶೇಷನ ಬೆಟ್ಟದ ಗುಹೆಯಲ್ಲಿ ಐಕ್ಯವಾದನು. ಒಂದು ದಿನ ಗ್ರಾಮದ ಜನರ ಹಸುಗಳೆಲ್ಲವೂ ಬೆಟ್ಟಕ್ಕೆ ಮೇಯ್ಯಲು ಬಂದಾಗ ಒಂದು ಹಸುವು ಹುತ್ತಕ್ಕೆ ಹಾಲು ಕರೆಯುತ್ತಿದ್ದದನ್ನು ಗ್ರಾಮದ ಜನ ನೋಡಿದರು. ಆ ಜನತೆ ಶ್ರೀ ಗವಿರಂಗನಾಥಸ್ವಾಮಿ ಇಲ್ಲೆ ಇರುವನೆಂದು ತಿಳಿದುಕೊಂಡು ಗೋವಿಂದ, ಗೋಪಾಲ, ರಂಗಾ, ಕೃಷ್ಣಾ ಎಂದು ಹಾಡಿ ಹೊಗಳಿ ಪ್ರಾರ್ಥಿಸಿ ಪೂಜೆ ಮಾಡಿ ಬೇಡಿಕೊಂಡರು. ಅಪ್ಪಾ ರಂಗಪ್ಪಾ ನಿನ್ನ ಪೂಜೆಗೆ ಹೂವು, ಹಣ್ಣು, ಕಾಯಿ, ಹಾಲು, ಮೊಸರು, ಬೆಣ್ಣೆ, ತುಪ್ಪ, ಗಿಣ್ಣು ನಾನಾ ತರಹದ ಭಕ್ಷ ಭೋಜನಗಳನ್ನು ನೀಡುತ್ತೇವೆ ಎಂದು ಬೇಡಿಕೊಂಡರು.

ಮತ್ತೊಂದು ಐತಿಹ್ಯದ ಪ್ರಕಾರ ನಾರಾಯಣದುರ್ಗದ ಪಕ್ಕದಹಳ್ಳಿ ರಂಗೇಗೌಡ, ಚುಂಚೇಗೌಡ ಇಬ್ಬರು ದೊಡ್ಡ ಹೊಲದಲ್ಲಿ ದನಕರುಗಳನ್ನು ಮೇಯಿಸಿಕೊಂಡು ಹಸುಗಳನ್ನು ನೀರು ಕುಡಿಸುವುದಕ್ಕೆ (ಗವಿರಂಗನಾಥ ಸನ್ನಿಧಿ) ಗೋಕಟ್ಟೆಗೆ ಪ್ರತಿನಿತ್ಯವೂ ಹೋಗುತ್ತಿದ್ದರಂತೆ. ಒಂದು ದಿನ ದೇವರು ಸ್ವಪ್ನದಲ್ಲಿ ಋಷಿ ವೇಷ ಧರಿಸಿಕೊಂಡು, ಹಣೆಯಲ್ಲಿ ಮೂರು ನಾಮ ಧರಿಸಿಕೊಂಡು, ಬಿಳಿ ಕುದುರೆ ಹಿಡಿದುಕೊಂಡು ಹಾಲಿನ ಕೊಳದಲ್ಲಿ ದರ್ಭೆ ಬೆಳೆದು ನಿಂತಿದೆ. ನೀನು ಇಲ್ಲಿಗೆ ಬಾ, ಆ ದಿವಸವೆ ಸಂಕ್ರಾಂತಿ ಹಬ್ಬ. ಉತ್ತರಾಯಣ ಪುಣ್ಯಕಾಲ, ಮಕರ ಸಂಕ್ರಾತಿ ಹಬ್ಬ ಮಾರನೆ ದಿವಸ ಬಹಳ ಒಳ್ಳೆಯ ದಿವಸ ನಿನ್ನ ಮಕ್ಕಳು ಮರಿಗಳನ್ನು, ಬಂಧುಬಳಗದವರನ್ನು ಕರೆದುಕೊಂಡು ಬಂದು ನನ್ನ ಗವಿಗೆ ನಾಮಧಾರಣೆ ಮಾಡಿ ದೂಪ– ದೀಪಗಳನ್ನು ಹಚ್ಚಿ ಎಣ್ಣೆಮಜ್ಜನ, ಹಾಲಿನ ಅಭಿಷೇಕ, ಫಲಪುಷ್ಪಗಳನ್ನು ನೈವೇದ್ಯ ಮಾಡು ಎಂದಿರುವ ಐತಿಹ್ಯವಿದೆ.

**ಬನ್ನೂರು :**

ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕು ಒಡ್ಡಗಲ್ಲು ರಂಗನಾಥಸ್ವಾಮಿ ದೇವಾಲಯಕ್ಕೆ ಸಂಬಂಧಿಸಿರುವ ಐತಿಹ್ಯದಲ್ಲಿ ರಂಗನಾಥ ಮತ್ತು ತಿಮ್ಮಪ್ಪನು ಅಣ್ಣ ತಮ್ಮನಾಗಿ ನೆಲೆಗೊಂಡಿರುವುದರ ಕುರಿತು ತಿಳಿಸುತ್ತದೆ. ಮುಖ್ಯವಾಗಿ ಒಂದೇ ಕಾಲಘಟ್ಟದಲ್ಲಿ ಎರಡು ಸಂಪ್ರದಾಯ ಅಸ್ತಿತ್ವಕ್ಕೆ ಬರುವುದರ ಕುರಿತು ತಿಳಿಸಿಕೊಡುತ್ತದೆ. ಕಲಿಯುಗದ ಆರಂಭದಲ್ಲಿ ಶ್ರೀವೆಂಕಟೇಶ್ವರನು ಮತ್ತು ಶ್ರೀರಂಗನಾಥನು ಇಬ್ಬರೂ ಜೊತೆಯಾಗಿ ಪ್ರಪಂಚದಲ್ಲಿ ಯಾವ ಸ್ಥಳವು ಪವಿತ್ರವಾಗಿದೆ. ಎಲ್ಲಿ ಪುಣ್ಯವಾದ ಕ್ಷೇತ್ರವಿದೆ. ಅಂತಹ ಕ್ಷೇತ್ರಗಳಿಂದ ಸಾಮಾನ್ಯ ಮಾನವರಿಗೆ ತಮ್ಮ ಮೇಲೆ ಅಪಾರ ನಂಬಿಕೆ, ಅನನ್ಯ ಭಕ್ತಿಯಿಂದೊಡಗೂಡಿ ತಮ್ಮನ್ನು ಪೂಜಿಸಿಬೇಕೆಂದು ನಿರ್ಧರಿಸಿ, ಇಬ್ಬರೂ ಪ್ರಪಂಚದ ಪರ್ಯಟನೆಗೆ ಹೊರಟರು. ಇವರು ಭೂಲೋಕದ ಎಲ್ಲಾ ಭಾಗಗಳನ್ನು ಹುಡುಕುತ್ತಾ

ಹೊರಟು ಕೊನೆಗೆ ಘೋರಾರಣ್ಯದ ಈ ಪ್ರದೇಶಕ್ಕೆ ಬಂದು ವಿಶ್ರಮಿಸಿಕೊಂಡರು. ಎಚ್ಚೆತ್ತಕೊಂಡ ನಂತರ ಮುಂದೆ ಸಾಗುತ್ತಾ ಕಾವೇರಿ ದಡದಲ್ಲಿರುವ ಶ್ರೀ ಕಂಬದರಾಮನ ಬೆಟ್ಟದ ತಪ್ಪಲಿನಲ್ಲಿ ಇಬ್ಬರೂ ಸ್ನಾನ ಮಾಡಿದರು. ನಂತರ ಶ್ರೀವೆಂಕಟೇಶ್ವರನು ಸಹೋದರನಾದ ರಂಗನಾಥನನ್ನು ಕುರಿತು "ನಾಮ ಹಾಕಿಕೊಳ್ಳೋಣ ಎಲ್ಲಿ ಆ ತಿರುಮಣಿಪೆಟ್ಟಿಗೆ (ನಾಮ ಕುಂಕುಮವಿಡುವ ಪೆಟ್ಟಿಗೆ) ಯನ್ನು ಕೊಡು" ಎಂದು ಕೇಳಿದನು. ಆದರೆ ಅವನ ಹತ್ತಿರ ನಾಮಪೆಟ್ಟಿಗೆ ಇರಲಿಲ್ಲ. ಅದನ್ನು ತಾವು ಮಲಗಿರುವ ಸ್ಥಳದಲ್ಲಿ ಬಿಟ್ಟು ಬಂದಿರುವುದೆಂದು ತಿಳಿಸಿ, ಅದನ್ನು ರಂಗನಾಥನು ತರಲು ಹೋದನು. ಅಲ್ಲಿ ನಾಮದ ಪೆಟ್ಟಿಗೆ ಇದ್ದುದನ್ನು ಕಂಡು ರಂಗನಾಥನು ಸಂತೋಷಗೊಂಡು ಮೇಲೆತ್ತಲು ಎಷ್ಟು ಪ್ರಯತ್ನಿಸಿದರು ಅದು ಮೇಲೆಕ್ಕೆತ್ತಿ ಬರಲೇ ಇಲ್ಲ. ಕೊನೆಗೆ ವೆಂಕಟೇಶ್ವರನು ಆ ಸ್ಥಳದ ಮಹತ್ವವನ್ನು ಅರಿತುಕೊಂಡು ರಂಗನಾಥನನ್ನು ಉದ್ದೇಶಿಸಿ "ರಂಗನಾಥ, ಈ ಸ್ಥಳವು ಮುಂದೆ ಮಾನವಕೋಟಿಗೆ ಶ್ರೇಯಸ್ಸಾಗುವಂತ ಸ್ಥಳವೆಂದು ತಿಳಿದುಬರುತ್ತದೆ. ಆದ್ದರಿಂದ ನೀನು ಆ ಸ್ಥಳಕ್ಕೆ ಹೋಗು ಆ ನಾಮದ ಪೆಟ್ಟಿಗೆಗೆ 'ಒಡ್ಡಗಲ್ಲು' ಎಂದು ಹೆಸರಿಟ್ಟಿದ್ದೇನೆ. ಇನ್ನು ಈ ಪುಣ್ಯಕ್ಷೇತ್ರದಲ್ಲಿ ಮಾನವರೆಲ್ಲರೂ ನಿನ್ನ ಹೆಸರಿನ ಜೊತೆಗೆ ಆ ತಿರುಮಣಿಪೆಟ್ಟಿಗೆಯ ಹೆಸರನ್ನು ಸೇರಿಸಿ ಸ್ಮರಿಸುವಂತೆ ನಾನೇ ನಿನಗೆ ನಾಮಕರಣ ಮಾಡುತ್ತೇನೆ, ಆ ಹೆಸರಿನಿಂದಲೇ ನಿನ್ನನ್ನು ಪೂಜಿಸಲಿ. 'ಒಡ್ಡಗಲ್ಲು ರಂಗನಾಥ' ಎಂದು ನೀನು ಪ್ರಪಂಚದಲ್ಲೆಲ್ಲಾ ಹೆಸರುವಾಸಿಯಾಗಿ ಅತಿ ವೈಭವದಿಂದ ನಿನ್ನ ಭಕ್ತರನ್ನು ಕಾಪಾಡಿಕೊಂಡು, ಕಲಿಯುಗವು ಪೂರ್ಣವಾಗುವವರೆಗೂ ಇಲ್ಲಿಯೇ ಶಾಶ್ವತವಾಗಿ ನೆಲೆಸಿರು ಎಂದನು.

**ಸಂಚಾರಿ ಐತಿಹ್ಯಗಳು :**

ಒಂದು ಗೊತ್ತಾದ ಸ್ಥಳದಲ್ಲಿ ಜನ್ಮತಾಳಿ ಖಚಿತ ರೂಪದಲ್ಲಿ ಬೆಳವಣಿಗೆ ಹೊಂದಿ ನಂಬಿಕೆ, ಆಚರಣೆ, ಧರ್ಮಕ್ಕೆ ಸಂಬಂಧವನ್ನು ಕಲ್ಪಿಸಿಕೊಂಡು ನಿರಂತರವಾಗಿ ಚಲನೆಗೊಳ್ಳುತ್ತಾ, ನೆಲೆನಿಲ್ಲುವ ಸ್ವಭಾವವನ್ನು ಹೊಂದಿರುವುದೇ ಇವುಗಳ ವೈಶಿಷ್ಟ್ಯ. ಇವು ಒಂದು ಘಟನೆಯ ಸುತ್ತಲೂ ಹೆಣೆದುಕೊಂಡು, ನಂತರ ಆಶಯಗಳು ಘಟನೆಗೆ ಪೂರಕವಾಗಿ ಸೇರುತ್ತ ರೂಪಗೊಂಡಂತವುಗಳು. ಇವು ಆಯಾ ಸ್ಥಳಗಳಲ್ಲಿ ಹುಟ್ಟಿ, ಹುಟ್ಟುತ್ತಲೇ ಅಲ್ಲಿನ ಸ್ಥಿತಿ, ಅನುಷ್ಠಾನದ ನಂಬಿಕೆ ಹಾಗೂ ಸಾಂಪ್ರದಾಯಿಕ ಪದ್ಧತಿಗಳನ್ನು ಮೈಗೂಡಿಸಿಕೊಳ್ಳುವುದರ ಜೊತೆಗೆ, ತನ್ನ ನಿರಂತರ ವಲಸೆ ಪಕ್ರಿಯೆಯಲ್ಲಿ ಅಲ್ಲಿನ ಪರಿಸ್ಥಿತಿಗೆ ತಕ್ಕಂತೆ ರೂಪಗೊಂಡು ನೆಲೆಸುತ್ತವೆ.

ಪ್ರಸ್ತುತ ಕರ್ನಾಟಕದಾದ್ಯಂತ ರಂಗನಾಥ ಸಂಪ್ರದಾಯಕ್ಕೆ ಸಂಬಂಧ ಪಟ್ಟಂತೆ ಕಂಡುಬರುವ ಐತಿಹ್ಯಗಳಲ್ಲಿ ಬಹುಪಾಲು ಈ ಆರು ಸಂಚಾರಿ ಐತಿಹ್ಯಗಳದೇ ವೈಶಿಷ್ಟ್ಯ. ಕರ್ನಾಟಕದಲ್ಲಿ ನೆಲೆಗೊಂಡಿರುವ ಸು. ೨೭೪ಕ್ಕೂ ಹೆಚ್ಚಿನ ರಂಗನಾಥ ದೇವಾಲಯಗಳಿಗೆ ಸಂಬಂಧಿಸಿದಂತೆ

ಸಂಚಾರಿ ಐತಿಹ್ಯಗಳೂ ತಳಕು ಹಾಕಿಕೊಂಡಿವೆ. ಇವು ಆಯಾ ಸ್ಥಳ, ಘಟನೆಗೆ ಅನುಗುಣವಾಗಿ ರಚನೆಯಾದರು ಇವುಗಳು ಏಕರೂಪದ ಆಶಯಗಳನ್ನು ಹೊಂದಿವೆ.

೧. ಕಾರೇಗಿಡದ ಗುಂಪಿನಲ್ಲಿ ರಂಗನಾಥಸ್ವಾಮಿಯು ಉದ್ಭವವಾಗಿದೆಯೆಂಬ ನಂಬಿಕೆ ಇದೆ. ಪ್ರತಿ ದಿನವೂ ಮೇಯಲು ಬಂದ ಹಸುಗಳು ಕಾರೇಗಿಡದ ಮೇಲೆ ಹಾಲು ಸುರಿಸುತ್ತಿದ್ದವು. ಹಸುವನ್ನು ಕಾಯುವ ಹುಡಗನು ನೋಡಿ ಹಸುವನ್ನು ಕೊಡಲಿಯಿಂದ ಹೊಡೆದಾಗ ಕೊಡಲಿ ಹೋಗಿ ಸ್ವಾಮಿಯ ವಿಗ್ರಹಕ್ಕೆ ತಗುಲಿ ರಕ್ತ ಬರುವಂತದ್ದು. ಅನಂತರ ಕಲ್ಲಿನಿಂದ ರಕ್ತ ಬಂದಿತಲ್ಲ ಏನೋ ಮಹಿಮೆ ಇರಬೇಕೆಂದು ಚಿಂತಿಸುವುದು. ಆಗ ಅಶರೀರವಾಣಿಯೊಂದು ನನ್ನನ್ನು ರಂಗನಾಥನೆಂದು ಪೂಜಿಸಿಬೇಕೆಂದು ಹೇಳುವುದು. ನಂತರ ಪೂಜಿಸಲು ಪ್ರಾರಂಭಿಸಿ ದೇವಸ್ಥಾನವನ್ನು ನಿರ್ಮಿಸಿದರು. ಕೊಡಲಿಯಿಂದ ತೂತು ಬಿದ್ದ ತಗ್ಗಾದ ಜಾಗವನ್ನು ಇಂದಿಗೂ ನೋಡಬಹುದು ಎಂದು ಪ್ರಚಲಿತದಲ್ಲಿದೆ.

೨. ಸೀಗೆಮೇಳೆ, ಕಾರೇಗಿಡ ಗುಂಪಿನಲ್ಲಿ ರಂಗನಾಥಸ್ವಾಮಿಯು ಉದ್ಭವವಾಗಿ ನೆಲೆಸಿರುವನು. ಈ ಗಿರಿಶಿಖರಗಳ ತಪ್ಪಲಿನಲ್ಲಿ ಗೊಲ್ಲ, ಕುರುಬರು, ದನಗಾಹಿಗಳು ಗೋವುಗಳನ್ನು ಮೇಯಿಸಲು ಈ ಸ್ಥಳಗಳಿಗೆ ಬರುತ್ತಿದ್ದರು. ಈ ಗೋವುಗಳ ಮಂದೆಯಲ್ಲಿದ್ದ ಕಪಿಲೆ, ಜಯಲಕ್ಷ್ಮೀ, ಇಲ್ಲವೆ ಆಯಾ ಗ್ರಾಮದ ಗೌಡರ ಹಸುಗಳಲ್ಲಿ ಯಾವುದಾದರೊಂದು ಹಸು ಕಾಡಿನಲ್ಲಿ ಒಂದು ಗುಹೆಯೊಳಗೆ ಪ್ರವೇಶಿಸಿ ಸಂಜೆ ಹುತ್ತವಿರುವಲ್ಲಿ ತನ್ನ ಹಾಲನ್ನು ಕರೆಯುತ್ತಿತ್ತು. ಗೋಮಂದೆಗಳು ಸಂಜೆಗ್ರಾಮಕ್ಕೆ ಹಿಂದಿರುಗಿ ಹಾಲನ್ನು ಕರೆಯುವಾಗ ಹಸು ಹಾಲನ್ನು ಕೊಡುತ್ತಿರಲಿಲ್ಲ. ಆಗ ಒಡೆಯನು ದನಗ್ರಾಹಿ ಬಾಲಕನಿಗೆ ಹಸುವನ್ನು ಗಮನಿಸುತ್ತಿರು ಎಂದು ಆಗ್ರಹಿಸುವುದು. ನಂತರ ಬಾಲಕನು ಹಸುವನ್ನು ಗಮನಿಸುತ್ತಿರುವಾಗ ಹಸು ಗೋವುಗಳ ಸಮೂಹದಿಂದ ಪ್ರತ್ಯೇಕವಾಗಿ ಒಂದು ಗವಿಯ ಕಡೆ ಹೋಗಿ ಹಾಲು ಕರೆಯುತ್ತಿರುವುದನ್ನು ಗಮನಿಸಿದನು. ನಂತರ ಗ್ರಾಮ ಗೌಡರಿಗೆ ಬಂದು ತಾನು ಕಂಡ ದೃಶ್ಯವನ್ನು ವಿವರಿಸುವುದು. ಅಶರೀರವಾಣಿಯೊಂದು ನಾನು ರಂಗನಾಥ ನೆಲೆಸಿದೆನೆಂದು ತಿಳಿಸುವುದು, ಸ್ವಾಮಿಯ ಆಜ್ಞೆಯ ಮೇರೆಗೆ ನಂತರೆಲ್ಲರೂ ಸೇರಿ ದೇವಾಲಯ ನಿರ್ಮಾಣ ಮಾಡುವುದು.

೩. ತೊರೆಯಲ್ಲಿರುವ ಕಂಬವನ್ನು ಕೆರೆಯ ತೂಬಿಗೆ ಹೇರಿಕೊಂಡು ಹೋಗುತ್ತಿದ್ದರು. ಸಾಯಂಕಾಲವಾಗಿ ಇಲ್ಲೇ ಗಾಡಿ ಬಿಟ್ಟುಕೊಂಡು ಉಳಿದುಕೊಂಡರು. ಬೆಳಗಿನ ಜಾವ ಗಾಡಿ ಹೂಡಿದರೂ ಎತ್ತುಗಳು ನೊಗ(ನಗ) ಎಳೆಯಲಿಲ್ಲ ಮೂರು ಜತೆ ವರ್ಜಿ ಹಾಕಿದರೂ ಗಾಡಿಯನ್ನು ಎಳೆಯಲಿಲ್ಲ 'ಏನಯ್ಯಾ ಈ ರೀತಿ ಆಯಿತು' ಎಂದು ಊರಿನವರನ್ನು ಕೇಳಿದರು. ಚಿಕ್ಕಬಾಲಕನ ಮೇಲೆ ರಂಗನಾಥಸ್ವಾಮಿ ಮಹಿಮೆಯಾಗಿ ನನ್ನನ್ನು ಕೆರೆ ತೂಬಿಗೆ ಹಾಕಲು

ಹೋಗುತ್ತಿರುವಿರಿ. ಆದರೆ ನಾನು ದೈವಪಿಂಡ, ನಾನು ಎಲ್ಲಿಗೂ ಬರುವವನಲ್ಲ ಎಂದಿತು. ಆಗ ಅವರು ನಾವು ೩ ದಿನ ಕಷ್ಟಪಟ್ಟು ತಂದಿರುವೆವು, ನಾವು ತೆಗೆದುಕೊಂಡು ಹೋಗಬೇಕು ಎಂದು ಇನ್ನು ಹಲವಾರು ಜೊತೆ ವರ್ಜಿ ಹಾಕಿ ಗಾಡಿ ಎಳೆಯಲು ಪ್ರಯತ್ನಿಸಿದರು. ಆಗ ಕಂಬವನ್ನು ಅಲ್ಲಿಯೇ ಬಿಟ್ಟು ಹೊರಟುಹೋದರು. ಅದನ್ನು ಗ್ರಾಮದವರು ಪ್ರತಿಷ್ಠಾಪನೆ ಮಾಡದೆ ನಿರ್ಲಕ್ಷ್ಯ ಮಾಡಿದರು. ಆಗ ಗ್ರಾಮದಲ್ಲಿ ನಾನಾ ತರಹದ ಕಷ್ಟಗಳು ಬಂದವು. ಶಾಸ್ತ್ರ ಕೇಳಲಾಗಿ ಎಲ್ಲರೂ ರಂಗನಾಥನ ಪ್ರತಿಷ್ಠೆಯ ಬಗ್ಗೆ ತಿಳಿಸಿದರು.

೪. ವ್ಯಾಪಾರಿಗಳು ದನಗಳ ಮೇಲೆ ಹೇರು (ವಸ್ತು) ತುಂಬಿಕೊಂಡು ಬಂರುವುದು. ಈ ಪ್ರದೇಶದಲ್ಲಿ ತಂಗಿಕೊಳ್ಳುವರು. ವ್ಯಾಪಾರಿಗಳು ಅಲ್ಲಿಯ ಮೂರು ಗುಂಡುಗಳನ್ನಿಟ್ಟು ಅಲ್ಲಿಯೇ ಅಡಿಗೆ ಮಾಡಿದರು. ಇದರಿಂದ ಅವರ ದನಗಳು ಮಲಗಿರುವಾಗ ಏಳದೆ ಮೂರ್ಛೆ ಹೋಗುವುದು. ನಂತರ ಒಬ್ಬ ಹುಡುಗನ ಮೈಮೇಲೆ ದೇವರು ಬಂದು ಇಲ್ಲಿ ನನ್ನನ್ನು ರಂಗಸ್ವಾಮಿಯಾಗಿ ನೆಲೆಗೊಳಿಸಬೇಕೆಂದು ಹೇಳುವುದು. ನಂತರ ಆ ಸ್ಥಳದಲ್ಲಿ ದೇವರನ್ನು ಪ್ರತಿಷ್ಠೆಮಾಡಿ ಗ್ರಾಮವನ್ನು ದೇವಾಲಯವನ್ನು ಪ್ರತಿಷ್ಠಾಪಿಸುವುದು.

೫. ವ್ಯಾಪಾರಿಗಳು ಕುದುರೆ, ಕತ್ತೆ, ಎತ್ತಿನ ಬಂಡಿಗಳ ಮೇಲೆ ತಮ್ಮ ಸರಕುಗಳನ್ನು ತೆಗೆದುಕೊಂಡು ಹೋಗುವುದು. ಮಾರ್ಗದಲ್ಲಿ ನೆಲೆನಿಂತಾಗ ಆ ಸ್ಥಳದಲ್ಲಿರುವ ಗುಂಡುಕಲ್ಲನ್ನು ತೆಗೆದುಕೊಂಡು ಸಾಂಬಾರು ಪದಾರ್ಥಗಳನ್ನು ಅರೆಯುವುವರು. ಇದರಿಂದ ಅವರ ಎತ್ತು, ಕುದುರೆ, ಪ್ರಾಣಿಗಳೆಲ್ಲವೂ ಮೂರ್ಛೆ ಹೋಗುವುದು. ನಂತರ ಅಶರೀರವಾಣಿಯೊಂದು ನಾನು ರಂಗನಾಥ ನನನ್ನು ನೆಲೆಗೊಳಿಸಿ, ದೇವಾಲಯ ಕಟ್ಟಿ ಪೂಜಿಸಬೇಕೆಂದು ಆ ಗುಂಡನ್ನೇ(ಕಲ್ಲನ್ನು) ಪ್ರತಿಷ್ಠಾಪಿಸಬೇಕೆಂದು ಹೇಳುವ ಪ್ರತೀತಿ.

೬. ತಿಮ್ಮಪ್ಪ ಕನಸಿನಲ್ಲಿ ಬಂದು ನಾನು ನಿಮ್ಮಲ್ಲಿಗೇ ಬಂದು ದರ್ಶನ ನೀಡಿ ಇಲ್ಲಿಯೇ ನೆಲೆಸುತ್ತೇನೆ ಎಂದಿರುವ ಪ್ರತೀತಿ.

ರಾತ್ರಿ ರಂಗನಾಥ ದೇವರು ಕನಸಿನಲ್ಲಿ ಕಾಣಿಸಿಕೊಂಡು ನಾನು ಬೇರೆಯಲ್ಲ, ತಿರುಪತಿ ತಿಮ್ಮಪ್ಪ ಬೇರೆಯಲ್ಲ. ಇಲ್ಲಿ ನನ್ನನ್ನು ಗುಡ್ಡದ ರಂಗನಾಥನೆಂದು ಕರೆಯುತ್ತಾ, ಇಲ್ಲಿಯೇ ಒಂದು ದೇವಸ್ಥಾನವನ್ನು ಕಟ್ಟಿಸಿ ಪೂಜಾದಿ ಕಾರ್ಯಗಳನ್ನು ಮಾಡಿದರೆ ನಿಮಗೆ ಒಳ್ಳೆಯದಾಗುವುದು ಎಂದು ಹೇಳವುದು.

ಭಕ್ತನ ಸೇವೆಯಿಂದ ಸಂತುಷ್ಟನಾಗಿರುವ ತಿಮ್ಮಪ್ಪನು ಮೂಡಲಗಿರಿಯಲ್ಲಿ ನೆಲೆಸಿರುವ ಶ್ರೀನಿವಾಸ ವೆಂಕಟೇಶ್ವರನು ನಾನೇ ಇಲ್ಲಿ ನೆಲೆಸಿರುವ ಶ್ರೀಲಕ್ಷ್ಮೀಗವಿರಂಗನಾಥ ಸ್ವಾಮಿಯೂ ನಾನೇ. ಅಲ್ಲಿ ಬಂಗಾರದ ಒಡೆಯನಾಗಿ ನೆಲೆನಿಂತಿದ್ದೇನೆ. ಇಲ್ಲಿ ಅನ್ನದಾನರಂಗನಾಗಿ ನೆಲೆಸಿದ್ದೇನೆ.

**ಚಾರಿತ್ರಿಕ ಐತಿಹ್ಯಗಳು :**

ಒಂದು ದೃಷ್ಟಿಯಿಂದ ನೋಡಿದರೆ ಐತಿಹ್ಯವೂ ಒಂದು ಜನಪದ ಇತಿಹಾಸವೇ. ಭೌತಿಕ ಆಧಾರವೊಂದನ್ನು ಮೂಲಸ್ವರೂಪದಂತೆಯೇ ಉಳಿಸಿಕೊಂಡು ನಂಬಿಕೆಗಳ ಕಲ್ಪನೆಗಳ ಆಧಾರದಿಂದ ಇವುಗಳನ್ನು ಬೆಳೆಸಲಾಗುವುದು. ಚಾರಿತ್ರಿಕ ಸಂಗತಿಯೊಂದು ಕಲ್ಪನೆಯಲ್ಲಿ ಹೇಗೊ ಹಾಗೇ ರೂಪ ತಳೆದರು, ಇತರ ಲಿಖಿತ ಆಧಾರಗಳಿಗೂ ಐತಿಹ್ಯ ಅಖಿಲಿತ ಆಧಾರಗಳಿಗೂ ಕೆಲವೊಮ್ಮೆ ಸಾಮ್ಯ ಕಂಡುಬರುತ್ತದೆ. ಹೀಗಾಗಿ ಐತಿಹ್ಯವೂ ಒಂದು ದಾಖಲೆಯಾಗುತ್ತದೆ.

ಒಂದು ಚರಿತ್ರೆಯ ಅಧ್ಯಯನಕ್ಕೆ ಲಿಖಿತ ಆಧಾರಗಳಂತೆ ಮೌಖಿಕ ದಾಖಲೆಗಳ ಆಧಾರಗಳು ಮಹತ್ವವಾದವುಗಳಾಗಿವೆ. ಅಲ್ಲದೆ ಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾಗಿರುವ ಈ ಐತಿಹ್ಯಗಳು ಪ್ರಾದೇಶಿಕವಾಗಿ ಗುರುತಿಸಲ್ಪಟ್ಟ ಪಾಳೆಯಗಾರರಂಥವರ ನೆನಪುಗಳನ್ನು ಒಳಗೊಂಡಿವೆ. ಉದಾಹರಣೆಗೆ ಚಿತ್ರದುರ್ಗ, ಸಿರಾ, ಬೂದಿಹಾಳು, ತರೀಕೆರೆ, ಪಾಳೆಯಗಾರರು, ಯಲಹಂಕ ನಾಡಪ್ರಾಭುಗಳು, ಮುಂತಾದರಿಗೆ ಸಂಬಂಧಪಟ್ಟಿವೆ.

**ವಿಜಯನಗರ ಹರಿಹರರಾಯರು :**

ವಿಜಯನಗರ ಅರಸು ಇಮ್ಮಡಿ ಹರಿಹರದೇವನು ರತ್ನ ಸಿಂಹಾಸನಾರೂಢನಾಗಿದ್ದ ಕಾಲದಲ್ಲಿ (೧೩೭೭–೧೪೦೪) ಬೇಟಾಯಾಡುತ್ತಾ ಹರಿಹರ ಮುಂತಾದ ಸ್ಥಳಗಳಲ್ಲಿ ಬಂದರು. ಈ ಪರಿಸರದಲ್ಲಿ ಮಧಬಂದ ದೊಡ್ಡ ಆನೆಯೊಂದಿರುವುದನ್ನು ತಿಳಿದರು. ಆ ಆನೆಯನ್ನು ಮದಿಸಬೇಕೆಂದು ಇಮ್ಮಡಿ ಹರಿಹರನು ಪ್ರಯತ್ನಿಸಿದರೂ ಆನೆಯು ಪಳಗಿ ಅವರ ಕೈವಶವಾಗಲಿಲ್ಲ. ಇದರಿಂದ ಅವರ ಸಂಗಡ ಬಂದ ಶ್ರೀವತ್ಸಗೋತ್ರದ ಆಪಸ್ತಂಭಸೂತ್ರದ ಯಜುಶ್ಯಾಖೆಯ ಇಂದ್ರಕಂಟಿ ಆವಳಿ ನರಸಿಂಹಭಟ್ಟನನ್ನು ಆಶ್ರಯಿಸಿಕೊಂಡು ಇಬ್ಬರು ಇಲ್ಲಿಯೆ ತಂಗಿದ್ದರು. ಆಗ ಇಮ್ಮಡಿ ಹರಿಹರರು ಅವರನ್ನು ಕುರಿತು ಪ್ರಶ್ನೆ ಮಾಡಲಾಗಿ, ನರಸಿಂಹಭಟ್ಟನು 'ಉದಯವಾದ ಗಳಿಗೆ ೩ಕ್ಕೆ ಆನೆಯು ಕೈವಶವಾಗುತ್ತದೆ' ಎಂದು ಹೇಳಿದರು. ಆಗ ರಾಯರು 'ಈ ಪ್ರಶ್ನೆಯು ಸುಳ್ಳು ಆಗಬಾರದೆಂದು' ಕೇಳಿದಲ್ಲಿ ಆತನು, ಈ ಪ್ರಶ್ನೆ ಬಗ್ಗೆ ದೇವತಾ ಅನುಗ್ರಹ ಉಂಟು, ತಮಗೆ ದೇವರು ಸ್ವಪ್ನದಲ್ಲಿಯೇ ಹೇಳಿರುವರು ಎಂಬುದಾಗಿ ತಿಳಿಸಿದರು. ಅದೇ ಪ್ರಕಾರ ಇಮ್ಮಡಿ ಹರಿಹರರಾಯನ ಸ್ವಪ್ನದಲ್ಲಿ ಸ್ವಾಮಿಯು ಕಾಣಿಸಿಕೊಂಡು ಆನೆಯು ವಶವಾಗುವುದೆಂದು ತಿಳಿಸಿತು. ಆಗ ರಾಯರು ನಿದ್ರೆಯಿಂದ ಎಚ್ಚೆತ್ತ ಮೇಲೆ ಆ ಸ್ಥಳದಲ್ಲಿ ಒಂದು ಹುತ್ತವಿತ್ತು. ಅದರಲ್ಲಿ ಲಿಂಗಾಕಾರದಲ್ಲಿ ಸ್ವಾಮಿಯು ಹುಟ್ಟಿರುವುದನ್ನು ನೋಡಿದನು. ಸಂತೋಷಗೊಂಡ ರಾಯರು ಈ ಸ್ಥಳಕ್ಕೆ ತೋಪಿನ ರಂಗನೆಂದು ಹೆಸರಿಟ್ಟು, ಆ ಸ್ಥಳದಲ್ಲಿ ಕೊಪ್ಪನಹಳ್ಳಿಯೆಂಬ ಗ್ರಾಮ ನಿರ್ಮಾಣ ಮಾಡಿದರು. ನಂತರ ಹರಿಹರ ಗುಹಾರಣ್ಯ ಕ್ಷೇತ್ರದಲ್ಲಿ ತುಲಾಪುರಷೆ ಮುಖ್ಯವಾದ ದಾನಗಳ ಕೊಡುವ ಸಮಯದಲ್ಲಿ ಯೀ

ನರಸಿಂಹಬಟ್ಟಿಗೆ ಶಕ ೧೩೧೯ ನೆಯ ಯುವ ಸಂವತ್ಸರದ ವೈಶಾಖ ಶು. ೧೫ ಚಂದ್ರ ಗ್ರಹಣದಲ್ಲಿ ಜ್ಯೋತಿಶ್ಯಾ ಪೌರೋಹಿತ್ಯ ಶ್ಯಾನುಭೋವಿಕೆಯನ್ನು ನಡೆಸಲು ಶಾಸನ ಬರೆಸಿಕೊಟ್ಟು, ಹವಳಕಟ, ಬ್ರಹ್ಮನಹಳ್ಳಿ ಈ ಗ್ರಾಮಗಳಲ್ಲಿ ಭೂಮಿಯನ್ನು ದಾನವಾಗಿ ಕೊಟ್ಟು ಸರ್ವಮಾನ್ಯವಾಗಿ ನಡೆದು ಬರುವಂತೆ ದಯಪಾಲಿಸಿದರು.

**ಚಿತ್ರದುರ್ಗದ ಪಾಳೆಯಗಾರರು :**

ಚಿತ್ರದುರ್ಗದ ಸಂಸ್ಥಾನದ ಕೊನೆಯ ಅರಸ ರಾಜಾವೀರಮದಕರಿನಾಯಕ (೧೭೫೪-೧೭೭೯) ಮತ್ತು ಶ್ರೀರಂಗಪಟ್ಟಣದ ನವಾಬ ಹೈದರ್ ಅಲಿಖಾನರ ನಡುವೆ ನಡೆದ ನಿರ್ಣಾಯಕ ಯುದ್ಧದ ವರ್ಣನೆಯು ಚಿತ್ರದುರ್ಗದ ಲಡಾಯಿ ಲಾವಣಿಯ ಕಥಾವಸ್ತು. ಇದರಲ್ಲಿ ವೀರಮದಕರಿಯನ್ನು ಜಯಿಸಬರಲೆಂದು ಹೈದರ್‌ನಿಗೆ ಮೈಸೂರು ಒಡೆಯರಾದ ಬೆಟ್ಟದ ಚಾಮರಾಜರು ಶ್ರೀರಂಗನ ಕೃಪೆಯಿರಲೆಂದೂ ಹಾರೈಸುತ್ತಾರೆ. ಇದು ಹೈದರ್ ಮತ್ತು ಮೈಸೂರು ಒಡೆಯರ ಸಂಬಂಧವನ್ನು ತಿಳಿಸುವುದರ ಜೊತೆಗೆ ಇಬ್ಬರೂ ಕೂಡ ಶ್ರೀರಂಗನ ಭಕ್ತರಾಗಿದ್ದುದ್ದರ ಬಗ್ಗೆ ತಿಳಿಸುತ್ತದೆ. ನಂತರ ಯುದ್ಧವು ಪ್ರಾರಂಭವಾಗಿ ದುರ್ಗದ ಬೇಡಪಡೆಯ ಸಾಹಸವನ್ನು ಹೈದರ್ ಸಹ ಒಂದೆಡೆ ನಿಂತು ಕಣ್ಣಾರೆ ವೀಕ್ಷಿಸುತ್ತಾನೆ. ಎಷ್ಟು ಸಾಹಸ ಮಾಡಿದರು ಎಂದಿಗೂ ದುರ್ಗದ ಪಟ್ಟಣವನ್ನು ಆಕ್ರಮಿಸಲು ಸಾಧ್ಯವಾಗದೆಂದು ಉದ್ಗರಿಸುತ್ತಾನೆ. ಶ್ರೀರಂಗನಾಥನ ಧ್ಯಾನವನ್ನು ಮಾಡುತ್ತಾ ಚಿಂತೆಯಲ್ಲಿ ತನ್ನ ಸೈನ್ಯಬಿಡಾರದಲ್ಲಿ ಮಲಗಿದ ಹೈದರ್‌ಗೆ ದರ್ಶನ ನೀಡಿದ ಶ್ರೀರಂಗನಾಥನಿಂದ ದುರ್ಗವನ್ನು ಆತನ ಕೈವಶಮಾಡಿಕೊಡುವನೆಂಬ ಆಶ್ವಾಸನೆ ದೊರೆಯುತ್ತದೆ. ಇದು ಭಕ್ತ ಮತ್ತು ದೇವರ ಸಂಬಂಧವನ್ನು ತಿಳಿಸುವುದರ ಜೊತೆಗೆ ಹೈದರ ಅಲಿಯು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಯ ಭಕ್ತನಾಗಿದ್ದನ್ನು ತಿಳಿಸುತ್ತದೆ.

**ಸಿರಾ ಪಾಳೆಯಗಾರರು :**

ತುಮಕೂರು ಪಾಳೆಯಗಾರರಲ್ಲಿ ಒಬ್ಬರಾದ ಸಿರಾ ಪಾಳೆಯಗಾರ ರಂಗಪ್ಪನಾಯಕನ ಕಾಲದಲ್ಲಿ ಅರೇಹಳ್ಳಿ ಗ್ರಾಮ ನಿರ್ಮಾಣವಾಗಿರುವ ಕುರಿತು ವಿವರಣೆ ದೊರೆಯುತ್ತದೆ. ಅಲ್ಲದೆ ಅರೇಹಳ್ಳಿ ರಂಗನಾಥ ದೇವಾಲಯದ ನಿರ್ಮಾಣದ ಕಾಲಘಟ್ಟವನ್ನು ತಿಳಿಸುತ್ತದೆ. ಹರತಿಯ ಲಕ್ಷ್ಮೀಪತಿ ನಾಯಕರ ಮಗನಾದ ರಂಗಪ್ಪನಾಯಕನ ಆಳ್ವಿಕೆಯ ಕಾಲ ಕ್ರಿ. ಶ. ೧೬ ನೆ ಶತಮಾನವಾಗಿದೆ. ಹೀಗಾಗಿ ದೇವಾಲಯ ಮತ್ತು ಗ್ರಾಮ ನಿರ್ಮಾಣ ಕಾಲಘಟ್ಟವನ್ನು ತಿಳಿಯಲು ಅನೂಕೂಲವಾದ ಆಧಾರವನ್ನು ಒದಗಿಸುತ್ತದೆ.

ಅರೇಹಳ್ಳಿ ಗ್ರಾಮವು ಸಿರಾ-ಮಧುಗಿರಿ ಮಾರ್ಗದಲ್ಲಿ ಅರೇಹಳ್ಳಿ ಗೇಟ್‌ನಿಂದ ಬಲಭಾಗಕ್ಕೆ ೧.೫. ಕಿ. ಮೀ. ದೂರದಲ್ಲೂ ಸಿರಾದಿಂದ ೬ ಕಿ. ಮೀ. ದೂರದಲ್ಲಿದೆ. ಒಮ್ಮೆ ರಂಗಪ್ಪನಾಯಕನು

ಬೇಟೆಗಾಗಿ ಪರಿವಾರದೊಂದಿಗೆ ಈಗಿರುವ ಅರೇಹಳ್ಳಿಗೆ ಬಂದಿದ್ದರು. ದಣಿವಾರಿಸಿಕೊಳ್ಳಲು ಇಲ್ಲಿನ ತುಗ್ಗಲಿಮರದ ಹತ್ತಿರ ಬೀಡು ಬಿಟ್ಟರು, ನೀರಿಗಾಗಿ ಹುಡುಕುತ್ತಿರುವಾಗ ರಂಗಪ್ಪನಾಯಕನ ಬೇಟೆಯ ನಾಯಿಯೊಂದು ನೀರಿನಲ್ಲಿ ಹೊರಳಾಡಿ ಬಂದಿರುವುದು ಕಂಡಿತು. ನಾಯಿಯ ಸುಳಿವಿಡಿದು ಹೋದಾಗ ರಂಗನಾಥಸ್ವಾಮಿಯು ನೆಲೆಗೊಂಡಿರುವ ಒಂದು ಬಂಡೆ ಇರುಕಿ (ಸಂದಿ)ನಲ್ಲಿ ಸ್ವಲ್ಪ ನೀರಿರುವುದು ಗೋಚರಿಸಿತು. ಈ ನೀರು ತಮ್ಮ ಸೈನ್ಯಕ್ಕೆ ಸಾಲುವುದಿಲ್ಲ ಎನಿಸಿದರೂ, ಎಷ್ಟು ನೀರು ಬಂದರೆ ಅಷ್ಟೇ ಸಾಕು ಎಂದು ನೀರು ತೆಗೆದರೂ, ನೀರು ಉಕ್ಕುತ್ತಿತ್ತು. ಇದರಿಂದ ಸೈನ್ಯದ ದಂಡು, ಆನೆ, ಕುದುರೆ ಎಲ್ಲವೂ ನೀರು ಕುಡಿದು ತಣಿದವು. ನಾಯಕರಿಗೆ ಆಶ್ಚರ್ಯವಾಗಿ ಸ್ಥಳದಲ್ಲಿ ಏನೋ ಶಕ್ತಿ ಇದೆ. ಸುತ್ತಲು ಹುಡುಕಿ ಎಂದು ಸೈನಿಕರಿಗೆ ತಿಳಿಸಿದನು. ಸೊಪ್ಪಿನ ಗುಡಿಸಲಲ್ಲಿ ಶ್ರೀರಂಗನಾಥ ನೆಲೆಸಿದ್ದು, ಜೊತೆಗೆ ಅದರೊಳಗೆ ಜಾಗಟೆ, ಭವನಾಸಿ, ಗಂಟೆ ಮೊದಲಾದವು ಕಂಡುಬಂದವು. ಎಲ್ಲರೂ ಪೂಜಾರಿಯನ್ನು ಹುಡುಕಲು ಪ್ರಾರಂಭಿಸಿದರು. ಪೂಜಾರಿಯು ತುಗ್ಗಲಿ ಮರದ ಕೆಳಗೆ ತುಗ್ಗಲಿ ಸೌಧೆಯನ್ನು ಮುರಿಯುತ್ತಿದ್ದನು. ಆತನ ಹೆಸರು ನಿಂಗಜ್ಜ. ಈತನ ಊರು ಕೆಂಪನಹಳ್ಳಿ. ಒಮ್ಮೆ ರಂಗನಾಥಸ್ವಾಮಿ ಕನಸಿನಲ್ಲಿ ಬಂದು ನನ್ನನ್ನು ಪೂಜೆ ಮಾಡಿಕೊಂಡು ಇರು ಎಂದು ಆದೇಶಿಸಿದ ಪ್ರಯುಕ್ತ ನಿಂಗಜ್ಜ ರಂಗನಾಥಸ್ವಾಮಿಯ ಪೂಜೆ ಮಾಡಿಕೊಂಡು ಅಲ್ಲಿಯೇ ತಂಗಿದ್ದ. ಈತನು ಬಳಿನಿಂಗಜ್ಜ ಎಂದು ಹೆಸರಾಗಿದ್ದ. ರಂಗಪ್ಪನಾಯಕನು ಅಜ್ಜನಿಗೆ ಧೈರ್ಯಹೇಳಿ ನಿನಗೆ ಅನುಕೂಲ ಮಾಡಿಕೊಡುತ್ತೇನೆ, ನೀನು ಪೂಜೆ ಮಾಡಿಕೊಂಡಿರು ಎಂದು ಹೇಳಿ ಸೋಮವಾರ ಮರಳಿ ಬರುವುದಾಗಿ ತಿಳಿಸಿದರು. ನಂತರ ಬಂದ ರಂಗಪ್ಪನಾಯಕನು ಹಲ್ಕೂರು, ದೊಡ್ಡಗೊಳ, ರತ್ನಸಂದ್ರದ ಗೌಡ ಶಾನುಭೋಗ ಹಾಗೂ ತೋಟಿ ತಳವಾರರ ಸಮೇತವಾಗಿ ಅಲ್ಲಿಗೆ ಬಂದು, ಒಂದು ಆಲದ ಮರದಡಿ ಕುಳಿತು ಈ ಸ್ಥಳದಲ್ಲಿ ಒಂದು ಊರನ್ನು ಕಟ್ಟುವ ಪ್ರಸ್ತಾವವನ್ನು ಮುಂದಿಡುವರು. ಇದು ಒಂದು ಶಕ್ತಿ ಕೇಂದ್ರವಾಗಿದ್ದು, ಈ ಪ್ರದೇಶ ಮೂರು ಗ್ರಾಮಗಳ ಮೇರೆಯಾಗಿದೆ. ಹೀಗಾಗಿ ಮೂರು ಗ್ರಾಮದವರು ಸ್ವಲ್ಪ ಸ್ವಲ್ಪ ಪ್ರದೇಶವನ್ನು ಬಿಟ್ಟುಕೊಡಬೇಕೆಂದು ಕೇಳಿದನು. ಎಲ್ಲರು ಒಪ್ಪಿದ ನಂತರ ರಂಗಪ್ಪನಾಯಕನು ಬಿಳಿನಿಂಗಜ್ಜನಿಗೆ ಆ ಪ್ರದೇಶವನ್ನು ಜಹಗೀರಾಗಿ ಕೊಟ್ಟು ಅಲ್ಲಿನ ಜವಾಬ್ದಾರಿ ಹಾಗೂ ಪೂಜಾರಿಕೆಯನ್ನು ನಿಂಗಜ್ಜನಿಗೆ ವಹಿಸಿಕೊಟ್ಟು ಮುಂದಿನ ೧೫ ದಿನಗಳೊಳಗಾಗಿ ಒಂದು ಜಯರೇಖೆಯನ್ನು ಬರೆಸಿ ಕೊಡುವುದಾಗಿ ಹೇಳಿ ಊರನ್ನು ಕಟ್ಟಲು ಅಜ್ಞೆ ಮಾಡಿದನು.

**ಬೂದಿಹಾಳು ಪಾಳೆಯಗಾರರು :**

ಇದು ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ಬೂದಿಹಾಳು ಗ್ರಾಮದ ಪಾಳೆಯಪಟ್ಟುವಾಗಿತ್ತು. ಈ ಪಾಳೆಯಪಟ್ಟು ಕ್ರಿ. ಶ. ೧೫ ನೆಯ ಶತಮಾನದ ಪೂರ್ವಾರ್ಧದಲ್ಲಿ ಸ್ಥಾಪನೆಗೊಂಡಿತ್ತು.

ಸಿರುಮನಾಯಕನೆಂಬ ಗೊಲ್ಲಜನಾಂಗದ ಪಾಳೆಯಗಾರನ ಕಾಲಕ್ಕೆ ಬೂದಿಹಾಳು ಉಚ್ಛ್ರಾಯ ಸ್ಥಿತಿಗೇರಿ ಹೊಯ್ಸಳ ದೇಶದಲ್ಲಿಯೇ ಪ್ರಸಿದ್ಧಿ ಪಡೆದ ಪಾಳೆಯಪಟ್ಟಾಗಿತ್ತು. ಸಿರುಮನಾಯಕ ಮತ್ತು ಕುಮಾರಮಲ್ಲನ ಕಾಲಾವಧಿಯಲ್ಲಿ ಇದೇ ತಾಲೂಕಿನ ಗವಿರಂಗಾಪುರ ಕ್ಷೇತ್ರದಲ್ಲಿ ದೇವಾಲಯವು ಇವರ ಕೈಯಿಂದಲೇ ನಿರ್ಮಾಣವಾಗಿರುವುದು ತಿಳಿದುಬರುತ್ತದೆ.

ಸ್ವಾಮಿಯು ಬೂದಿಹಾಳಿನ ಪಾಳೆಯಗಾರನ ಸ್ವಪ್ನದಲ್ಲಿ ಕಾಣಿಸಿಕೊಂಡು ನಾನು ಶ್ರೀಮನ್ ಮಹಾವಿಷ್ಣುವು ಕೂರ್ಮಾವತಾರಿಯಾಗಿ ಶ್ರೀರಂಗನಾಥ ನಾಮಾಂಕಿತದಿಂದ ಗಿರಿಶಿಖರದಲ್ಲಿ ನೆಲೆ ನಿಂತಿರುವುದಾಗಿಯೂ ನಿತ್ಯ ಪೂಜಾ ಕಾರ್ಯವನ್ನು ನಿರಂತರವಾಗಿ ನಡೆಸಲು ಏರ್ಪಡಿಸಬೇಕೆಂದು ಆದೇಶಿಸಿದ್ದನು. ಆಗ ಗ್ರಾಮ ಗೌಡನು ಇದೇ ವಿಷಯವನ್ನು ನಿವೇದಿಸಿಕೊಂಡಿದ್ದನ್ನು ಅನುಸರಿಸಿ ಆಗಿಂದಾಗಲೇ ಸುತ್ತಲಿನ ಗ್ರಾಮಗಳಾದ ಹೆಗ್ಗೆರೆ–ಬಿನ್ನಿಕೆರೆ–ಎಣ್ಣೇಗೆರೆ–ನಡುವನಹಳ್ಳಿ ಮುಂತಾದ ಗ್ರಾಮ ಮುಖಂಡರನ್ನು ಒಳಗೊಂಡು ಸುಮಂಗಲಿಯರ ಜೊತೆಯಲ್ಲಿ ಮಂಗಳವಾದ್ಯ ಸಹಿತನಾಗಿ ಪೂಜಾ ಸಾಮಾಗ್ರಿಗಳೊಂದಿಗೆ ಗಿರಿಶಿಖರದ ಗವಿಯಲ್ಲಿಗೆ ಬಂದು ಆ ಗುಹಾ ಪ್ರದೇಶದಲ್ಲಿ ದಟ್ಟವಾಗಿ ಬೆಳೆದಿದ್ದ ಕಾಡಿನಲ್ಲಿರುವ ಹುತ್ತದಲ್ಲಿ ವೀಕ್ಷಿಸಲಾಗಿ ಶಂಖ–ಚಕ್ರ–ಮುದ್ರಾಂಕಿತ ತ್ರಿನಾಮಧಾರಿ ಕೂರ್ಮಾವತಾರಿಯಾಗಿರುವ ಶ್ರೀಮನ್‌ಮಹಾವಿಷ್ಣುವನ್ನು ಕಂಡು ಪೂಜಾಕಾರ್ಯಗಳನ್ನು ನೆರವೇರಿಸಿದರು. ಪ್ರಥಮವಾಗಿ ಗವಿಯಲ್ಲಿ ಉದ್ಭವಿಸಿರುವ ಶ್ರೀರಂಗನಾಥ ಸ್ವಾಮಿಯ ಸಾನ್ನಿಧ್ಯವನ್ನು ಗಮನಿಸಿದ ರಂಗನಾಥನೆಂಬ ಗೊಲ್ಲ ಶ್ರೇಷ್ಠನನ್ನು ನಿತ್ಯ ಪೂಜಾಕಾರ್ಯಕ್ಕೆ ನಿಯಮಿಸಿದನು. ನಿತ್ಯಪೂಜಾಕಾರ್ಯಕ್ಕೆ ಬೇಕಾಗುವ ಸಾಮಗ್ರಿಗಳಿಗೆ ಕೆಲವು ಜಮೀನನ್ನು ದೇವಾಲಯಗಳಿಗೆ ಬಳುವಳಿಯಾಗಿ ಕೊಟ್ಟು ದೇವಾಲಯ ಕಟ್ಟುವ ಕಾರ್ಯವನ್ನು ಪ್ರಾರಂಭಿಸಿದರು.

**ಯಲಹಂಕ ನಾಡಪ್ರಭುಗಳು :**

ಯಲಹಂಕ ನಾಡಪ್ರಭುಗಳಾದ ಇಮ್ಮಡಿ ಕೆಂಪೇಗೌಡ ಮತ್ತು ಅವನ ನಂತರದ ದೊರೆಗಳ ವಿರುದ್ಧ ನಡೆದ ಧಾರ್ಮಿಕ ಸಂಚುಗಳ ಕುರಿತು ಎಳೆಗಳು ದಟ್ಟವಾಗಿಯೇ ದೊರೆಯುತ್ತವೆ. ಪ್ರಸ್ತುತ ರಂಗನಾಥನ ಭಕ್ತನಾಗಿದ್ದ ಮಾಗಡಿಯ ದೊರೆ ಸೋಮೇಶ್ವರನ ಭಕ್ತನಾಗುವಂತೆ ಮಾಡಲಾದ ಕಥೆಯೊಂದು ಪ್ರಚಲಿತವಲ್ಲಿದೆ. ಒಂದು ದಿನ ಎಂದಿನಂತೆ ದೊರೆ ದೇವಾಲಯಕ್ಕೆ ರಂಗನಾಥನ ಪೂಜೆಗಾಗಿ ಹೋದನು. ಪೂಜೆಯ ನಂತರ ಪೂಜಾರಿ ಪುಟ್ಟಣ್ಣ ತೀರ್ಥವನ್ನು ರಾಜನಿಗೆ ಕೊಟ್ಟನು. ಅದನ್ನು ರಾಜನು ಸೇವಿಸಬೇಕೆನ್ನುವುದರಲ್ಲಿ ಬಿಳಿಯ ಕೂದಲೊಂದು ಕಂಡಿತು. ಕೂಡನೇ ಅವನು ಪೂಜಾರಿಯನ್ನು ಇದೇನೆಂದು ಕೇಳಿದನು. ಪೂಜಾರಿಯು ನಮ್ರವಾಗಿ ರಂಗನಾಥನಿಗೆ ವಯಸ್ಸಾಯಿತು, ಅವನ ತಲೆಯ ನೆರೆಕೂದಲು ಎಂದ ಉತ್ತರಿಸಿದನು. ಇದನ್ನರಿತ ದೊರೆ ಸೋಮೇಶ್ವರನತ್ತ ನಡೆದ. ಆದರೆ ರಂಗನಾಥನು ಕನಸಿನಲ್ಲಿ ಬಂದು ತನ್ನನ್ನು ಬಿಡದೆ ಸೇವಿಸಬೇಕೆಂದು ಹೇಳಿದನಂತೆ.

"ನಿನಗೆ ಸಕಲ ಭಾಗ್ಯವನ್ನೆಲ್ಲ ಉಂಟು ಮಾಡಿಕೊಡುತೀನಿ ಮಗನೆ ನನ್ನದೊಂದು ಸೇವೆಯ ಚಂದದಿಂದ ಮಾಡಿಸಯ್ಯ ನನಗೆ ಏಳು ಪೂಜೆಯ ಮಾಡಿಸಯ್ಯ, ಏಳು ತಲೆಗೆಯ ಮಾಡಿಸಯ್ಯ ಅಯ್ಯಾ ಮಾಗಡಿಯ ರಂಗಧಾಮ ಮನೆಸ್ವಾಮಿ ರಂಗಧಾಮ ಇಷ್ಟೊಂದು ಮಾತುಹೇಳಿ ಮಾಯವಾಗಿ ಹೋದುನು".

ಆದರೂ ಏನು ಪ್ರಯೋಜನವಾಗಲಿಲ್ಲ. ಮಾಗಡಿಯ ದೊರೆ ಶೈವದತ್ತ ತನ್ನ ಹೆಜ್ಜೆಯನ್ನು ಮುಂದುವರಿಸಿದ. ಆಗ ವೈಷ್ಣವರಿಗೆ ಕೋಪಉಂಟಾಯಿತು.

"ಅಯ್ಯ ಬ್ರಾಹ್ಮಣರು ಏನಂತ ಮಾತನ್ನು ಆಡುತ್ತಾರೆ.
ಇವನ ಸಿರಿತನ ಅಡಗಬೇಕು, ಇವನ ದೊರೆತನ ಅಡಗಬೇಕು
ಇವನ ದರಬಾರು ಅಡಗಬೇಕು ದವಲತ್ತು ಅಡಗಬೇಕು"

ಈ ರೀತಿಯ ಧಾರ್ಮಿಕ ಪಿತೂರಿಯ ಅಂಶಗಳು ತಿಳಿದು ಬರುತ್ತದೆ.

**ತರೀಕೆರೆ ಪಾಳೆಯಗಾರರು :**

ತರೀಕೆರೆ ಪಾಳೆಯಗಾರರಲ್ಲಿ ಸರ್ಜ ಹುಚ್ಚಹನುಮಪ್ಪ ನಾಯಕರು ಒಬ್ಬರು. ಇವರು ಸಂತೇಬೆನ್ನೂರು ಸಂಸ್ಥಾನಕ್ಕೆ ಸೇರಿದ ಗ್ರಾಮಗಳನ್ನು ನೋಡುವ ಸಲುವಾಗಿ ಪ್ರಯಾಣ ಮಾಡುತ್ತಿರುವಾಗ ದೇವಗಿರಿಯ ಬೆಟ್ಟದ ಮೇಲಿರುವ ರಂಗನಾಥ ದೇವಾಲಯಕ್ಕೆ ಬಂದರು. ಆಗ ಪೂಜಾರಿಯು ದೇವಾಲಯದ ಆವರಣದಲ್ಲೇ ವಾಸವಾಗಿದ್ದನು. ಸ್ವಾಮಿಯ ಸೇವೆಗಾಗಿ ಎತ್ತಿ ತಂದಿದ್ದ ಹೂವುಗಳು ಆತನ ಮಡದಿಯ ಮುಡಿಯನ್ನು ಸೇರಿದ್ದವು. ಇದರಿಂದ ಬಂದಿರುವ ಭಕ್ತರಿಗೆ ಕೊಡಲು ಹೂ ಪ್ರಸಾದ ಇರಲಿಲ್ಲ. ಇದನ್ನು ಅರಿತ ಪೂಜಾರಿಯು ಗಾಬರಿಯಿಂದ ತನ್ನ ಗುಡಿಸಲಿಗೆ ಓಡಿ ತನ್ನ ಮಡದಿಯ ಹೂವುಗಳನ್ನು ಬಿಡಿಸಿ ತಂದು ಪೂಜಾತಟ್ಟೆಯಲ್ಲಿಟ್ಟನು. ನಂತರ ನಾಯಕರು ಸ್ವಾಮಿಯ ದರ್ಶನವನ್ನು ಪಡೆದು ಹೂ ಪ್ರಸಾದ ಸ್ವೀಕರಿಸಿ, ಪ್ರಸಾದವನ್ನು ಭಕ್ತಿಯಿಂದ ಕಣ್ಣಿಗೆ ತಾಗಿಸಿಕೊಳ್ಳುವಾಗ ಅದರಲ್ಲಿ ಸ್ತ್ರೀಯ ತಲೆಯ ಕೂದಲಿರುವುದನ್ನು ನೋಡಿದರು. ನಂತರ ಪೂಜಾರಿಗೆ ಕೇಳಲಾಗಿ ಸ್ವಾಮಿಗೆ ಜಡೆ ಇರುವುದಾಗಿ ಹೇಳಿದನು. ಅದನ್ನು ತಿಳಿದ ನಾಯಕರು ನಂಬದೇ ಶಿಲಾಮೂರ್ತಿಯನ್ನು, ಪೂಜಾರಿಯನ್ನು ಪರೀಕ್ಷಾತ್ಮಕ ಸೂಕ್ಷ್ಮ ದೃಷ್ಟಿಯಿಂದ ವೀಕ್ಷಿಸಿದನು. ಪೂಜಾರಿಯು ಕಣ್ಮುಚ್ಚಿ ಹುತ್ತದೊಳಗೆ ಕೈಹಾಕಿದನು. ನಂತರ ನಿಧಾನವಾಗಿ ಮೇಲಕ್ಕೆತ್ತಲು ನಿಜಕ್ಕೂ ಅದು ಕೆಂಪನೆಯ ಕೂದಲುಗಳುಳ್ಳ ಜಡೆಯಾಗಿದ್ದಿತು. ಆಗ ಸರ್ಜಹನುಮಪ್ಪ ನಾಯಕರು ತಮ್ಮ ದುಡುಕಿಗಾಗಿ ಭಗವಂತನಲ್ಲಿ ಕ್ಷಮೆ ಕೇಳಿಕೊಂಡರು. ಹೀಗಾಗಿ ಈ ದೇವರನ್ನು ಕೆಂಜೆಡೆರಾಯ ಎಂದೂ ಕರೆಯುವರು.

ನಂತರ ಹೊರಬಂದ ನಾಯಕರು ಕುದುರೆಯನ್ನು ಎರಲು ಹೋದಾಗ ಕುದುರೆಯು ಮಲಗಿಕೊಂಡಿತ್ತು. ಅದನ್ನು ಎಬಿಸಲು ಪ್ರಯತ್ನಿಸಿದಾಗ ಅದು ಸಂಪೂರ್ಣವಾಗಿ ಮೂರ್ಛೆಗೊಂಡಿತು. ನಂತರ ಪೂಜಾರಿಯೂ ಸ್ವಾಮಿಯ ತೀರ್ಥವನ್ನು ತಂದು ಕುದುರೆಯ ಮೇಲೆ ಚಿಮುಕಿಸಿದರು. ಇದರಿಂದ ಆಶ್ಚರ್ಯಗೊಂಡ ನಾಯಕರು ಸರ್ಜ ಕೆಂಗಪ್ಪನವರ ಸಹಾಯವನ್ನು ಪಡೆದು ರಂಗನಾಥ ದೇವಾಲಯದ ಮುಂದಿನ ೧೨ ಅಂಕಣದ ಭಾಗವನ್ನು ಶಾಲಿವಾಹನ ಶಕೆ ೫೫೩ ನೆ ಖರ ಸಂವತ್ಸರದ ಕಾರ್ತಿಕ ಶುದ್ಧ ೯ ರಲ್ಲಿ ಕಟ್ಟಿಸಿ ಪೂರ್ಣಗೊಳಿಸಿದುದಾಗಿ ತಿಳಿದು ಬರುತ್ತದೆ. ಅಲ್ಲದೆ ಸರ್ವಾಂತರ್ಯಾಮಿಯಾದ ಪವಾಡ ಪುರುಷನ ಪವಾಡಕ್ಕೆ ಮನತುಂಬಿ ನಮಿಸಿ, ಸ್ವಾಮಿಯನ್ನು ಪೂಜಿಸಿಕೊಂಡಿದ್ದ ಪೂಜಾರಿಗೆ ಒಂದು ಹೊಲವನ್ನು ಬಳುವಳಿಯಾಗಿ ಕೊಟ್ಟರು. ಪ್ರಸ್ತುತ ಈಗಲೂ 'ಪವಾಡದ ಹೊಲ' ಎನ್ನುತ್ತಾರೆ.

**ಮುಸ್ಲಿಂ ದಾಳಿ :**

ಕ್ರಿ.ಶ. ೧೬೩೬ರಲ್ಲಿ ವಿಜಾಪುರದ ದಂಡನಾಯಕನಾಗಿದ್ದ ರಣದುಲ್ಲಾಖಾನನು ಹಿಂದೂ ದೇವಾಲಯಗಳನ್ನು ನಾಶಪಡಿಸುತ್ತಾ, ದಾವಣಗೆರೆ ಪ್ರಾಂತ್ಯದ ಸಂತೇಬೆನ್ನೂರು ಗ್ರಾಮದ ಶ್ರೀರಾಮ ದೇವಾಲಯವನ್ನು ನೆಲಸಮ ಮಾಡಿದನು. ನಂತರದಲ್ಲಿ ದೇವರಹಳ್ಳಿಯ ಪವಿತ್ರ ಕ್ಷೇತ್ರದ ಮೇಲೂ ದಾಳಿ ಮಾಡಿದನು. ಬೆಟ್ಟವೇರಿದ ಸೈನಿಕರು ಶ್ರೀರಂಗನಾಥನ ದೇವಾಲಯವನ್ನು ಮುತ್ತಿದರು. ಸ್ವಾಮಿಯ ದೇವಾಲಯದಲ್ಲಿ ದೊಡ್ಡ ದೊಡ್ಡ ಜೇನುಗೂಡುಗಳಿದ್ದವು. ದೈವದ ಮಹಿಮೆಯೋ ಅಥವಾ ಸೈನಿಕ ಕುಚೇಷ್ಟೆಯೋ ಎಂಬಂತೆ ಜೇನು ಹುಳುಗಳು ಝೇಂಕಾರ ಮಾಡುತ್ತಾ ಸೈನಿಕರನ್ನು ಕಚ್ಚಲು ಪ್ರಾರಂಭಿಸಿದವು. ಕ್ರೂರ ಕಡಿತದಿಂದ ಪ್ರಾಣ ರಕ್ಷಣೆಗಾಗಿ ಶ್ರೀ ಲಕ್ಷ್ಮೀದೇವಿಯ ದೇವಸ್ಥಾನ ಪ್ರವೇಶಿಸಿದ ಸೈನಿಕರು ಶ್ರೀಲಕ್ಷ್ಮೀದೇವಿಯ ವಿಗ್ರಹವನ್ನು ತೃಟಿತಗೊಳಿಸಿದರು. ಅದರ ಪರಿಣಾಮವಾಗಿ ಭುಜದ ಹಿಂಭಾಗದಲ್ಲಿ ಬಿರುಕುಂಟಾಯಿತು. ಅಲ್ಲದೆ ಈ ಘಟನೆಯಿಂದ ರಣದುಲ್ಲಾಖಾನನು ತನ್ನ ಸೈನಿಕರೊಂದಿಗೆ ಪಲಾಯನ ಮಾಡಿದನು.

**ಪೇಶ್ವೆ ಬಾಲಾಜಿ ಬಾಜಿರಾವ್ :**

ತಾವರಕೆರೆಯ ಬಂಡೆ ರಂಗನಾಥಸ್ವಾಮಿ ದೇವಾಲಯವನ್ನು ಗ್ರಾಮದ ರಂಗೇಗೌಡರ ತಾತಂದಿರು ನಿರ್ಮಿಸಿ ಗುಡ್ಡದ ರಂಗನಾಥಸ್ವಾಮಿಯನ್ನು ಪ್ರತಿಷ್ಠಾಪನೆ ಮಾಡಿದರು. ಭಕ್ತರ ನೆರವಿನಿಂದ ಸರ್ಕಾರದ ವತಿಯಿಂದ ಸಾರ್ವಜನಿಕ ಉಪಯೋಗಕ್ಕಾಗಿ ನಾಲ್ಕು ಕಲ್ಲು ಮಂಟಪಗಳನ್ನು, ಎರಡು ಗೋಕಟ್ಟೆಗಳನ್ನು ಕಟ್ಟಿಸಿದರು. ಸ್ವಾಮಿಯ ಅನನ್ಯ ಭಕ್ತದಾಸಿ ರಂಗಮ್ಮ ಮೊರಡಿ ಸಮೀಪದಲ್ಲಿ ಹಿಸಿ ನೀರಿನ ಕಲ್ಯಾಣಿಯನ್ನು ಕಟ್ಟಿಸಿದ್ದಾಳೆ. ಈ ವಿಷಯ ತಿಳಿದ ಪೇಶ್ವೆ ಬಾಲಾಜಿ ಬಾಜಿರಾವ್ ಮತ್ತು ಸೇನಾನಿ ಬಾಬುರಾವ್ ಭಕ್ತಿಯಿಂದ ದೇವಾಲಯವನ್ನು ಕಟ್ಟಿಸುವುದಾಗಿ ಸಂಕಲ್ಪ

ಮಾಡಿಕೊಂಡರು. ನಂತರ ಮಣ್ಣಿನ ಕುಟೀರ, ಮೇಲ್ಛಾವಣಿಗೆ ತೆಂಗಿನ ಗರಿ, ಹುಲ್ಲಿನ ಹೊದಿಕೆ ಮುಚ್ಚಿ ಭಿನ್ನವಾಗಿದ್ದ ಬಂಡೆಯನ್ನು ಶ್ರೀರಂಗನಾಥನೆಂದು ನಂಬಿ ಪೂಜಿಸಿ ಸಂಕಲ್ಪ ಮಾಡಿಕೊಂಡು ಯುದ್ಧಕ್ಕೆ ಸನ್ನದ್ಧರಾದರು. ಸಿರಾದಲ್ಲಿ ಪೇಶ್ವೆ ಬಾಲಾಜಿ ಬಾಜಿರಾವ್ ಮತ್ತು ದಿಲಾವರಖಾನನ ಮಧ್ಯ ಯುದ್ಧ ಸಂಭವಿಸಿದಾಗ, ದಿಲಾವರಖಾನನ ಸೇನೆ ಸೋಲನ್ನು ಅನುಭವಿಸಿತು. ಸಿರಾ ಮರಾಠರ ವಶವಾಯಿತು. ಭಗವದ್ಭಕ್ತನಾದ ಬಾಜಿರಾವ್ ಮುಂದೆ ಶ್ರೀಬಂಡಿರಂಗನಾಥಸ್ವಾಮಿ ಕೃಪೆಯಿಂದ ಯುದ್ಧದಲ್ಲಿ ಜಯ ದೊರಕಿತೆಂದೇ ಭಾವಿಸಿದನು. ಮುಂದುವರೆದು ಪಟೇಲರಿಗೆ ದೇವಾಲಯವನ್ನು ನಿರ್ಮಿಸಲು ಸೂಚಿಸಿದನು. ಇದರಿಂದ ದೇವರ ನಿತ್ಯ ಪೂಜೆಗಾಗಿ ಕಲ್ಯಾಣಿ, ಯಾತ್ರಿಕರಿಗೆ ಸ್ನಾನಘಟ್ಟ ಮತ್ತು ಮಂಟಪವನ್ನು ಕಟ್ಟಿಸಿದರು. ಭಕ್ತರು ಹಾಗೂ ಪ್ರವಾಸಿಗರು ತಂಗಲು ಬಾಬುರಾವ್ ಛತ್ರವನ್ನು ನಿರ್ಮಿಸಿದರು. ದೇವಾಗಾರದ ಆದಾಯಕ್ಕಾಗಿ ಕಲ್ಯಾಣಿಗೆ ಹೊಂದಿಕೊಂಡಂತೆ ಸುವರ್ಣಮುಖಿಯ ತಪ್ಪಲಿನಲ್ಲಿ ಹುಣಸೆಯ ಸಾಲುಮರಗಳನ್ನು ಹೂವಿನ ತೋಪನ್ನು ಬೆಳೆಸಿದರು. ಅಂದಿನಿಂದಲೂ ಮಾಘ ಶುದ್ಧ ಸಪ್ತಮಿಯ ದಿನ ರಥಸಪ್ತಮಿಯ ಅಂಗವಾಗಿ ಶ್ರೀಬಂಡಿರಂಗನಾಥಸ್ವಾಮಿ ರಥೋತ್ಸವ ಸಂಪ್ರದಾಯವಾಗಿ ಸಾಗಿಬಂದಿದೆ. ಶ್ರೀಬಂಡಿರಂಗನಾಥಸ್ವಾಮಿಯ ಮಹಿಮೆಯಿಂದ ಸಿರಾವನ್ನು ವಶಪಡಿಸಿಕೊಂಡ ಬಾಲಾಜಿ ಬಾಜಿರಾವ್ ದೇವರ ಉತ್ಸವ ಮೂರ್ತಿಯನ್ನು ನಿತ್ಯ ಪೂಜೆಗಾಗಿ ತಮ್ಮೊಡನೆ ಕೊಂಡೊಯ್ದರು ಎಂಬ ಪ್ರತೀತಿ ಇದೆ.

**ಪವಾಡ ಸಂಬಂಧಿ ಐತಿಹ್ಯಗಳು :**

ಅಸಂಭಾವ್ಯವೆಂದು ಪರಿಗಣಿಸುವ ಘಟನೆಗಳು ಸಂಭವಿಸುವ ಕ್ರಿಯೆಯೇ ಪವಾಡಗಳಾಗಿದ್ದು, ಪ್ರಸ್ತುತ ಅಧ್ಯಯನದಲ್ಲಿ ರಂಗನಾಥ ದೇವರಿಗೆ ಸಂಬಂಧಿಸಿದಂತೆ ಪವಾಡಗಳು ಕಂಡುಬಂದಿವೆ. ಇವು ದೈವದ ಬಗೆಗೆ ಜನರಲ್ಲಿ ಭಯ, ಭಕ್ತಿಯನ್ನು ಮೂಡಿಸುವುದಲ್ಲದೆ ಅದನ್ನು ನಿರಂತರವಾಗಿ ಕಾಪಾಡಿಕೊಂಡು ಬರುವ ಕೆಲಸಗಳನ್ನು ಈ ಐತಿಹ್ಯಗಳು ಮಾಡುತ್ತಿವೆ.

**ರಾಕ್ಷಸ ಸಂಹಾರ :** ಪೂರ್ವಕಾಲದಲ್ಲಿ ಕಾಂಚನಾದ್ರಿಯಲ್ಲಿ (ಸೂಳಿಕೆರೆ ಬಳಿಯಿರುವ ಮೂರು ತಲೆಯ ಬೆಟ್ಟವೆಂದು ಊಹಿಸಲಾಗಿದೆ.) 'ಉಲ್ಕಾಮುಲ್ಕ'ನೆಂಬ ರಾಕ್ಷಸನಿದ್ದನು. ಆ ರಾಕ್ಷಸನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ 'ದೇವತೆಗಳಿಂದ ಸಾವಿಲ್ಲ' ಎಂಬ ವರವನ್ನು ಪಡೆದಿದ್ದನು. ಈತನ ದಾಳಿಗೆ, ಹಿಂಸೆಗೆ ಹೆದರಿದ ಬ್ರಾಹ್ಮಣರು ದೇವರಗುಡ್ಡ (ದೇವಗಿರಿ)ಯ ಹರಿಹರೋದ್ಭವ ಕ್ಷೇತ್ರಕ್ಕೆ ಬಂದರು. ಅಲ್ಲಿ ಹರಿಹರರನ್ನು ಕುರಿತು 'ದೇವ ದೇವ ಉಲ್ಕಾಮುಲ್ಕನೆಂಬ ರಾಕ್ಷಸನು ಮೇರು ಪರ್ವತ ಪ್ರಾಂತಗಳಲ್ಲಿ ವಾಸವಾಗಿರುವ ದಕ್ಷಿಣಾಗ್ನಿ, ಆಹವನೀಯ, ಗಾರ್ಹಪತ್ಯವೆಂಬ ತ್ರೇತಾಗ್ನಿಯನ್ನು ನಾಶಪಡಿಸಿ ನಮ್ಮ ಆಶ್ರಮಗಳನ್ನು ಕಿತ್ತುಕೊಂಡಿರುವನು. ಅಲ್ಲದೆ ಅವುಗಳನ್ನು

ರೂಪವತಿ ಎಂಬ ತನ್ನ ಪತ್ನಿಗೆ ವಾಸಸ್ಥಾನವನ್ನಾಗಿ ಮಾಡಿಕೊಂಡಿರುವನು. ನಾವೆಲ್ಲರೂ ಕರ್ಮಭ್ರಷ್ಟರಾದೆವು. ನಮ್ಮನ್ನು ಕಾಪಾಡಬೇಕೆಂದು ಬೇಡಿಕೊಂಡರು. ಆಗ ಶ್ರೀರಂಗನಾಥನು ತನ್ನ ವಾಹನವಾದ ಗರುಡನನ್ನು ಬಿಳಿಯ ಅಶ್ವವನ್ನಾಗಿ ಮಾಡಿಕೊಂಡು ಸರ್ವಶಸ್ತ್ರಾಸ್ತ್ರಗಳನ್ನು ಧರಿಸಿ ಕುದುರೆಯನ್ನು ಏರಿ ಮುನಿಗಳನ್ನೇ ಸೈನ್ಯವನ್ನಾಗಿ ಮಾಡಿಕೊಂಡು ಯುದ್ಧ ಆರಂಭಿಸಿದನು. ನಂತರ ಶ್ರೀರಂಗನಾಥನು ಬ್ರಹ್ಮನು ನೀಡಿದ ವರವನ್ನು ಜ್ಞಾಪಿಸಿಕೊಂಡು ಗರುಡನಿಗೆ 'ನಿನ್ನ ಖುರ ಪ್ರಹಾರದಿಂದ ರಾಕ್ಷಸನನ್ನು ಹೊಡೆದು ಕೊಲ್ಲುವಂತೆ' ಆಜ್ಞೆ ನೀಡಿದನು. ತಕ್ಷಣವೇ ಗರುಡನು ಬಾಣ ಸದೃಶ್ಯವಾದ ಖುರಗಳಿಂದ ಬಲವಾಗಿ ರಾಕ್ಷಸನಿಗೆ ಹೊಡೆದು ಸಂಹರಿಸಿದನು. ಇದನ್ನು ಕಂಡ ದೇವತೆಗಳು, ಗಂಧರ್ವರು, ಯಕ್ಷರು, ಕಿನ್ನರರು ಸಹ ಪರಮಾತ್ಮನ ಮೇಲೂ ಅಶ್ವದ ಮೇಲೂ ಪುಷ್ಪವೃಷ್ಟಿಗೈದರು.

**ದೇವಗಿರಿ :**

ಹೊದಗೆರೆ ಗ್ರಾಮದ ಅದ್ರಿ ವೀರಪ್ಪನು ದೇವಗಿರಿ ಕ್ಷೇತ್ರದಲ್ಲಿ ಬಂದು ನೆಲೆನಿಂತಾಗ ಬಿಳಿಯ ಪಂಚೆಯನ್ನುಟ್ಟು, ಮೂರು ನಾಮಗಳನ್ನು ಧರಿಸಿದ ಕೈಯಲ್ಲಿ ಬೆತ್ತವನ್ನು ಹಿಡಿದ ಓರ್ವ ವ್ಯಕ್ತಿಯು ಆತನ ಕನಸಿನಲ್ಲಿ ಕಂಡು, ಈ ಬೆಟ್ಟದ ತಪ್ಪಲಿನ ತುದಿಯಲ್ಲಿ ಹರಿಹರ ರೂಪವಾಗಿ ಉದ್ಭವಿಸಿದ್ದೇನೆ. ಅಲ್ಲಿಂದ ಪಶ್ಚಿಮಕ್ಕೆ ೨೧ ಪಾದಗಳ ಅಂತರದಲ್ಲಿ ಒಂದು ಬಾಳೆಯ ಎಲೆ ಬಿದ್ದಿದೆ. ಆ ಸ್ಥಳವನ್ನು ಅಗೆದು ಬೇಕಾದಷ್ಟು ದ್ರವ್ಯ ತೆಗೆದುಕೊಂಡು ನಿನ್ನ ಬಡತನವನ್ನು ನೀಗಿಸಿಕೊಂಡು, ನಾನು ಉದ್ಭವವಿರುವ ತಾಣದಲ್ಲಿ ಬಂದು ದೇವಸ್ಥಾನ ಕಟ್ಟಿಸಬೇಕೆಂದು ಆಜ್ಞಾಪಿಸಿದನು. ನಂತರ ವೀರಪ್ಪನು ಯಥಾ ಪ್ರಕಾರ ಸ್ವಾಮಿ ಹೇಳಿದ ಕಾರ್ಯವನ್ನು ಮಾಡಿ ದೇವಾಲಯ ನಿರ್ಮಿಸಿದನು. ಅಂದಿನ ದಿನಗಳಲ್ಲಿ ಬಳ್ಳಾರಿಯಿಂದ ಇಲ್ಲಿಯ ಹಳ್ಳಿಗಳಿಗೆ ದನಗಳ ವ್ಯಾಪಾರಕ್ಕಾಗಿ ಬರುತ್ತಿದ್ದ ಪಾಳೆಯಗಾರರಿಗೆ ದೇವರಹಳ್ಳಿಯಲ್ಲೇ ವಾಸವಾಗಿರುವಂತೆ ವ್ಯವಸ್ಥೆ ಮಾಡಿ ದೇವಸ್ಥಾನವನ್ನು ನೋಡಿಕೊಳ್ಳುವ ಮತ್ತು ಪೂಜಾ ಕಾರ್ಯಗಳನ್ನು ಯಥಾವಿಧಿಯಾಗಿ ನಡೆಸುವ ಜವಾಬ್ದಾರಿಯನ್ನು ಅವರಿಗೆ ವಹಿಸಿಕೊಟ್ಟನಂತೆ ಎಂಬ ಪ್ರತೀತಿ ಇದೆ.

**ಆಚರಣೆ ಸಂಬಂಧಿ ಐತಿಹ್ಯಗಳು :**

ಮನುಷ್ಯನಿಗೆ ಅನಾದಿಕಾಲದಿಂದಲೂ ದೈವದ ಮೇಲೆ ಅಪಾರವಾದ ನಂಬಿಕೆ. ಹೀಗಾಗಿ ಜಗತ್ತಿನ ಎಲ್ಲ ಜನಾಂಗಗಳಲ್ಲಿ, ಧರ್ಮಗಳಲ್ಲಿ ವಿಭಿನ್ನ ರೂಪಗಳಲ್ಲಿ ಆಚರಣೆಗಳು ನಡೆದುಕೊಂಡು ಬಂದಿರುವುದು ಕಂಡುಬರುತ್ತದೆ. ಪ್ರಸ್ತುತ ರಂಗನಾಥ ಜನಸಮುದಾಯದಲ್ಲಿ ಪವಾಡ ಪುರುಷನಾಗಿ ನೆಲೆಗೊಂಡಿದ್ದಾನೆ. ಈ ಕುರಿತಾಗಿ ಎರಡು ವಿಶೇಷ ಆಚರಣೆಗಳು ಇಂದಿಗೂ ಅಸ್ತಿತ್ವದಲ್ಲಿವೆ. ಅವುಗಳ ಐತಿಹ್ಯವು ಕೆಳಗಿನಂತಿದೆ.

**ಗಿಲಕೇನಹಳ್ಳಿ :**

ಶ್ರೀಲಕ್ಷ್ಮೀರಂಗನಾಥಸ್ವಾಮಿ ದೇವಾಲಯ ಚಿತ್ರದುರ್ಗ ಜಿಲ್ಲೆ, ಹೊಳಲಕೆರೆ ತಾಲ್ಲೂಕಿನ ಗಿಲಕೇನಹಳ್ಳಿಯ ಸ್ವಾಮಿ ಸನ್ನಿಧಾನದಲ್ಲಿ ವರ್ಷಕ್ಕೊಮ್ಮೆ 'ಗುಂಟಿಕೆ ಪವಾಡ' ಎಂಬ ವಿಭಿನ್ನ ಆಚರಣೆ ನಡೆಯುತ್ತದೆ. ಐತಿಹ್ಯವು ಆಚರಣೆಗೆ ಮೂಲವಾಗಿದ್ದು, ಐತಿಹ್ಯದಂತೆ ಸ್ವಾಮಿಯ ಮೂಲ ಉದ್ಭವ ಮೂರ್ತಿಯು ಹೊನ್ನಾಳಿ ತಾಲೂಕಿನ ತುಂಗಭದ್ರಾ ನದಿ ದಂಡೆಯ 'ನೆಲೆಹೊನ್ನೆ' ಎಂಬ ಗ್ರಾಮದಲ್ಲಿ ನೆಲೆಸಿದ್ದು, ಹಿಂದೆ ಮುಸಲ್ಮಾನರ ದಾಳಿಯಿಂದ ಅಲ್ಲಿ ಪೂಜೆ ಪುನಸ್ಕಾರಗಳು ನಿಂತು ಹೋಗಿದ್ದವು. ಆಗ ರಂಗನಾಥಸ್ವಾಮಿಯು ಹತ್ತಿರದ ಗ್ರಾಮ ಮಲಸಿಂಗನಹಳ್ಳಿ ಗ್ರಾಮದೇವತೆಯಾದ ಶ್ರೀ ಆಂಜನೇಯ ಸ್ವಾಮಿಯ ಆಜ್ಞಾಪಾಲಕನಾಗಿ ದೆಹಲಿ ಬಾದಷಾನಿಂದ ಹರಕೆ ಪಡೆದು ವಾಪಸಾಗುತ್ತಿದ್ದ ತಿಮ್ಮಳಯ್ಯನೆಂಬ ದಾಸಯ್ಯನ ಜೊತೆಗೆ ಆತನ ಭವನಾಶಿಯಲ್ಲಿ (ದಾಸರು ಉಪಯೋಗಿಸುವ ಭಿಕ್ಷಾಪಾತ್ರೆ) ಕುಳಿತು ತನ್ನನ್ನು ತಾನು ನೆಲೆಗೊಳ್ಳುವ ಸ್ಥಳದವರೆಗೆ ಕೊಂಡೊಯ್ಯಬೇಕೆಂದು ಈತನ ಕನಸಿನಲ್ಲಿ ಬಂದು ಹೇಳಿದನಂತೆ. ಈತ ನಿತ್ಯವೂ ಐದು ಮನೆಗಳ ಭಿಕ್ಷೆ ಮಾತ್ರ ಪಡೆಯಬೇಕೆಂದು ಪಡೆಯದೇ ಮುಂದೆ ಹೋಗಬಾರದೆಂದೂ ರಂಗನಾಥ ಸ್ವಾಮಿಯು ಆಜ್ಞೆ ಮಾಡಿದನಂತೆ. ಹೀಗೆಯೇ ಪ್ರಯಾಣಿಸುತ್ತಾ ಬಂದ ದಾಸ ತಿಮ್ಮಳಯ್ಯ ಗಿಲಕೇನಹಳ್ಳಿಯ ಗ್ರಾಮಕ್ಕೆ ಬಂದಾಗ ಊರ ಮುಂದಿದ್ದ ತೊಟ್ಟಿಯ ಮೆಳೆಗೆ(ಒಂದು ರೀತಿಯ ಬೆಳೆ) ದೇವರಿದ್ದ ಭವನಾಶಿಯನ್ನು(ದಾಸರು ಉಪಯೋಗಿಸುವ ಭಿಕ್ಷಾಪಾತ್ರೆ) ತಗಲು (ನೇತು) ಹಾಕಿ, ಊರಲ್ಲಿ ಭಿಕ್ಷೆ ಬೇಡಲು ಹೋದ. ಅವನು ಹೋದ ಮನೆಯಲ್ಲಿ ಮನೆಯ ಅಳಿಯ ಮರಣಕ್ಕಿಡಾಗಿದ್ದು ಶವ ಸಂಸ್ಕಾರಕ್ಕೆ ಸಿದ್ಧತೆ ನಡೆದಿತ್ತು. ರಂಗನಾಥಸ್ವಾಮಿಯ ಅಪ್ಪಣೆ ಮೇರೆಗೆ ಆತ ಭಿಕ್ಷೇಗೆ ಆ ಮನೆಯಲ್ಲೆ ಹಠಮಾಡಿದ. ಇರುವ ಸ್ಥಿತಿಯನ್ನು ಹಲವು ರೀತಿಯಲ್ಲಿ ಹೇಳಿದರೂ ಕೇಳದೆ ಸತ್ತವನನ್ನು ಬದಕಿಸುವುದಾಗಿ ಭರವಸೆ ನೀಡಿ ಮೊದಲು ಭಿಕ್ಷೆ ನೀಡಲು ಕೇಳಿದನು. ನಂತರ ಆ ಮನೆಯಿಂದ ಭಿಕ್ಷೆ ಪಡೆದು ಶವದ ಸುತ್ತ ಜಾಗಟೆ (ಪೂಜಾ ಕಾಲದಲ್ಲಿ ಬಾರಿಸುವ ವಾದ್ಯಗಳಲ್ಲಿ ಒಂದು), ಶಂಖ ಊದುತ್ತ ಶ್ರೀ ಗೋವಿಂದನ ನಾಮ ಸ್ಮರಣೆ ಮಾಡಿದ. ನಂತರ ಸತ್ತಿದ್ದ ವ್ಯಕ್ತಿ ಮಲಗಿದ್ದವನಂತೆ ಎದ್ದು ಕುಳಿತನಂತೆ. ಹಾಗೇ ದೈವ ಪ್ರೇರಣೆಯಿಂದ ಈ ಕಾರ್ಯ ನಡಿದಿದೆಯೆಂದು ಅದೇ ಪವಾಡವನ್ನು ಸಾಂಕೇತಿಕವಾಗಿ ಆಚರಿಸಬೇಕೆಂದು ದಾಸಯ್ಯನು ತಿಳಿಸಿದ. ನಂತರ ದಾಸಯ್ಯ ಅಲ್ಲಿಂದ ತಾನು ಬಿಟ್ಟು ಹೋಗಿದ್ದ ಸ್ವಾಮಿ ಇದ್ದ ಭವನಾಶಿಯನ್ನು ಹೋಗಿ ನೋಡಲಾಗಿ ಅದರಲ್ಲಿದ್ದ ಮೂರ್ತಿ ಮಾಯವಾಗಿದ್ದು ಅದೇ ಮೆಳೆಯ(ಒಂದು ರೀತಿ ಬೆಳೆ) ಮಧ್ಯಭಾಗದಲ್ಲಿ ಉದ್ಭವ ಮೂರ್ತಿಯಾಗಿ ನೆಲೆಗೊಂಡಿತ್ತು. ಅನಂತರ ಗ್ರಾಮದ ಭಕ್ತಾಧಿಗಳು ದೇವಸ್ಥಾನ ನಿರ್ಮಾಣ ಮಾಡಿಸಿದರೆಂದು ಸ್ಥಳೀಯರಿಂದ ತಿಳಿದು ಬರುತ್ತದೆ. ಈಗಲೂ ಈ ಗ್ರಾಮದಲ್ಲಿ ಮಂಗೋಳ ಮತ್ತು ದೊಳ್ಳೇರ ವಂಶಸ್ಥರು ಈ ಆಚರಣೆಯನ್ನು ಚಾಚು ತಪ್ಪದೇ

ಮುಂದುವರೆಸಿಕೊಂಡು ಬರುತ್ತಿದ್ದಾರೆ. ಹೀಗೆ ನಂಬಿಕೆಗಳು ಆಚರಣೆಗಳಾಗಿ, ಆಚರಣೆಗಳಲ್ಲಿ ಕೆಲವು ಪವಾಡಗಳಾಗುತ್ತವೆ. ರಂಗನಾಥಸ್ವಾಮಿಯ ಕೃಪೆಯಿಂದ ಸತ್ತ ವ್ಯಕ್ತಿಯು ಬದುಕುಳಿದ ಪವಾಡವು ವಿಶಿಷ್ಟ ರೀತಿಯ ಆಚರಣೆಯಾಗಿ ಮುಂದುವರೆದುಕೊಂಡು ಬಂದಿದೆ.

**ಚಿತ್ರದುರ್ಗ ಜಿಲ್ಲೆ ಹೊರಕೆರೆದೇವರಪುರ :**

ಶ್ರೀಲಕ್ಷ್ಮೀನರಸಿಂಹಸ್ವಾಮಿ ಮತ್ತು ಶ್ರೀರಂಗನಾಥಸ್ವಾಮಿ ದೇವಾಲಯ ಚಿತ್ರದುರ್ಗ ಜಿಲ್ಲೆ, ಹೊಳಲಕೆರೆ ತಾಲೂಕಿನ ಹೊರಕೆರೆದೇವರಪುರದ ಈ ಸ್ವಾಮಿ ಸನ್ನಿಧಾನದಲ್ಲಿ 'ಗುಂಡಿನ ಸೇವೆ' ಎಂಬ ವಿಭಿನ್ನ ಆಚರಣೆ ನಡೆಯುತ್ತದೆ. ಪ್ರಾಚೀನ ಕಾಲದಲ್ಲಿ ಪ್ರತಿವರ್ಷ ನಡೆಯುತ್ತಿದ್ದ ಆಚರಣೆಯನ್ನು ಈಗ ೧೨ ವರ್ಷಗಳಿಗೊಮ್ಮೆ ನಡೆಸಲಾಗುತ್ತಿದೆ. ಐತಿಹ್ಯವು ಆಚರಣೆಗೆ ಮೂಲವಾಗಿದ್ದು, ಪಟ್ಟದ ದಾಸಯ್ಯನ ಮೇಲೆ ದೇವರು ತನ್ನ ಮಹಿಮೆ ತೋರುವ ಅದ್ಭುತ ಲೀಲೆ. ತನ್ನ ಕಿಂಕರನನ್ನು ವೈಕುಂಠವಾಸಿಯನ್ನಾಗಿ ಮಾಡಿ ಪುನಃ ಭೂ ವೈಕುಂಠಕ್ಕೆ ತರುವ ದೈವ ವಿನೋದ–ಲೀಲೆ. ಒಂದು ಐತಿಹ್ಯ ಪ್ರಕಾರ ನಂದರಾಜ ಪಟ್ಟಣವು ಸುಟ್ಟು ಭಸ್ಮವಾಗಿದ್ದನ್ನು ಕೃಷ್ಣಾಛಲ ಬೆಟ್ಟದಲ್ಲಿ ದನ ಕಾಯುತ್ತಿದ್ದ ಹುಡುಗರು ನೋಡಿ ಬಹಳ ಭಯ ಭೀತರಾಗಿ ಮುಂದೇನಾಗುವುದೋ ಎಂದು ಕಂಗಾಲಾಗಿ ಅಳಲಾರಂಭಿಸಿದರು. ಆಗ ಶ್ರೀ ರಂಗನಾಥಸ್ವಾಮಿಯು ಸಾಧು ವೇಶದಲ್ಲಿ ಬಂದು ಅವರಲ್ಲಿ ಒಬ್ಬನನ್ನು ಕರೆದು ನಿಮ್ಮ ಪಟ್ಟಣವು ಸುಟ್ಟುಹೋಗಿದೆ, ಈಗ ನೀವು ಎಲ್ಲಿ ಹೋಗುತ್ತಿರಿ, ನಿಮ್ಮ ಉಟೋಪಚಾರಗಳಿಗೆ ಏನು ಮಾಡುವಿರಿ, ನಿಮ್ಮ ಜೊತೆಯಲ್ಲಿ ನನಗೂ ಊಟ ಸಿಗುವುದೇ ಎಂದು ಕೇಳುತ್ತಾನೆ. ಹುಡುಗನು ಉತ್ತರಿಸುತ್ತಾ ಇದೇ ಬೆಟ್ಟದ ಹಿಂದೆ ತಾಳ್ಯದ ಆಂಜನೇಯ ಸ್ವಾಮಿ ದೇವರಿಗೆ ನೂರೊಂದೆಡೆ ಹಾಕಿದ್ದಾರೆ, ನೀನು ಅಲ್ಲಿಗೆ ಹೋಗು ಊಟ ಸಿಗುತ್ತದೆ ಎಂದು ಸಿಟ್ಟಿನಿಂದ ಹೇಳುತ್ತಾನೆ. ರಂಗನಾಥಸ್ವಾಮಿಯು ಹುಡುಗ ಬಹಳ ಮುಗ್ಧನು ಮತ್ತು ಸುಳ್ಳು ಹೇಳುತ್ತಾನೆ ಎಂದು ತಿಳಿದು, ಹಸಿವಿನ ವಿಚಾರದಲ್ಲಿ ನೀನು ಸುಳ್ಳು ಹೇಳಬಾರದು ನೀನ್ನ ಸುಳ್ಳಿಗೆ ಶಿಕ್ಷೆ ಆಗಲೇ ಬೇಕು ಎಂದನು. ರಂನಾಥಸ್ವಾಮಿಯು ಹುಡಗನಿಗೆ ನೀನು ಹೇಳಿದ ಸ್ಥಳದಲ್ಲಿ ನಾನು ನೂರೊಂದು ಎಡೆ ಮಾಡಿಸಿಕೊಳ್ಳುತ್ತೇನೆ. ಹಾಗೂ ಇದೇ ಸ್ಥಳದಲ್ಲಿ ನಿನ್ನ ಸುಳ್ಳಿಗೆ ಶಿಕ್ಷಾರ್ಹವಾಗಿ ನಿನ್ನ ಎದೆಯ ಮೇಲೆ ಇಲ್ಲಿರುವ ಮೂರು ಗುಂಡುಗಳನ್ನು(ಕಲ್ಲುಗಳನ್ನು) ಇರಿಸಿ, ಇದೇ ತಾಳ್ಯದ ಆಂಜನೇಯ ಸ್ವಾಮಿಯ ಎದುರಿನಲ್ಲಿ ನಿಮ್ಮವರಿಂದಲೇ ಹೊಡೆಸಿ ನಿನ್ನನ್ನು ನನ್ನ ದಾಸಯ್ಯನ್ನನಾಗಿ ಮಾಡಿಕೊಳ್ಳುತ್ತೇನೆ. ಮತ್ತು ನಿನಗೆ ಗುಂಡಿನ ದಾಸಯ್ಯನೆಂದು ನಾಮಕರಣ ಮಾಡಿ, ಸುತ್ತಲಿರುವ ಗ್ರಾಮಗಳ ದೇವತೆಗಳ ಸಮ್ಮುಖದಲ್ಲಿ ಸಾವಿರಾರು ಬಡ ಭಕ್ತರಿಗೆ ಅನ್ನದಕೋಟಿ ಸೇವೆ ಮಾಡಿಸಿ ಅನ್ನ ಹಾಕಿಸುತ್ತೇನೆ ಎಂದು ರಂಗನಾಥಸ್ವಾಮಿಯು ಆಜ್ಞಾಪಿಸಿದನೆಂದು ಸ್ಥಳೀಯರು ಹೇಳುತ್ತಾರೆ.

ಇನ್ನೊಂದು ಐತಿಹ್ಯ ಪ್ರಕಾರ ಹಿಂದೆ ಹೊರೆಕೆರೆದೇವರಪುರಕ್ಕೆ ಹತ್ತಿರವಿರುವ ಐಮಂಗಲದ ಕಲ್ಕುಂಟಮ್ಮನ ಭಕ್ತ (ಒಕ್ಕಲು) ಆಗಿದ್ದ ಧಾನ್ಯದವರ ವಂಶದ ಒಬ್ಬ ದಾಸಯ್ಯ ತಾಳ್ಯದ ಕೆರೆ ಕೋಡಿಯಲ್ಲಿ ಮತ್ತು ಮದ್ದೇರು ಗ್ರಾಮದಲ್ಲಿ ರಂಗನಾಥಸ್ವಾಮಿಯ ಆಜ್ಞೆಯಂತೆ ದೇವರ ಸೇವೆಗೆ ಹೋಗಬೇಕೆಂದು ಸ್ವಾಮಿಯ ಪ್ರೇರಣೆಯಾಯಿತು. ಅದರಂತೆಯೇ ದಾಸಯ್ಯ ಅಲ್ಲಿಗೆ ಹೋದನು. ಆದರೆ ಸೇವೆಯು ಮುಗಿದಿತ್ತು. ಗೋವಿಂದ ಎಂದಿದ್ದರು. ಹೀಗಾಗಿ ದಾಸಯ್ಯ ಉಪವಾಸವಿರಬೇಕಾದ ಸ್ಥಿತಿ ಬಂದು ದೇವರು ನನಗೆ ಊಟವಿಲ್ಲದೆ ಸೊರಗಿಸಿದನೆಲ್ಲಾ; ರಂಗಾ ನಿನ್ನ ನಂಬಿದ ನನಗೆ ಈ ಶಿಕ್ಷೆಯೇ? ಎಂದು ಕೋಪಗೊಂಡನು. ಊರಿಗೆ ಹಿಂತಿರುಗುವಾಗ ಮಾರ್ಗ ಮಧ್ಯದಲ್ಲಿ ಬಿದ್ದಕಲ್ಲು ರಂಗನಾಥ (ಶಯನ ರಂಗನಾಥ ಕ್ಷೇತ್ರ) ಬೆಟ್ಟದಲ್ಲಿ ಮೂರು ಕಲ್ಲು ಗುಂಡುಗಳನ್ನು ತೆಗೆದುಕೊಂಡು ಒಂದನ್ನು ಭವನಾಶಿಯಲ್ಲಿ, ಮತ್ತೊಂದನ್ನು ತಲೆಯ ಮೇಲೆ, ಮತ್ತೊಂದನ್ನು ಹೆಗಲ ಮೇಲೆ ಹೊತ್ತಕೊಂಡು, ದೇವಾ ಇವುಗಳನ್ನು ನಿನ್ನ ತಲೆಯ ಮೇಲೆ ಹಾಕಿ ನನ್ನ ಕೋಪವನ್ನು ತೀರಿಸಿಕೊಳ್ಳುತ್ತೇನೆ ಎಂದು ಬರುತ್ತಿದ್ದನು. ಈತ ಬರುವುದರೊಳಗಾಗಿ ಇತ್ತ ಅರ್ಚಕರಿಗೆ ಸ್ವಪ್ನದಲ್ಲಿ ರಂಗನಾಥಸ್ವಾಮಿಯು ದಾಸಯ್ಯ ಹಸಿವಿಂದ ಅಗ್ರಹಪೂರ್ವಕವಾಗಿ ಮೂರು ಗುಂಡುಗಳೊಂದಿಗೆ ಬರುತ್ತಿದ್ದಾನೆ. ಆತ ಇಲ್ಲಿಗೆ ಬರುವುದರೊಳಗಾಗಿ ೩ ಸೇರು ಅಕ್ಕಿ ನೈವೇದ್ಯ ಸಿದ್ಧಮಾಡು. ಗೋವಿಂದ ಎನ್ನಲು ಈ ದಾಸಯ್ಯನನ್ನೇ ಕರೆದು ಬರಮಾಡಿಕೊಳ್ಳು. ಆತ ಸಂತೋಷ ಪಟ್ಟು ಆ ಗುಂಡುಗಳನ್ನು ಕೆಳಗಿಟ್ಟು ನೈವೇದ್ಯವನ್ನು ಸೇವಿಸುತ್ತಾನೆ. ನನ್ನ ತಲೆಯ ಮೇಲೆ ಹಾಕಲು ತಂದಿದ್ದ ಗುಂಡುಗಳನ್ನು ಆತನ ಎದೆಯ ಮೇಲಿಟ್ಟು ಹೊಡೆಯಿರಿ, ಎಂದು ಸ್ವಪ್ನದಲ್ಲಿ ಅಪ್ಪಣೆ ಮಾಡಿದನು. ಅಂತೆಯೇ ದಾಸಯ್ಯ ನೈವೇದ್ಯ ಸ್ವೀಕರಿಸಿ, ಪ್ರಜ್ಞಾಹೀನನಾದನು. ಆತನ ಎದೆಯ ಮೇಲೆ ಅದೇ ಗುಂಡಿಟ್ಟು ಹೊಡೆಯಲಾಯಿತು. ಸ್ವಾಮಿಯ ತೀರ್ಥ ಪ್ರಸಾದ ಪ್ರೋಕ್ಷಿಸಲಾಗಿ ದಾಸಯ್ಯ ಎಚ್ಚರಗೊಂಡನು.

**ಕಬ್ಬಾಳು :**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕಿನ ಕಬ್ಬಾಳಮ್ಮ, ಕಬ್ಬಾಳು ಗ್ರಾಮದ ಪ್ರಮುಖ ದೇವತೆ. ಕಬ್ಬಾಳಮ್ಮನಿಗೆ ರಂಗಸ್ವಾಮಿ ಗಂಡನಾಗಬೇಕು. ಕಬ್ಬಾಳಮ್ಮ ತನ್ನ ಗಂಡ ರಂಗಸ್ವಾಮಿ ಜೊತೆ ಒಂದು ಪಂದ್ಯ ಕಟ್ಟುತ್ತಾಳೆ. ಅವನಿಗೆ ಮೂರು ಕಾಸು ಕೊಟ್ಟು ಸಂತೆಗೆ ಹೋಗಿ ಮನೆಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು, ಕೊಟ್ಟಿರುವ ಕಾಸು ಹಿಂದಕ್ಕೆ ತಂದುಕೊಡಬೇಕೆಂದು ಹೇಳುತ್ತಾಳೆ. ಇಲ್ಲದಿದ್ದರೆ ನೀನು ಪಂದ್ಯದಲ್ಲಿ ಸೋತ ಹಾಗೇ ಎಂದು ಹೇಳುತ್ತಾಳೆ. ನಂತರ ರಂಗಸ್ವಾಮಿ ಸಂತೆಗೆ ಹೋಗಿ ಯಾವ ವಸ್ತುವನ್ನು ತರದೆ ಹಿಂದಕ್ಕೆ ಬರುತ್ತಾನೆ. ತನ್ನ ಸೋಲನ್ನು ಒಪ್ಪಿಕೊಳ್ಳುತ್ತಾನೆ. ಆಗ ಕಬ್ಬಾಳಮ್ಮ ಸಂತೆಯಲ್ಲಿ ಮಾಯದಿಂದ ಬಿರುಗಾಳಿ ಎಬ್ಬಿಸಿ, ಕಣ್ಣಿಗೆ ಧೂಳು

ತುಂಬಿ ಮನೆಗೆ ಬೇಕಾದ ಸಾಮಾನುಗಳನ್ನು ತಂದು ತೋರಿಸುತ್ತಾಳೆ. ಹೀಗಾಗಿ ಪಂದ್ಯದಲ್ಲಿ ರಂಗಸ್ವಾಮಿ ಸೋತದರಿಂದ ಕಬ್ಬಾಳಮ್ಮ ಗಂಡನ ತಲೆ ಮೇಲೆ ಮೂರು ಹಿಡಿ ಕೆಂಡ ಹೊಯ್ಯುತ್ತಾಳೆ. ಈ ವಿಷಯ ತಿಳಿದ ರಂಗಸ್ವಾಮಿ ಶ್ರೀಗಂಧ ಸೌಧೆಯ ಅಗ್ನಿಗೆ ಆಹುತಿಯಾದನಂತೆ. ಅಂದಿನಿಂತ ಈತನು ದೇವಾಲಯದ ಬಲಭಾಗದಲ್ಲಿರುವ ರಸ್ತೆಯಲ್ಲಿ ಶಿಲೆಯಾಗಿ ನಿಂತಿದ್ದಾನೆ.

**ಭೂತ ಸಂಬಂಧಿ ಐತಿಹ್ಯ :**

ಬಾಬಾಬುಡನಗಿರಿಯ ಪಕ್ಕದಲ್ಲಿ ಇರುವ ಗಾಳೀಕೆರೆಯಿಂದ ಎರಡು ಭೂತಗಳು (ರೊಟ್ಟಿಭೂತ, ದೊಡ್ಡಣೇಕೆಂಚ) ತಿರುಪತಿ ಹಳ್ಳಿಗೆ ಬಂದಾಗ, ಈ ಚಿಗ್ಗಿರಿರಂಗನೇ ತಡೆದನಂತೆ. ಆಗ ಭೂತಗಳು ಅಡಿಕೆ ಮರದ ಉದ್ದ ಬಾಡು (ಮಾಂಸ) ಹಾಕಿದರೆ ಇಲ್ಲಿ ಇರುತ್ತೇವೆ ಎಂದವು. ಆಗ ಬುದ್ಧಿವಂತನಾದ ರಂಗ ಅಡಿಕೆಮರ ಕಡಿದು, ಭೂಮಿಯ ಮೇಲೆ ಮಲಗಿಸಿ ಉದ್ದಕ್ಕೂ ಮಾಂಸವನ್ನು ಹಾಕಿದನು. ನಾವು ಹೇಳಿದ್ದು ಈ ರೀತಿಯಲ್ಲಿ ಅಲ್ಲ ಎಂದು ಭೂತಗಳು ಓಡಿ ಹೋಗಲು ಪ್ರಾರಂಭಿಸಿದವು. ಅವುಗಳ ಕಾಲಿಗೆ (ಸಂಕಲೆ) ಸರಪಳಿ ಕಟ್ಟಿ ಹೋಗದ ರೀತಿ ರಂಗನಾಥನು ತಡೆದು ಇಲ್ಲಿಯೇ ನಿಲ್ಲಿಸಿದ ಎಂದು ಪ್ರತೀತಿ ಇದೆ. ಈ ಐತಿಹ್ಯವು ಹಾಸನ ಜಿಲ್ಲೆಯ ಹಾಸನ ತಾಲೂಕಿನ ಚಿಗ್ಗಿರಿರಂಗನ ದೇವಾಲಯಕ್ಕೆ ಸಂಬಂಧಿಸಿದುದಾಗಿದೆ. ಆದರೆ ಅನೇಕ ರಂಗನಾಥ ದೇವಾಲಯದ ಭೂತಪ್ಪಗಳಿಗೆ ಸಂಬಂಧಿಸಿದಂತೆ ಐತಿಹ್ಯವು ಇದೇ ಮಾದರಿಯಲ್ಲಿಯೇ ಕಂಡುಬರುತ್ತದೆ.

**ದೈವ-ವ್ಯಕ್ತಿ ಸಂಬಂಧಿ ಐತಿಹ್ಯ :**

ಪ್ರಸ್ತುತ ರಂಗನಾಥ ಸಂಪ್ರದಾಯದಲ್ಲಿ ದಾಸಯ್ಯನ ಪಾತ್ರ ಮಹತ್ವದಾಗಿದ್ದು. ಇತನನ್ನು ದೈವದ ಪ್ರತಿರೂಪವೆಂದೆ ಭಾವಿಸಲಾಗಿದೆ. ಅನೇಕ ಐತಿಹ್ಯಗಳಲ್ಲಿ ಚಕ್ರ, ಶಂಖ, ಗದೆ, ಪದ್ಮಧಾರಿಯಾಗಿ ಕೈಯಲ್ಲಿ ಜಾಗಟೆ, ಹೆಗಲಲ್ಲಿ ಭವನಾಸಿ ಹೊತ್ತ, ಹಣೆಯಲ್ಲಿ ನಾಮ ಧರಿಸಿದ, ದಾಸಯ್ಯನ ವೇಷದಲ್ಲಿ ಸ್ವಾಮಿಯು ನೆಲೆಗೊಳ್ಳುವವನಾಗಿದ್ದಾನೆ ಮತ್ತು ದರ್ಶನ ಕೊಡುವವನಾಗಿದ್ದಾನೆ.

ಒಟ್ಟಾರೆ ಕರ್ನಾಟಕದಾದ್ಯಂತ ನೆಲೆಗೊಂಡಿರುವ ಐತಿಹ್ಯಗಳ ಅಧ್ಯಯನವನ್ನು ಗಮನಿಸಿದರೆ ಕೆಲವು ಅಂಶಗಳು ಕಂಡುಬರುತ್ತವೆ.

* ಕರ್ನಾಟಕದಲ್ಲಿ ಬಹುಮುಖ ವೈವಿಧ್ಯಗಳಲ್ಲಿ ರಂಗನಾಥನಿಗೆ ಸಂಬಂಧಿಸಿದ ಐತಿಹ್ಯಗಳು ಪ್ರಚಲಿತದಲ್ಲಿರುವುದು ತಿಳಿದುಬರುತ್ತದೆ.
* ಎಲ್ಲ ಐತಿಹ್ಯಗಳಲ್ಲಿಯೂ ಮುಖ್ಯವಾಗಿ ರಂಗನಾಥನನ್ನು ನಿರಾಕಾರದಲ್ಲಿಯೇ ಚಿತ್ರಿಸಿದ್ದು, ರಂಗನಾಥನಿಗೆ ಅಮೂರ್ತ ರೂಪವಿರುವುದನ್ನು ದೃಢಪಡಿಸುತ್ತದೆ.

* ಈ ಮೊದಲೇ ಸ್ಪಷ್ಟಪಡಿಸಿದಂತೆ ಎಲ್ಲ ಹಂತಗಳಲ್ಲಿಯೂ ನೆಲೆಗೊಂಡ ರಂಗನು ಹಂತಹಂತವಾಗಿ ಬದಲಾವಣೆಗೆ ಒಳಗಾಗುತ್ತ ಕೊನೆಗೆ ಶಿಷ್ಟ ರೂಪದಲ್ಲಿ ನೆಲೆಗೊಂಡಿರುವ ಗುರುತುಗಳನ್ನು ಸ್ಪಷ್ಟವಾಗಿ ತಿಳಿಸಿಕೊಡುತ್ತವೆ.
* ಪರಿಶಿಷ್ಟ ಸಂಪ್ರದಾಯವನ್ನು ನೆಲೆಗಳನ್ನು ಶಿಷ್ಟ ಸಂಪ್ರದಾಯದ ಶ್ರೀವೈಷ್ಣವಧರ್ಮ ಒಳಗು ಮಾಡಿಕೊಂಡು ರಾಮಾಯಣ, ಪುರಾಣ, ದೇವಲೋಕದ ಸಂಬಂಧವನ್ನು ಬೆಳೆಸುವುದು. ಜೊತೆಗೆ ಆ ನೆಲೆಯಲ್ಲಿ ಶಂಖ-ಚಕ್ರ-ನಾಮ-ಚಿಹ್ನೆಗಳನ್ನು ಗುರುತಿಸಿ ತನ್ನ ಪ್ರಭಾವದಡಿಯಲ್ಲಿ ತಂದುಕೊಳ್ಳಲು ಪ್ರಯತ್ನಿಸಿದರೂ ಈ ಐತಿಹ್ಯಗಳು ರಂಗನಾಥ ಸಂಪ್ರದಾಯದ ಮೂಲ ಸ್ವರೂಪವನ್ನು ಖಚಿತವಾಗಿ ಸ್ಪಷ್ಟಪಡಿಸುವಲ್ಲಿ ನೆಲೆಗೊಂಡಿವೆ.
* ಹರಿಹರರ ಸಮನ್ವಯತೆಯನ್ನು ಸೂಚಿಸುತ್ತದೆ.
* ಮೂಲ ರಂಗನನ್ನು ಕಾಡು, ಬೆಟ್ಟ, ಗುಡ್ಡ, ಗವಿ, ಹಸು, ಹುತ್ತ, ಪಶುಪಾಲಕ ಜನಸಮುದಾಯಗಳು ಕೊನೆಯಲ್ಲಿ ಪ್ರಬುದ್ಧ ಸ್ಥಾಪಿಸಿ ವರ್ಗಗಳು ಸುತ್ತುವರಿದಿರುವುದನ್ನು ಸೂಚಿಸುತ್ತದೆ.
* ತಳಸಮುದಾಯದ ವರ್ಗದವರಿಂದ ಹಿಡಿದು ಮೇಲುವರ್ಗದವರವರೆಗೂ ರಂಗನಾಥ ಆರಾಧನಾ ದೈವವಾಗಿ ನೆಲೆಗೊಂಡಿರುವುದು ಕಾಣುತ್ತೇವೆ.
* ವಿಜಯನಗರ ಕಾಲಾವಧಿಯಲ್ಲಿ ರಂಗನಾಥ ಸಂಪ್ರದಾಯ ಬಹುವ್ಯಾಪಕತೆ ಪಡೆದಿದ್ದು, ಸಂಚಾರಿ ಐತಿಹ್ಯಗಳಲ್ಲಿನ ವ್ಯಾಪಾರ ವರ್ಗ ವಲಸೆ ಐತಿಹ್ಯವು ಸ್ಪಷ್ಟವಾಗಿ ಹೇಳುತ್ತದೆ.
* ಶ್ರೀವೈಷ್ಣವ ಧರ್ಮ ಒಂದೇ ಕಾಲಘಟ್ಟದಲ್ಲಿ ಕಾಡಿನ ದೈವಗಳಾದ ರಂಗನನ್ನು, ತಿಮ್ಮಪ್ಪನನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಹುನ್ನಾರಗಳನ್ನು ಐತಿಹ್ಯಗಳು ಬಿಚ್ಚಿಡುತ್ತವೆ.
* ಲಿಖಿತ ದಾಖಲೆಗಳು ನೀಡದ ಚಾರಿತ್ರಿಕ ವಿಷಯಗಳನ್ನು ಐತಿಹ್ಯಗಳು ಬಿಚ್ಚಿಡುತ್ತಿರುವಲ್ಲಿ ಸಹಾಯವಾದರೂ ಪರೀಕ್ಷಿಸಬೇಕಾಗಿದೆ.

# ಅಧ್ಯಾಯ-ನಾಲ್ಕು

# ರಂಗನಾಥ ದೇವಾಲಯಗಳು

ಮಾನವ ತನ್ನ ಬದುಕಿನ ವಿವಿಧ ಆಯಾಮಗಳಲ್ಲಿ ಪ್ರಕೃತಿಯಲ್ಲಿನ ಅಗೋಚರ ಶಕ್ತಿಗೆ ದೈವೀ ಸ್ವರೂಪ ನೀಡಿದ್ದ. ಜೊತೆಗೆ ಅದು ಜೀವನದ ಒಂದು ಅವಿಭಾಜ್ಯ ಅಂಗವೆಂದು ಸ್ವೀಕರಿಸಿದ್ದನು. ತರುವಾಯ ಅದರ ರಕ್ಷಣೆಗಾಗಿ ಪ್ರತ್ಯೇಕ ಆಲಯವನ್ನು ಕಟ್ಟಲು ಆರಂಭಿಸಿದ. ಇದು ದೇವಾಲಯ ರಚನೆಗೆ ನಾಂದಿಯಾಯಿತು. ಮೊದಲಿಗೆ ಕಲ್ಲುಗುಂಡುಗಳ ವೃತ್ತವಾಗಿದ್ದವು. ಕಾಲಾನಂತರದಲ್ಲಿ ಗುಡಿಗಳು, ಅಂಕಣಗಳು, ಮಂಟಪಗಳು, ಪ್ರದಕ್ಷಿಣಾ ಪಥಗಳು, ಪುಷ್ಕರಣಿಗಳು ಮೊದಲಾಗಿ ಬೆಳೆಯಿತು. ತನಗಾಗಿ ಕಟ್ಟಿಕೊಂಡ ಮನೆ 'ಗೃಹವಾಸ್ತುಶಿಲ್ಪ' ಎನಿಸಿದರೆ, ತಾನು ನಂಬಿಕೊಂಡ ದೇವರಿಗಾಗಿ ಕಟ್ಟಿದ್ದು 'ಧಾರ್ಮಿಕ ವಾಸ್ತುಶಿಲ್ಪ' ಅಥವಾ 'ದೇವಾಲಯ ವಾಸ್ತುಶಿಲ್ಪ' ಎನಿಸಿತು. ದೇವಾಲಯ ಬರಿಯ ಕಟ್ಟಡವಲ್ಲ, ಅದೊಂದು ಸಂಕೇತ. ದೈವತ್ವದ ಕಲ್ಪನೆ. 'ದೇವಸ್ಯ ಆಲಯಂ ದೇವಾಲಯಂ' ದೇವಾಲಯವೆಂದರೆ ದೇವರ ವಾಸಸ್ಥಾನ. ದೇವಾಲಯವನ್ನು 'ಆಯತನ'-ವೆನ್ನುವುದೂ ಉಂಟು. ಆಯತನವೆಂದರೆ ದೇವತಾ ಶಕ್ತಿಯು ಆಗಮಿಸುವ ಪವಿತ್ರ ಸ್ಥಳ. ಇದು ದೇವತೆಗಳಿಗೆ ವಿಶ್ರಾಂತಿ ಸ್ಥಳವು ಹೌದು.[೧] ಜೊತೆಗೆ ಸಾಮೂಹಿಕ ಪೂಜೆ, ಪ್ರಾರ್ಥನೆಗಳನ್ನು ಸಲ್ಲಿಸಲು ಅನುಕೂಲವಿರುವ ಒಂದು ತಾಣ.

ಸಾಮಾನ್ಯವಾಗಿ ದೇವಾಲಯವನ್ನು 'ಪ್ರಾಸಾದ' ಎಂದು ಹೇಳುವುದು ರೂಢಿ. ಅಲ್ಲದೆ ವಿಮಾನ, ಭವನ, ಹರ್ಮ್ಯ, ಸೌಧ, ಆಲಯ, ನಿಕೇತನ, ದೇವಗೃಹ, ದೇವಾಗಾರ, ದೇಗುಲ, ಮಂದಿರ ಇತ್ಯಾದಿಯಾಗಿ ಕರೆಯಲಾಗಿದೆ.[೨] ದೇವಾಲಯದ ನಿರ್ಮಾಣ ಕುರಿತು ಮಯಮತ, ಮಾನಸಾರ, ಕಾಮಿಕಾಗಮ ಇನ್ನೂ ಹಲವು ವಾಸ್ತು ಗ್ರಂಥಗಳಲ್ಲಿ ವಿಸ್ತಾರವಾದ ವರ್ಣನೆ ಇದೆ. ಮುಖ್ಯವಾಗಿ ದೇವಾಲಯವನ್ನು ಮಾನವ ದೇಹದೊಂದಿಗೆ ಸಮೀಕರಿಸಲಾಗಿರುವುದು ಕಂಡುಬರುತ್ತದೆ.

ಹೀಗಾಗಿ ದೇವಾಲಯ ಕಟ್ಟಡದ ಹಲವಾರು ಭಾಗಗಳಿಗೆ ದೇಹದ ವಿವಿಧ ಅಂಗಗಳ ಪಾದ, ಚರಣ, ಅಂಘ್ರಿ, ಜಂಘ, ಕಟ, ಕುಕ್ಷಿ, ಗ್ರೀವ, ಕಂಠ, ಶಿಖರ, ಶಿರ, ಮಸ್ತಕ, ಮುಖ, ವಕ್ತ್ರ, ನಾಸಿಕ ಮುಂತಾದ ಹೆಸರುಗಳನ್ನು ಕೊಡಲಾಗಿದೆ.[೩] ಪ್ರಾಚೀನ ಕಾಲದಿಂದಲೂ ದೇವಾಲಯಗಳಿಗೆ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಸಂಸ್ಕೃತಿಯ ಚರಿತ್ರೆಯಲ್ಲಿ ದೇವಾಲಯದ ಪಾತ್ರ ಅತ್ಯಂತ ಪ್ರಮುಖವಾದುದು. ಈ ನಿಟ್ಟಿನಲ್ಲಿ ಕರ್ನಾಟಕದ ರಂಗನಾಥ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿರುವ ರಂಗನಾಥ ದೇವಾಲಯಗಳು ಸಾಕ್ಷಿಯಾಗಿವೆ. ಮುಖ್ಯವಾಗಿ ಕರ್ನಾಟಕದಲ್ಲಿನ ೨೨ ಜಿಲ್ಲೆಗಳಲ್ಲಿ ೨೭೪ ರಂಗನಾಥ ದೇವಾಲಯಗಳನ್ನು ಗುರುತಿಸಿ ಕ್ಷೇತ್ರಕಾರ್ಯ ಕೈಗೊಂಡು ವೀಕ್ಷಿಸಲಾಗಿದೆ. ಜೊತೆಗೆ ಅಧ್ಯಯನಕ್ಕೆ ಸಂಬಂಧ ಪಟ್ಟಂತೆ ಸಂಪೂರ್ಣ ಮಾಹಿತಿಯನ್ನು ಸಂಗ್ರಹಿಸಿಕೊಂಡು ದಾಖಲಿಸಿಕೊಳ್ಳಲಾಗಿದೆ ಮತ್ತು ವಿಶ್ಲೇಷಿಸಲಾಗಿದೆ.

ಈ ಮೊದಲೇ ತಿಳಿಸಿದಂತೆ ರಂಗನಾಥ ಸಂಪ್ರದಾಯವು ಅನಾದಿ ಕಾಲದಿಂದಲೂ ಶಿಷ್ಟ ಮತ್ತು ಪರಿಶಿಷ್ಟ ನೆಲೆಯಲ್ಲಿ ನೆಲೆಗೊಂಡಿರುವ ಸಂಪ್ರದಾಯ. ಮುಖ್ಯವಾಗಿ ರಂಗನಾಥನ ಆರಾಧನಾ ನೆಲೆಗಳು ಪ್ರಾಚೀನವಾಗಿದ್ದು, ಅವುಗಳು ಹಂತ ಹಂತವಾಗಿ ಬೆಳೆದು ಬರುವ ಪ್ರಕ್ರಿಯೆಗೆ ದೇವಾಲಯಗಳೇ ಸಾಕ್ಷಿಯಾಗಿವೆ. ಕರ್ನಾಟಕದಲ್ಲಿ ನೆಲೆಗೊಂಡಿರುವ ದೇವಾಲಯಗಳು ಆಹಾರ ಸಂಗ್ರಹಣೆ ಮತ್ತು ಬೇಟೆ, ಪಶುಪಾಲನೆ, ಕೃಷಿ ಮತ್ತು ಶಿಷ್ಟ ಸಂಪ್ರದಾಯ ಈ ಐದು ಹಂತಗಳ ರಂಗನನ್ನು, ರಂಗನಾಥನ ಸಂಪ್ರದಾಯವನ್ನು ತಿಳಿಸಿಕೊಡುವಲ್ಲಿ ಜೀವಂತ ನಿದರ್ಶನಗಳಾಗಿವೆ. ಹೀಗಾಗಿ ಪ್ರಾರಂಭದ ನಾಲ್ಕು ಘಟ್ಟದ ರಂಗನಾಥ ದೇವಾಲಯಗಳು ಸರಳ ರಚನೆಗಳನ್ನು ಹೊಂದಿವೆ. ಇವುಗಳಿಗೆ ಯಾವುದೇ ವಾಸ್ತು ಲಕ್ಷಣಗಳ ಅವಶ್ಯಕತೆಯೇ ಇರಲಿಲ್ಲ. ಯಾವಾಗ ಈ ಸಂಪ್ರದಾಯವು ಶಿಷ್ಟದ ಪರಿಮಿತಿಗೆ ಒಳಗುಗೊಂಡಿತೋ ಆಗ ದೇವಾಲಯಗಳನ್ನು ನಿರ್ಮಿಸಿಕೊಂಡಿತು. ಜೊತೆಗೆ ತನ್ನ ಮೂಲ ಸಂಪ್ರದಾಯದ ಲಕ್ಷಣಗಳನ್ನು ಉಳಿಸಿಕೊಂಡು, ಹೊಸದನ್ನು ಸ್ವೀಕರಿಸಿ ನೆಲೆಗೊಂಡಿತು. ಹೀಗಾಗಿ ದೇವಾಲಯಗಳಿಗೆ ಶ್ರೀಮಂತವಾದ ವಾಸ್ತುಲಕ್ಷಣಗಳು ಕಂಡುಬರುವುದು ವಿರಳ. ಮುಖ್ಯವಾಗಿ ವಿಜಯನಗರ ಮತ್ತು ಪಾಳೆಯಗಾರರ ಕಾಲದಲ್ಲಿ ಶಿಷ್ಟ ಸಂಪ್ರದಾಯದಡಿಯಲ್ಲಿ ರಂಗನಾಥನು ಗುರುತಿಸಿಕೊಂಡು, ಈ ಸಂಪ್ರದಾಯವು ವ್ಯಾಪಕವಾಗಿ ಬೆಳೆದು ಬರಲು ಕಾರಣವಾಯಿತು. ಇದರಿಂದ ಆತನು ದೇವಾಲಯಗಳನ್ನು ನಿರ್ಮಿಸಿಕೊಳ್ಳಲು ಪ್ರಾರಂಭಿಸಿದನು. ಹೀಗೆ ರಂಗನಾಥನಿಗೆ ಯಥೇಚ್ಛವಾಗಿ ದೇವಾಲಯಗಳನ್ನು ನಿರ್ಮಿಸಿರುವುದು ವಿಜಯನಗರ ಮತ್ತು ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ. ಜೊತೆಗೆ ದೇವಾಲಯಗಳು ಆಳರಸರಿಂದ ಯಥೇಚ್ಛವಾಗಿ ದಾನದತ್ತಿಗಳನ್ನು ಪಡೆಯದೆ ಇರುವುದು ಗಮನಾರ್ಹ.

ಪ್ರಸ್ತುತ ಸರಳ ವಾಸ್ತುರಚನೆಯನ್ನು ಒಳಗೊಂಡ ರಂಗನಾಥ ದೇವಾಲಯಗಳು ಐದು ಹಂತಗಳ ಸೂಚನೆಯನ್ನು ನೀಡುತ್ತವೆ. ಸೂಕ್ಷ್ಮವಾಗಿ ಗಮನಿಸಿ ಅಧ್ಯಯನ ಕೈಕೊಂಡಾಗ ನಿರಾಕಾರವಾದ ಶಿಲ್ಪಗಳನ್ನು ಒಳಗೊಂಡಿರುವ ೧೨೨ ದೇವಾಲಯಗಳು, ಸ್ಥಾನಕರಂಗನಾಥ ಮೂರ್ತಿಶಿಲ್ಪಗಳನ್ನು ಒಳಗೊಂಡಿರುವ (ಶಂಖ, ಚಕ್ರ, ಬಿಲ್ಲು, ಬಾಣ ಲಕ್ಷಣಗಳು) ೨೦ ದೇವಾಲಯಗಳು, ಸ್ಥಾನಕ ರಂಗನಾಥ ಮೂರ್ತಿಶಿಲ್ಪಗಳನ್ನು ಒಳಗೊಂಡಿರುವ (ಶಂಖ, ಚಕ್ರ, ಗದೆ, ಪದ್ಮ, ಶ್ರೀದೇವಿ, ಭೂದೇವಿ, ಅಭಯ, ವರದ ಮುದ್ರೆ ಲಕ್ಷಣಗಳು) ೧೦೨ ದೇವಾಲಯಗಳು, ಶಯನ ಮೂರ್ತಿಶಿಲ್ಪಗಳು ಹೊಂದಿರುವ ೩೦ ದೇವಾಲಯಗಳು ಒಟ್ಟು ೨೭೪ ದೇವಾಲಯಗಳು ಕಂಡುಬರುತ್ತವೆ. ಈ ಎಲ್ಲ ದೇವಾಲಯಗಳು ರಂಗನಾಥ ಸಂಪ್ರದಾಯವನ್ನು ಗುರುತಿಸುವಲ್ಲಿ ಸಹಾಯಕವಾಗಿದ್ದು, ಅವು ಹೊಂದಿರುವ ಲಕ್ಷಣಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಕೆಳಕಂಡಂತೆ ಚರ್ಚಿಸಲಾಗಿದೆ.

**ವಾಸ್ತು:**

ಮುಖ್ಯವಾಗಿ ಕರ್ನಾಟಕದಲ್ಲಿ ಕಂಡುಬರುವ ರಂಗನಾಥ ದೇವಾಲಯಗಳು ಬೆಟ್ಟ, ಗುಡ್ಡ, ಗವಿ, ಕಲ್ಲಾಸರೆ, ನದಿ, ಹಳ್ಳ, ಕೊಳ್ಳ ದುರ್ಗಮವಾದ ಪರಿಸರದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಹೀಗಾಗಿ ದೇವಾಲಯಗಳ ನಿರ್ಮಾಣದಲ್ಲಿ ಸ್ಥಳೀಯವಾಗಿ ದೊರೆಯುವ ಶಿಲೆಯನ್ನು ಉಪಯೋಗಿಸಿರುವುದು ಕಂಡುಬರುತ್ತದೆ. ವಿಶೇಷವಾಗಿ ಹೆಚ್ಚಿನ ದೇವಾಲಯಗಳು ಕಣಶಿಲೆಯಲ್ಲಿ(ಗ್ರಾನೈಟ್) ರಚನೆಗೊಂಡಿವೆ. ದೇವಾಲಯಗಳು ಹೆಚ್ಚು ಶ್ರೀಮಂತವಾದ ವಾಸ್ತು ಲಕ್ಷಣಗಳನ್ನು ಒಳಗೊಂಡು ರಚನೆ ಹೊಂದಿಲ್ಲದಿದ್ದರು ಅಧಿಷ್ಠಾನ, ಭಿತ್ತಿ, ಕಂಬಗಳು, ಬಾಗಿಲುಗಳು (ದ್ವಾರಬಂಧ) ಮುಚ್ಚಿಗೆ(ಛತ್ತು), ಪ್ರಾಕಾರ ಮಂಟಪಗಳು, ದೀಪಸ್ತಂಭ, ಗರುಡಸ್ತಂಭ, ಉಯ್ಯಾಲೆಸ್ತಂಭ, ಬಲಿಪೀಠ ಭಾಗಗಳನ್ನು ಹೊಂದಿವೆ. ಇವುಗಳನ್ನು ನಿರ್ಮಿಸುವಲ್ಲಿ ಕಣಶಿಲೆಯನ್ನು ಬಳಸಲಾಗಿದೆ. ಸಾಮಾನ್ಯವಾಗಿ ದೇವಾಲಯಗಳ ಶಿಖರ, ಮುಖಮಂಟಪ ಹಾಗೂ ಸಭಾಮಂಟಪದ ಕಪೋತದಲ್ಲಿ ನಿರ್ಮಿಸಲಾಗಿರುವ ದೇವಕೋಷ್ಠಕಗಳು, ಅವುಗಳಲ್ಲಿರುವ ಶಿಲ್ಪಗಳು, ಕೂಟ, ಶಾಲ, ಹಾರಗಳು, ಕಂಗೂರಾಕೃತಿಗಳು ಹಾಗೂ ದ್ವಾರ ಗೋಪುರುಗಳನ್ನು ಇಟ್ಟಿಗೆ, ಸಣ್ಣ-ಸಣ್ಣ ಕಲ್ಲಿನ ತುಂಡುಗಳು ಮತ್ತು ಗಾರೆಯಿಂದ ಇತ್ತೀಚಿಗೆ ಸಿಮೆಂಟನಿಂದ ನಿರ್ಮಿಸಲಾಗಿದೆ.

**ತಲವಿನ್ಯಾಸ :**

ದೇವಾಲಯಗಳು ಗರ್ಭಗೃಹ, ಅಂತರಾಳ, ಸಭಾಮಂಟಪ, ಮುಖಮಂಟಪ, ಅದಕ್ಕೆ ಪ್ರಾಕಾರ, ಪ್ರಾಕಾರ ಮಂಟಪ, ಗೋಪುರಗಳು, ಮುಂಭಾಗದಲ್ಲಿ ಗರುಡಸ್ತಂಭ, ಬಲಿಪೀಠ, ಧ್ವಜಸ್ತಂಭ, ದೀಪಸ್ತಂಭ ಹಾಗೂ ಉಯ್ಯಾಲೆಸ್ತಂಭಗಳನ್ನು ಒಳಗೊಂಡು ತಲವಿನ್ಯಾಸದಲ್ಲಿ

ವಿಸ್ತೃತವೆನಿಸುತ್ತವೆ. ಜೊತೆಗೆ ದೇವಾಲಯಗಳು ಮಧ್ಯಮ ಹಾಗೂ ಚಿಕ್ಕ ಪ್ರಮಾಣದ ತಲವಿನ್ಯಾಸಗಳನ್ನು ಹೊಂದಿರುವುದು ಕಂಡುಬಂದಿವೆ. ಅಷ್ಟೇ ಅಲ್ಲದೆ ಕೆಲವು ದೇವಾಲಯಗಳು ಯಾವ ಲಕ್ಷಣಗಳನ್ನು ಹೊಂದದೆ ಬಯಲು ಪರಿಸರದಲ್ಲಿ ನಿರ್ಮಾಣಗೊಂಡಿವೆ.

**ಅಧಿಷ್ಠಾನ :**

ಉಪಪೀಠ ಅಧಿಷ್ಠಾನದ ಕೆಳರಚನೆಯಾಗಿದ್ದು, ಷಡ್ವರ್ಗಗಳ ಎಣಿಕೆಯಲ್ಲಿ ಸ್ಥಾನವಿಲ್ಲ. ಆದ್ದರಿಂದ ಇದರ ರಚನೆ ಐಚ್ಛಿಕ, ಆದರೆ ಪದ್ಮ ಸಂಹಿತೆಯು ಎಲ್ಲ ದೇವಾಲಯಗಳಲ್ಲಿ ಉಪಪೀಠ ಇರಬೇಕು ಎಂದು ನಿರ್ಭಂದಿಸುತ್ತದೆ.[೪] ಇದರ ರಚನೆಯು ದೇವಾಲಯಗಳಿಗೆ ಒಂದು ರೀತಿಯ ರಕ್ಷಣೆ, ಸೌಂದರ್ಯ ಹಾಗೂ ಔನ್ನತ್ಯದ ಘನತೆಯನ್ನು ತಂದುಕೊಡುತ್ತದೆ. ಉಪಪೀಠದ ನಂತರ ದೇವಾಲಯದ ಆದ್ಯಂಗವೆನಿಸಿದ ಅಧಿಷ್ಠಾನ ರಚನೆ ಇರುತ್ತದೆ. ದೇವಾಲಯವನ್ನು ನೆಲದ ಮಟ್ಟದಿಂದ ಸ್ವಲ್ಪ ಎತ್ತರಕ್ಕೆ ಕಟ್ಟುತ್ತಾರೆ. ದೇವಾಲಯಕ್ಕೆ ಆಧಾರವಾಗಿ ನಿರ್ಮಿಸಲಾಗಿರುವ ಗೋಡೆಯ ಕೆಳಭಾಗದಲ್ಲಿರುವ ಭಾಗ, ಷಡ್ವರ್ಗ ಕ್ರಮದಲ್ಲಿ ಇದು ಮೊದಲನೆಯ ಭಾಗವಾಗಿದೆ. ಸಾಧಾರಣವಾಗಿ ಕಟ್ಟಡದಲ್ಲಿ ಅಧಿಷ್ಠಾನ ಮತ್ತು ಉಪಪೀಠವು ಒಂದೇ ಆಗಿರುತ್ತದೆ. ಕಟ್ಟಡದ ಎತ್ತರ ಹೆಚ್ಚಿಸಲು ಉಪಪೀಠ ಹಾಗೂ ಅಧಿಷ್ಠಾನ ಎರಡನ್ನೂ ರೂಪಿಸಲಾಗಿರುತ್ತದೆ. ಅಧಿಷ್ಠಾನವು ದೇವಾಲಯದ ಭಾರವನ್ನು ಹೊರುವ ಶಕ್ತಿಯನ್ನು ಪಡೆದಿರಬೇಕಾದುದರಿಂದ ಭದ್ರವಾಗಿ ರಚಿಸಲಾಗಿರುತ್ತದೆ. ಅಧಿಷ್ಠಾನದಲ್ಲಿ ಉಪಾನ, ಜಗತೀ, ಖುರ-ಕುಂಭ, ಕುಮುದ, ಪದ್ಮ, ಕಂಪ, ಕಪೋತ, ಪಟ್ಟಿಕಾ, ಪ್ರತಿ ಇತ್ಯಾದಿ ಅಂಗಗಳಿರುತ್ತವೆ. ಮುಖ್ಯವಾಗಿ ಕರ್ನಾಟಕದಲ್ಲಿ ಕಂಡುಬರುವ ರಂಗನಾಥ ದೇವಾಲಯಗಳ ಅಧಿಷ್ಠಾನದಲ್ಲಿ ಉಪಪೀಠ, ಪಾದಬಂಧ, ಮಂಚಬಂಧ ಅಧಿಷ್ಠಾನಗಳಿರುವುದು ಕಂಡುಬರುತ್ತವೆ. ಬಹುಪಾಲು ಉಪಪೀಠವನ್ನು ಹೊಂದಿ ನಿರ್ಮಿಸಿರುವ ದೇವಾಲಯಗಳು ಕಂಡುಬರುತ್ತವೆ. ಉಪಪೀಠದಿಂದಲೇ ಭಿತ್ತಿಗಳ ರಚನೆಯನ್ನು ಕಾಣುತ್ತವೆ. ನಂತರದಲ್ಲಿ ಪ್ರತಿಭಂಧ (ಉಪಾನ, ಜಗತಿ, ತ್ರಿಪಟ್ಟ ಕುಮುದ, ಗಳ ಮತ್ತು ಮಹಾಪಟ್ಟಿ) ಮತ್ತು ಮಂಚಬಂಧ (ಉಪಾನ, ಜಗತಿ, ಕಪೋತ) ಮುಂತಾದ ಅಧಿಷ್ಠಾನಗಳು ಕಂಡುಬಂದರು ಅವು ಕೂಡ ಹೆಚ್ಚಾಗಿ ಸರಳವಾಗಿವೆ. ಪಾದಬಂಧ ಅಧಿಷ್ಠಾನಕ್ಕೆ ಉದಾಹರಣೆಗೆ ಶಿವನಸಮುದ್ರ, ಚಿತ್ರದುರ್ಗ ಜಿಲ್ಲೆಯ ಹಿರಿಯೂರ ತಾಲೂಕಿನ ಅಂಬಲಗೆರೆ ದೇವಾಲಯ, ನಂದಿಹಳ್ಳಿ, ಬಬ್ಬೂರು ಮತ್ತು ಹೊಳಲಕೆರೆ ತಾಲೂಕಿನ ಮಾಳೇನಹಳ್ಳಿ, ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಹಳೇದೇವರಹೊನ್ನಾಳಿ ಮುಂತಾದ ರಂಗನಾಥ ದೇವಾಲಯಗಳು ಸಾಕ್ಷಿಯಾಗಿವೆ. ಮಂಚಬಂಧ ಅಧಿಷ್ಠಾನಕ್ಕೆ ಭದ್ರಾವತಿ ತಾಲೂಕಿನ ಸ್ಯಾದರಕಲ್ಲಹಳ್ಳಿ, ಚಿತ್ರದುರ್ಗ ಜಿಲ್ಲೆಯ ಚಳ್ಳಕೇರಿ ತಾಲೂಕಿನ ಬೆಳಗೆರೆ, ಹೊಸದುರ್ಗ ತಾಲೂಕಿನ ಎಸ್. ನೆರಲೇಕೆರೆ, ಹೊಳಲಕೆರೆ ತಾಲೂಕಿನ ಗಿಲಕೇನಹಳ್ಳಿ,

ದಾವಣಗೆರೆ ಜಿಲ್ಲೆ ದಾವಣಗೆರೆ ತಾಲೂಕಿನ ಹಂಪನೂರು, ಮಧುಗಿರಿ ತಾಲೂಕಿನ ಹಂದರಹಾಳು, ಕಡೂರ ತಾಲೂಕಿನ ದೇವರ ಹೊಸಳ್ಳಿ ಮುಂತಾದ ರಂಗನಾಥ ದೇವಾಲಯಗಳನ್ನು ಹೆಸರಿಸಬಹುದು. ಈ ರೀತಿಯ ಅಧಿಷ್ಠಾನ ವಿಜಯನಗರ ಮತ್ತು ವಿಜಯನಗರೋತ್ತರ ಕಾಲಗಳಲ್ಲಿ ಗಮನಾರ್ಹವಾಗಿ ದೊರಕುತ್ತವೆ. ಚಿಕ್ಕಬಳ್ಳಾಪುರ ಜಿಲ್ಲೆಯ ರಂಗಸ್ಥಳದ ರಂಗನಾಥ ದೇವಾಲಯ ಅಧಿಷ್ಠಾನವು ಪಾದಬಂಧವಾಗಿದ್ದು, ಅದರ ಮೇಲೆ ತಮಿಳು ವಾಸ್ತುಶೈಲಿಯ ಪ್ರಭಾವದಿಂದಾಗಿ ಅಧಿಷ್ಠಾನದ ಹೊರ ಅಂಚು ಅನೇಕ ಹಿಂಬಣೆ ಮುಂಬಣೆಗಳನ್ನು ಹೊಂದಿದೆ. ಪ್ರತಿಯೊಂದು ದಿಕ್ಕಿನ ಮಧ್ಯ ಭಾಗದಲ್ಲಿ ಒಂದೊಂದು ಸುಭದ್ರಗಳು ಇವೆ. ಹಾಗೆಯೇ ಮೂಲೆಗಳಲ್ಲಿ ಕರ್ಣಗಳು ಇವೆ. ತಳಪಾಯದ ಉದ್ದಮುಖದಲ್ಲಿ ಒಂದೊಂದು ಪ್ರತಿಭದ್ರವೂ, ಪ್ರತಿಕರ್ಣವೂ ಇದೆ. ಹಾಗೆಯೇ ಪೂರ್ವ ಮತ್ತು ಪಶ್ಚಿಮ ಮುಖಗಳು ಚಿಕ್ಕದಾಗಿರುವುದರಿಂದ ಕೇವಲ ಒಂದೊಂದು ಪ್ರತಿಭದ್ರಗಳು ಮಾತ್ರ ಇವೆ. ತಳಪಾಯದ ಹಿನ್‌ಸ್‌ರಿತಗಳು ಬಹಳ ಕಿರಿದಾಗಿದ್ದು ಇದರಿಂದಾಗಿ ಮುನ್‌ಸರಿತಗಳು ಪ್ರಧಾನವಾಗಿ ಕಾಣಬರುತ್ತವೆ.

**ಭಿತ್ತಿ :**

ಅಧಿಷ್ಠಾನದ ನಂತರ ಭಾಗವೇ ಭಿತ್ತಿ. ಇದು ಷಡ್ವರ್ಗ ಕ್ರಮದಲ್ಲಿ ಎರಡನೆಯದಾಗಿದೆ. ಅಧಿಷ್ಠಾನ ಮತ್ತು ಪ್ರಸ್ತರದ ನಡುವೆ ಇರುವುದು. ಮೂಲದೇವರ ರಕ್ಷಣೆಗಾಗಿ ನಿರ್ಮಿಸಲ್ಪಟ್ಟಿದ್ದು, ಇದರ ವಿನ್ಯಾಸವು ಅಧಿಷ್ಠಾನ ವಿನ್ಯಾಸವನ್ನು ಅನುಸರಿಸುತ್ತದೆ. ಆದ್ದರಿಂದ ಅಧಿಷ್ಠಾನಕ್ಕನುಸಾರವಾಗಿ ಆಯತ–ಚೌಕ–ವೃತ್ತ–ಗಜಪೃಷ್ಠಾಕಾರವನ್ನು ಹೊಂದಿರುವುದು ಕಂಡುಬರುತ್ತದೆ.[೫] ರಂಗನಾಥ ದೇವಾಲಯಗಳ ಭಿತ್ತಿಗಳು ಸರಳವಾದ ಕಲ್ಲು ಚಪ್ಪಡಿಗಳಿಂದಲೇ ರಚಿಸಿರುವುದು ಹೆಚ್ಚಾಗಿ ಕಂಡುಬರುತ್ತದೆ. ಕೆಲವು ದೇವಾಲಯಗಳಲ್ಲಿ ಕುಡ್ಯಸ್ತಂಭಗಳನ್ನು ಹೊಂದಿ ಭಿತ್ತಿ ರಚಿಸಲಾಗಿದೆ. ಉದಾಹರಣೆಗೆ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲೂಕಿನ ಯರೇಹಳ್ಳಿ, ಹಳೆದೇವರಹೊನ್ನಾಳಿ ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತವೆ. ಕೆಲವೆ ದೇವಾಲಯಗಳಲ್ಲಿ ಪಂಜರಕೋಷ್ಠ, ಅರೆಗಂಭ, ಕೋಷ್ಠಗಳು ಮೊದಲಾದ ಭಾಗಗಳನ್ನು ಒಳಗೊಂಡಿದೆ. ಉದಾಹರಣೆಗೆ ಶಿವನಸಮುದ್ರ, ಶ್ರೀರಂಗಪಟ್ಟಣ ರಂಗನಾಥಸ್ವಾಮಿ ದೇವಾಲಯಗಳಾಗಿವೆ. ಆದರೆ ಹೆಚ್ಚಿನ ದೇವಾಲಯಗಳು ತೀರಾ ಸರಳವಾದ ಭಿತ್ತಿಗಳನ್ನು ಹೊಂದಿದು, ಅಲ್ಲಲ್ಲಿ ಕೆಲವು ಉಬ್ಬುಶಿಲ್ಪಗಳು ಕಂಡುಬರುತ್ತವೆ.

**ಪ್ರಸ್ತರ :**

ಷಡ್ವರ್ಗ ರಚನೆಯ ಮೂರನೇ ಅಂಗ. ಪ್ರಸ್ತರವನ್ನು ಕಪೋತ ಪೂರ್ವಭಾಗ, ಕಪೋತ, ಕಪೋತೊತ್ತರ ಭಾಗ ಎಂದು ಮೂರು ಹಂತವಾಗಿ ವಿಂಗಡಿಸಿಕೊಳ್ಳಬಹುದು. ಪ್ರಸ್ತರದಲ್ಲಿ ಉತ್ತರ, ವಾಜನ, ವಲಭಿ, ಕಪೋತ, ಆಲಿಂಗ, ಅಂತರಿಕ, ಪ್ರತೀ ಮತ್ತು ವಾಜನ ಈ ಅಂಗಗಳು

ಕ್ರಮವಾಗಿ ಇರುವವು.[೬] ಕಪೋತವು ಪ್ರಸ್ತರದಲ್ಲಿ ಮುಖ್ಯವಾದ ಅಂಗ. ರಂಗನಾಥ ದೇವಾಲಯಗಳಲ್ಲಿ ಪ್ರಸ್ತರ ಭಾಗವು ವಿವಿಧ ರೀತಿಯಲ್ಲಿ ನಿರ್ಮಾಣವಾಗಿರುವುದು ಕಂಡುಬರುತ್ತವೆ. ಇಲ್ಲಿನ ಪ್ರಸ್ತರಗಳಲ್ಲಿ ಇಳಿಜಾರಾದ ಕಲ್ಲಿನ ಹಲಗೆಗಳು (ಮುಂಜೂರು) ಕಂಗೂರಗಳ, ಶಾಲ, ಕೂಟ, ಹಾರ ರಚನೆಯನ್ನು ಮುಖಮಂಟಪವು ಹೊಂದಿದೆ. ನೀರ್ಥಡಿಯ ರಂಗನಾಥ ದೇವಾಲಯದಲ್ಲಿ ಪ್ರಧಾನ ಮುಖಮಂಟಪದಲ್ಲಿ ಅರೆವೃತ್ತಾರಕಾರದಲ್ಲಿ ಖಂಡರಿಸಿದ ಬಿಡಿ ಬಿಡಿ ಹಲಗೆಗಳನ್ನು ಸೇರಿಸಿ ಮುಂಜೂರನ್ನು ನಿರ್ಮಿಸಿದ್ದು ಕಂಡುಬರುತ್ತದೆ. ಕೆಲವು ಸಲ ಈ ಮುಂಜೂರಿನ ಮೇಲೆ ಉದ್ದಕ್ಕೂ ಚೈತ್ಯಾಕೃತಿಯುಳುಳ್ಳ ಅಲಂಕರಣೆಗಳಿರುತ್ತವೆ. ಉದಾಹರಣೆಗೆ ಹೊಸದುರ್ಗ ತಾಲೂಕಿನ ಜೋಡಿ ರಂಗಾಪುರದ ರಂಗನಾಥಸ್ವಾಮಿ ದೇವಾಲಯದಲ್ಲಿ ಕಾಣಬಹುದು. ಮುಖಮಂಪಟ ಮತ್ತು ಸಭಾಮಂಟಪಗಳ ಪ್ರಸ್ತರದಲ್ಲಿ ಸ್ವಲ್ಪ ಎತ್ತರವಾದ ಇಟ್ಟಿಗೆ, ಗಾರೆಯ ಗೋಡೆಯನ್ನು ಕಟ್ಟಲಾಗಿದ್ದು, ಅದರ ಮೇಲೆ ಸಾಲಾಗಿ ಕಂಗೂರಾಕೃತಿಗಳನ್ನು ಬಿಡಿಯಾಗಿ ನಿರ್ಮಿಸಲಾಗಿದೆ. ಉದಾಹರಣೆಗೆ ಹಿರಿಯೂರು ತಾಲೂಕಿನ ಅಂಬಲಗೆರೆ ರಂಗನಾಥ ದೇವಾಲಯದಲ್ಲಿ ಕಾಣಬಹುದು.

ಶಾಲ, ಕೂಟ, ಹಾರಗಳು ಬಹುಮಟ್ಟಿಗೆ ವಿಜಯನಗರ ಶೈಲಿಯಲ್ಲಿದ್ದು ಅವುಗಳಲ್ಲಿ ದೇವತೆಗಳ ಗಾರೆಯ ಶಿಲ್ಪಗಳು ಕಂಡುಬಂದಿವೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಬೆಳಗೆರೆ ರಂಗನಾಥ ದೇವಾಲಯದಲ್ಲಿ ಕಂಡುಬರುತ್ತದೆ. ಇತ್ತೀಚಿನ ಶಾಲ, ಕೂಟ, ಹಾರಗಳಲ್ಲಿ ಕೆಲವು ದೇವಾನುದೇವತೆಗಳ ಗಾರೆ ಶಿಲ್ಪಗಳು ಕಂಡುಬರುತ್ತವೆ. ಇವು ಜೀರ್ಣೋದ್ಧಾರಗೊಂಡ ದೇವಾಲಯಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿವೆ.

ಗ್ರೀವ :

ಷಡ್ವರ್ಗ ರಚನೆಯ ಕ್ರಮದಲ್ಲಿ ನಾಲ್ಕನೇ ಅಂಗ. ಇದು ಪ್ರಸ್ತರ ಮತ್ತು ಶಿಖರದ ನಡುವಿನ ಭಾಗವಾಗಿದ್ದು, ಇವುಗಳ ನಡುವೆ ಗ್ರೀವವು ಕುತ್ತಿಗೆಯಂತೆ ಒಳಸಂದಿರುವುದು. ಗ್ರೀವದ ನಾಲ್ಕು ದಿಕ್ಕುಗಳಲ್ಲಿ ಕೋಷ್ಠಗಳಿದ್ದು ಅದರಲ್ಲಿ ಉಬ್ಬುಶಿಲ್ಪಗಳು ಇರುತ್ತವೆ. ಈ ಕೋಷ್ಠಕಗಳಿಗೆ ಗ್ರೀವ ಕೋಷ್ಠಕಗಳೆಂದೂ, ಅದರಲ್ಲಿರುವ ಮೂರ್ತಿಗಳಿಗೆ ಗ್ರೀವ ದೇವತೆಗಳೆಂದು ಹೆಸರು.[೭] ಗರ್ಭಗೃಹದಲ್ಲಿರುವ ದೇವರಿಗೆ ಸಂಬಂಧಪಟ್ಟ ವಾಹನವು ಶಿಖರದಲ್ಲಿರಬೇಕೆಂದು ಶಿಲ್ಪಗ್ರಂಥಗಳಲ್ಲಿ ಹೇಳಲಾಗಿದೆ. ಆದರೆ ಈ ರೀತಿಯ ರಚನೆ ಹೆಚ್ಚಿನ ರಂಗನಾಥ ದೇವಾಲಯಗಳಲ್ಲಿ ಕಂಡುಬರುವುದಿಲ್ಲ. ಉದಾಹರಣೆಗೆ ಚಿಕ್ಕಮಗಳೂರು ಜಿಲ್ಲೆ/ತಾಲೂಕಿನ ಬಿಳೆಕಲ್ಲು ರಂಗನಾಥ ದೇವಾಲಯ ಮತ್ತು ತುಮಕೂರು ಜಿಲ್ಲೆಯ/ತಾಲೂಕಿನ ಟಿ.ಗೊಲ್ಲಹಳ್ಳಿ ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತದೆ. ಆದರೆ ಉಳಿದ ದೇವಾಲಯಗಳು ಸರಳವಾದ ಗ್ರೀವ ಭಾಗವನ್ನು ಹೊಂದಿವೆ.

**ಶಿಖರ :**

ಷಡ್ವರ್ಗ ಕ್ರಮದಲ್ಲಿ ಐದನೇ ಅಂಗ. ಇದು ಗ್ರೀವ ಮತ್ತು ಸ್ತೂಪಿಯ ನಡುವೆ ಗುಮ್ಮಟ್ಟದ ಆಕಾರದಲ್ಲಿರುತ್ತದೆ. ದೇವಾಲಯಗಳ ಶೈಲಿಯನ್ನು ಗುರುತಿಸುವಲ್ಲಿ ಶಿಖರವೇ ಪ್ರಧಾನ ಪಾತ್ರ ವಹಿಸುತ್ತದೆ. ಶಿಖರವು ಚತುರಶ್ರ, ಅಷ್ಟಾಶ್ರ, ವೃತ್ತಾಕಾರದಲ್ಲಿ ಕ್ರಮವಾಗಿ ನಾಗರ, ದ್ರಾವಿಡ ಮತ್ತು ವೇಸರ ಶೈಲಿಗಳೆಂದು ಕರೆಯುವರು. ಬಹುಪಾಲು ರಂಗನಾಥ ದೇವಾಲಯಗಳ ಶಿಖರಗಳು ದ್ರಾವಿಡ ಶೈಲಿಯಲ್ಲಿವೆ. ತುಮಕೂರು ಜಿಲ್ಲೆಯ/ತಾಲೂಕಿನ ಟಿ. ಗೊಲ್ಲಹಳ್ಳಿ, ಚಿಕ್ಕನಾಯಕಹಳ್ಳಿ ತಾಲ್ಲೂಕಿನ ಕಾರೇಹಳ್ಳಿ, ಚಿತ್ರದುರ್ಗ ಜಿಲ್ಲೆಯ ಹೊಳಲಕೆರೆ ತಾಲೂಕಿನ ಮಾಳೇನಹಳ್ಳಿ, ಹಿರಿಯೂರು ತಾಲೂಕಿನ ಬಬ್ಬೂರು, ಹಾಸನ ಜಿಲ್ಲೆಯ ಕಡೂರ ತಾಲೂಕಿನ ದೇವರಹೊಸಳ್ಳಿ ಮುಂತಾದ ರಂಗನಾಥ ದೇವಾಲಯಗಳು ವೇಸರ ಶೈಲಿಯ ಶಿಖರವನ್ನು ಹೊಂದಿವೆ. ಶಿವಮೊಗ್ಗ ಜಿಲ್ಲೆಯ ಪಿಳ್ಳಂಗೆರೆ ದೇವಾಲಯದ ಶಿಖರ ನಾಗರ ಶೈಲಿಯಲ್ಲಿ ಕಂಡುಬರುತ್ತದೆ.

**ಸ್ತೂಪಿ :**

ಶಿಖರದ ಮೇಲೆ ಇರುವ ಕುಂಭಕ್ಕೆ ಸ್ತೂಪಿ (ಕಲಶ) ಎಂದು ಹೆಸರು. ಷಡ್ವರ್ಗಗಳಲ್ಲಿ ಅಂತಿಮ ಸ್ತರವೇ ಸ್ತೂಪಿ. ಘಟ, ಶಿಖ, ಚೂಲಿಕಾ, ಚುಳುಕ ಮುಂತಾಗಿ ಪರ್ಯಾಯ ಪದಗಳಿವೆ. ರಂಗನಾಥ ಅನೇಕ ದೇವಾಲಯಗಳಲ್ಲಿ ಹಿತ್ತಾಳೆಯ ಸ್ತೂಪಿ ಕಂಡುಬರುತ್ತದೆ.

**ಗರ್ಭಗೃಹ :**

ಇದು ದೇವಾಲಯದ ಮುಖ್ಯಭಾಗ. ಇದಕ್ಕೆ ಗರ್ಭಗೃಹ, ಪ್ರಾಸಾದ, ಮೂಲ ಪ್ರಾಸಾದ ಎಂದು ಕರೆಯುವರು. ಸಾಮಾನ್ಯವಾಗಿ ಮೂಲ ಮೂರ್ತಿಯನ್ನು ಆಧರಿಸಿ ಚೌಕಾಕಾರ ಅಥವಾ ಆಯತಾಕಾರವಿರುತ್ತದೆ. ಅಂದರೆ ಶಿವಾಲಯದಲ್ಲಿ ಚೌಕಾಕಾರದಲ್ಲಿ ಅಥವಾ ಗಜಪೃಷ್ಠಾಕೃತಿ ಯಲ್ಲಿಯೂ, ವೈಷ್ಣವ ದೇವಾಲಯಗಳಲ್ಲಿ ಆಯತಾಕಾರವಾಗಿರುತ್ತವೆ. ರಂಗನಾಥ ದೇವಾಲಯಗಳು ಪೂರ್ವಾಭಿಮುಖವಾಗಿರುವುದೇ ಹೆಚ್ಚು. ಆದರೆ ರಂಗಸ್ಥಳದ ರಂಗನಾಥ ದಕ್ಷಿಣಾಭಿಮುಖವಾಗಿದ್ದಾನೆ. ಇಲ್ಲಿನ ರಂಗನಾಥ ದೇವಾಲಯದ ಪ್ರದಕ್ಷಿಣಾ ಪಥದ ಗೋಡೆಯ ಹೊರ ಮುಖದಲ್ಲಿರುವ ಕಂಬದ ಸಾಲಿನ ಕೈಸಾಲೆ. ಈ ಕೈಸಾಲೆಗೆ ದೇವಾಲಯದ ಪ್ರಾಂಗಣದಿಂದ ಪ್ರವೇಶ ಮಾಡಬಹುದೇ ಹೊರತು ದೇವಾಲಯದ ಒಳಭಾಗದಿಂದ ಪ್ರವೇಶವಿಲ್ಲ. ಈ ರೀತಿಯ ಗರ್ಭಗೃಹದ ಸುತ್ತಲಿನ ತೆರೆದ ಕೈಸಾಲೆ ಇರುವುದು ಮತ್ತೊಂದು ವಿಶೇಷವೆನ್ನಬಹುದು. ಸಾಮಾನ್ಯವಾಗಿ ಬಹುಪಾಲು ರಂಗನಾಥ ದೇವಾಲಯಗಳು ಒಂದೇ ಗರ್ಭಗೃಹವನ್ನು ಹೊಂದಿದೆ. ಜೀರ್ಣೋದ್ಧಾರ ಕೈಗೊಂಡ ದೇವಾಲಯಗಳಲ್ಲಿ ದ್ವಿಕೂಟ, ತ್ರಿಕೂಟ, ಗರ್ಭಗೃಹಗಳು ಕೂಡಾ ಕಂಡುಬಂದಿವೆ.

**ಅಂತರಾಳ ಅಥವಾ ಸುಕನಾಸ :**

ಗರ್ಭಗೃಹ ಮತ್ತು ಅರ್ಧಮಂಟಪವನ್ನು ಸೇರಿಸುವಂತೆ ಅಂತರಾಳವನ್ನು ರಚಿಸಿ, ಅವಶ್ಯವಿದ್ದಲ್ಲಿ ಮುಂದೆ ಒಂದು ಪ್ರವೇಶದಂತೆ ಕಟ್ಟಬಹುದೆಂದು ಅದರ ಮುಂದೆ ಮುಖಮಂಟಪವನ್ನು ರಚಿಸಬೇಕೆಂದು ಮಯಮತವು ಹೇಳುತ್ತದೆ.[೮] ಇದ್ದನ್ನು ಪ್ರದಕ್ಷಿಣಾಪಥ ಅಂತರಾಳವೆಂದು ಕರೆಯಲಾಗಿದೆ. ಇದು ಗರ್ಭಗೃಹದ ಮುಂಭಾಗದಲ್ಲಿ ಅದರಷ್ಟೇ ಅಳತೆಯಲ್ಲಿರುವ ಅಂತರಾಳವಾಗಿದ್ದು, ಹೆಚ್ಚು ವಾಸ್ತು ವಿಶೇಷತೆಯನ್ನು ಹೊಂದಿರುವುದಿಲ್ಲ. ಕೆಲವು ಕಡೆ ಅಂತರಾಳದ ಎರಡು ಬದಿಯಲ್ಲಿ ಉಪಗರ್ಭಗೃಹಗಳನ್ನು ಮಾಡಿರುವುದು ಕಂಡುಬರುತ್ತವೆ. ಉದಾಹರಣೆಗೆ ಶಿವನಸಮುದ್ರ, ದಾವಣಗೆರೆ ಜಿಲ್ಲೆ ಹಂಪನೂರ, ಚಿತ್ರದುರ್ಗ ಜಿಲ್ಲೆ ಅಬ್ಬಿನಹೊಳೆ ರಂಗನಾಥ ದೇವಾಲಯದಲ್ಲಿ ಕಾಣಬಹುದು. ಇಲ್ಲಿ ಗರ್ಭಗೃಹದ ಬಾಗಿಲುಗಳು ಸಭಾಮಂಟಪ ಕಡೆಗಿರುತ್ತವೆ. ಗರ್ಭಗೃಹದ ಮೇಲೆ ಶಿಖರವಿದ್ದರೆ ಅದಕ್ಕೆ ಹೊಂದಿಕೊಂಡಂತೆ ಅಂತರಾಳದ ಮೇಲೆ ಸುಖನಾಸ ಎಂಬ ವಾಸ್ತು ಭಾಗವಿರುತ್ತದೆ. ಹಾಗಾಗಿ ಅದರ ಕೆಳಗಿರುವ 'ಅಂತರಾಳ' ಸುಖನಾಸಿ ಎನಿಸುತ್ತದೆ. ಸುಖನಾಸವು ಮುಂಭಾಗದಲ್ಲಿ ಚೈತ್ಯಾಕೃತಿಯನ್ನು ಹೋಲುವ ಅರೆವೃತ್ತಾಕಾರದ ಆಕೃತಿ. ವಿರಳವಾಗಿ ಕೆಲವು ದೇವಾಲಯಗಳಲ್ಲಿ ಇಂತಹ ಸುಖನಾಸಗಳು ಕಂಡುಬರುತ್ತವೆ. ಉದಾಹರಣೆಗೆ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲೂಕಿನ ಹಳೆದೇವರಹೊನ್ನಳ್ಳಿ, ಚಿಕ್ಕಮಗಳೂರು ಜಿಲ್ಲೆ/ತಾಲೂಕಿನ ಬಿಳೇಕಲ್ಲು, ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲೂಕಿನ ಕಾರೇಹಳ್ಳಿ ಮುಂತಾದ ರಂಗನಾಥ ದೇವಾಲಯಗಳಲ್ಲಿ ಸರಳ ಅಲಂಕರಣೆಯನ್ನು ಹೊಂದಿವೆ. ಮೂಲದೇವರಿಗೆ ಸಂಬಂಧಿಸಿದ ಉತ್ಸವ ವಿಗ್ರಹಗಳು ಅಂತರಾಳದಲ್ಲಿರುತ್ತವೆ. ಇದು ಚೌಕ ಮತ್ತು ಆಯತಾಕಾರವಾಗಿದ್ದು, ಸುತ್ತ ಭಿತ್ತಿ ಇರುವುದು ಇದರಲ್ಲಿ ಮಧ್ಯ ಸ್ತಂಭಗಳು ಇರುವುದಿಲ್ಲ.

**ನವರಂಗ ಅಥವಾ ಸಭಾಮಂಟಪ :**

ನವರಂಗವು ಅಂತರಾಳದ ಮುಂದಿನ ಮಂಟಪವಾಗಿದೆ. ಇದು ದೇವಾಲಯಗಳ ಸಭಾಮಂಟಪವಾಗಿರುತ್ತದೆ. ಭಗವಂತನಿಗಾಗಿ ಸಂಗೀತ ಹಾಡಿ, ನೃತ್ಯವನ್ನು ಮಾಡಲೆಂದು ನಿರ್ಮಿಸಿರುವ ಇದಕ್ಕೆ ನೃತ್ಯ ಮಂಟಪವೆಂದೂ ಹೆಸರು. ಸಾಮಾನ್ಯವಾಗಿ ಇದು ೯ ಅಂಕಣಗಳನ್ನು ಹೊಂದಿರುವುದು ಸಂಪ್ರದಾಯ. ಕೆಲವು ಸಲ ವಿಸ್ತಾರವಾದ ರಚನೆಯಾಗಿದ್ದು, ಚೌಕಾಕಾರವಾಗಿಯೂ ಅಥವಾ ಆಯತಾಕಾರವಾಗಿಯೂ ಇರುವುದುಂಟು. ದಾವಣಗೆರೆ ಜಿಲ್ಲೆ ಹಂಪನೂರ ಮತ್ತು ಕೊಣಚಗಲ್ ರಂಗನಾಥಸ್ವಾಮಿ ದೇವಾಲಯಗಳ ಸಭಾಮಂಟಪಗಳು ಪ್ರತಿಸಾಲಿನಲ್ಲಿ ಮೂರರಂತೆ, ಎರಡು ಸಾಲಿನಲ್ಲಿ ಒಟ್ಟು ಆರು ಅಂಕಣಗಳನ್ನು ಹೊಂದಿವೆ. ಇಲ್ಲಿ ಮಧ್ಯದಲ್ಲಿ ಎರಡು ಮತ್ತು ಪ್ರವೇಶ ಭಾಗದಲ್ಲಿ ಎರಡರಂತೆ ಒಟ್ಟು ನಾಲ್ಕು ಕಂಬಗಳಿರುತ್ತವೆ. ಸಭಾಮಂಟಪಕ್ಕೆ ಅದರ ಎರಡು

ಬದಿಯಲ್ಲಿ ಉಪಪ್ರವೇಶದ್ವಾರಗಳು ಇರುವುದುಂಟು. ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆ, ಕೊರಟಗೆರೆ, ನೀರ್ಥಡಿ, ದಾವಣಗೆರೆ ಜಿಲ್ಲೆಯ ಶಂಕರನಹಳ್ಳಿ ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತದೆ.

**ಮಹಾಮಂಟಪ:**

ಸಾಮಾನ್ಯವಾಗಿ ಸಭಾಮಂಟಪದ ಮುಂಭಾಗದಲ್ಲಿ ಮುಖಮಂಟಪಗಳಿರುತ್ತವೆ. ಇದು ದೇವಾಲಯದ ನವರಂಗದ ಮುಂಭಾಗದ ರಚನೆಯಾಗಿದೆ. ಇದನ್ನು ಅಗ್ರಮಂಟಪ ಎನ್ನುವರು. ಕೆಲವೊಮ್ಮ ಪ್ರತ್ಯೇಕ ಅಧಿಷ್ಠಾನದ ಮೇಲೆ ಕಟ್ಟಲ್ಪಡುವ ಮುಖಮಂಟಪದಲ್ಲಿ ನಾಲ್ಕಕ್ಕಿಂತಲೂ ಹೆಚ್ಚು ಸ್ತಂಭಗಳೂ ಇರುತ್ತವೆ. ಸಾಮಾನ್ಯವಾಗಿ ಬಹುಪಾಲು ರಂಗನಾಥ ದೇವಾಲಯಗಳು ಮುಖಮಂಟಪವನ್ನು ಹೊಂದಿವೆ. ಕೆಲವು ಚಿಕ್ಕ ಮುಖಮಂಟಪವನ್ನು ಹೊಂದಿದ್ದು ಕೆಲವು ವಿಸ್ತೃತವಾಗಿವೆ. ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆಯ ರಂಗನಾಥ ಮಹಾಮಂಟಪದಲ್ಲಿ ಮೂರು ಕಡೆಗೂ ಉಪ ಪ್ರವೇಶದ್ವಾರಗಳಿವೆ.

**ಮುಖಮಂಟಪ :**

ಸಭಾಮಂಟಪ ಇಲ್ಲವೆ ಮಹಾಮಂಟಪಗಳ ಮುಂಭಾಗದಲ್ಲಿ ಮುಖಮಂಟಪವಿರುತ್ತದೆ. ಕೆಲವು ದೇವಾಲಯಗಳಲ್ಲಿ ಸಭಾ ಮಂಟಪದಷ್ಟೇ ವಿಶೇಷವಾಗಿವೆ. ಅಂದರೆ ಇವು ಮೂರು ಅಂಕಣಗಳನ್ನು ಹೊಂದಿ ಮುಂಭಾಗದಲ್ಲಿ ತೆರೆದಿರುತ್ತವೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಜೋಡಿ ರಂಗಾಪುರ, ಹೊರಕೆರೆದೇವಪುರ, ನೀರ್ಥಡಿ ರಂಗನಾಥ ದೇವಾಲಯಗಳು ಸಾಕ್ಷಿಯಾಗಿವೆ. ಇವು ಮೂರು ಬದಿಯಲ್ಲಿ ತೆರೆದ ಮುಖಮಂಟಪವನ್ನು ಹೊಂದಿವೆ. ಕೆಲವು ಮುಖಮಂಟಪಗಳ ಎರಡೂ ಬದಿಯ ಕೊನೆಯ ಅಂಕಣಗಳಲ್ಲಿ ಎತ್ತರವಾದ ಜಗತಿಗಳು ಇರುತ್ತದೆ. ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆ ರಂಗನಾಥ ದೇವಾಲಯಗಳ ಮುಖಮಂಟಪದ ಅಂಚಿನಲ್ಲಿ ಸುತ್ತಲೂ ಕಕ್ಷಾಸನಗಳಿವೆ. ಇನ್ನೊಂದು ವಿಶಿಷ್ಟ ಅಂಶವೆಂದರೆ ಹೆಚ್ಚಿನ ದೇವಾಲಯಗಳ ಮುಖಮಂಟಪಗಳು ಗರ್ಭಗೃಹ, ಅಂತರಾಳ ಮತ್ತು ಸಭಾ ಮಂಟಪಗಳ ತಳಮಟ್ಟಕ್ಕಿಂತ ಕೆಳಹಂತದಲ್ಲಿರುವುದು. ಹೀಗಾಗಿ ಸಭಾಮಂಟಪದ ಮುಖಭಾಗವು ಅಧಿಷ್ಠಾನದ ಮುಖಮಂಟಪದಲ್ಲಿ ಗೋಚರಿಸುತ್ತದೆ ಮತ್ತು ಮುಖಮಂಟಪಕ್ಕಿಂತ ಸಭಾ ಮಂಟಪ ಸ್ವಲ್ಪ ಎತ್ತರದಲ್ಲಿರುವುದರಿಂದ ಅದರ ಪ್ರವೇಶಕ್ಕೆ ಮುಖಮಂಟಪದಲ್ಲಿ ಸೋಪಾನಗಳಿರುತ್ತವೆ. ಸೋಪಾನಗಳ ಇಕ್ಕೆಲದಲ್ಲಿ ಗಜ, ಸುರಳಿಯಾಳಿ, ಇಲ್ಲವೇ ಗಜಶಾರ್ದೂಲಗಳ ಕೈಪಿಡಿಗಳಿರುತ್ತವೆ. ಈ ರೀತಿಯ ರಚನೆಯು ದಾವಣಗೆರೆ ಜಿಲ್ಲೆಯ ಹಂಪನೂರ, ಹಾವೇರಿ ಜಿಲ್ಲೆಯ ಹೀರೆಕೆರೂರು ತಾಲೂಕಿನ ಹಳ್ಳೂರು ಇತ್ಯಾದಿ ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತದೆ.

**ದ್ವಾರಬಂಧ :**

ದ್ವಾರಬಂಧಗಳು ದೇವಾಲಯದ ಪ್ರಮುಖ ವಾಸ್ತು ಭಾಗವಾಗಿದೆ. ದೇವಾಲಯಗಳಲ್ಲಿ ಅವಶ್ಯಕತೆ ಮತ್ತು ಅಲಂಕಾರ ಆಶಯವನ್ನು ಪೂರೈಸುವ ಭಾಗಗಳಲ್ಲಿ ದ್ವಾರವು ಒಂದು. ಬಾಗಿಲಿನ ಚೌಕಟ್ಟಿಗೆ 'ದ್ವಾರಬಂಧ' ಎಂದು ಹೆಸರು.[f] ದ್ವಾರದಲ್ಲಿ ಹೊಸ್ತಿಲು, ಪೇದ್ಯ, ದ್ವಾರಶಾಖೆ ಮತ್ತು ಲಲಾಟ ಪ್ರಧಾನ ಅಂಗಗಳು. ದೇವಾಲಯದ ಪ್ರತಿಯೊಂದು ಭಾಗಗಳು ದ್ವಾರಬಂಧವನ್ನು ಹೊಂದಿರುತ್ತವೆ. ಗಾತ್ರದ ದೃಷ್ಟಿಯಿಂದ ಎರಡು ರೀತಿಯ ದ್ವಾರಗಳಿವೆ. ಮಹಾದ್ವಾರ ಮಂಟಪದ ದ್ವಾರಗಳು ೨೦ ಅಡಿ ಎತ್ತರವಿದ್ದು ಬೃಹತ್ ಪ್ರಮಾಣದಲ್ಲಿವೆ. ಎರಡನೆಯ ದ್ವಾರಗಳು ಕೇವಲ ೪–೬ ಅಡಿ ಎತ್ತರದಲ್ಲಿವೆ.

ಇವು ನವರಂಗ, ಅಂತರಾಳ, ಗರ್ಭಗೃಹಗಳಿಗೆ ಇರುತ್ತವೆ. ಮತ್ತು ಸರಳವಾಗಿವೆ. ಬಾಗಿಲು ಶಾಖೆಗಳಲ್ಲಿ ಲತಾಶಾಖೆ, ರತ್ನಶಾಖೆಗಳು, ವಜ್ರಶಾಖೆಗಳು ಸಾಮಾನ್ಯವಾಗಿವೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಕೊಣಚಗಲ್, ಅಂಬಲಗೆರೆ, ದಾವಣಗೆರೆ ಜಿಲ್ಲೆಯ ಮಾಧನಬಾವಿ ಮುಂತಾದ ರಂಗನಾಥಸ್ವಾಮಿ ದೇವಾಲಯಗಳಲ್ಲಿ ಕಾಣುತ್ತೇವೆ. ಅಲ್ಲದೆ ಎಲ್ಲ ರಂಗನಾಥ ದೇವಾಲಯಗಳಲ್ಲೂ ದ್ವಾರದ ಇಕ್ಕೆಲದಲ್ಲಿ ಕಡ್ಡಾಯ ರೀತಿಯಲ್ಲಿ ವೈಷ್ಣವ ದ್ವಾರಪಾಲಕರಿರುವರು. ಇವರು ಚತುರ್ಭುಜರಾಗಿದ್ದು ಶಂಖ, ಚಕ್ರ ಗದಾ ದಾರಿಗಳಾಗಿದ್ದು ಸಮಭಂಗದಲ್ಲಿರುವರು. ಕೆಲವು ಕಡೆ ದ್ವಾರಪಾಲಕರು ಸಮಭಂಗದಲ್ಲಿದ್ದು, ಬಲಗಾಲನ್ನು ನೇರವಾಗಿ ಊರಿದ್ದರೆ, ಎಡಗಾಲನ್ನು ವಕ್ರವಾಗಿ ಪಾದವನ್ನು ಎಡಕ್ಕೆ ಊರಿ ಹಿಮ್ಮಡಿಯನ್ನು ಮೇಲಕ್ಕೆ ಎತ್ತಿ ಇರಿಸಲಾಗಿದೆ. ಉದಾಹರಣೆಗೆ ತುಮಕೂರು ಜಿಲ್ಲೆಯ ತುಂಗವಟಿ, ಚಿತ್ರದುರ್ಗ ಜಿಲ್ಲೆಯ ಕೊಣಚಗಲ್ ರಂಗನಾಥ ದೇವಾಲಯದಲ್ಲಿ ಕಾಣಬಹುದು. ಇವರು ಕಿರೀಟ ಧಾರಿಗಳಾಗಿದ್ದು ಮೈಮೇಲೆ ವಿವಿಧ ಅಭರಣಗಳನ್ನು ಧರಿಸಿರುತ್ತಾರೆ. ಮುಂದಿನ ಒಂದು ಕೈ ಸೊಂಟದ ಮೇಲೆರಿಸಿದ್ದು ಮತ್ತೊಂದು ಕೈಯಲ್ಲಿ ಗದೆ ಇರುತ್ತದೆ.

ಇಲ್ಲಿಯ ದೇವರ ಲಲಾಟ ಭಾಗದಲ್ಲಿ ಗಜಲಕ್ಷ್ಮೀ, ಪದ್ಮ, ಅಂಬೆಗಾಲಿನ ಕೃಷ್ಣ ಶಿಲ್ಪಗಳು ಕಂಡುಬರುತ್ತವೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆ ಹೊಳಲಕೆರೆ ತಾಲೂಕಿನ ಮಾಳೇನಹಳ್ಳಿ ಮತ್ತು ಹಾವೇರಿ ಜಿಲ್ಲೆಯ ಸವಣೂರು ತಾಲೂಕಿನ ಸಿದ್ಧಾಪುರ ರಂಗನಾಥ ದೇವಾಲಯಗಳ ಲಲಾಟ ಬಿಂಬದಲ್ಲಿ ಅಂಬೆಗಾಲಿನ ಕೃಷ್ಣಮೂರ್ತಿಶಿಲ್ಪಗಳು ಕಂಡುಬರುತ್ತವೆ. ಲಲಾಟದ ಮೇಲಿನ ಉತ್ತರಾಂಗ ಭಾಗವು ಸರಳವಾಗಿದೆಯಾದರೂ ಚಿತ್ರದುರ್ಗ ಜಿಲ್ಲೆ ನೀರ್ಥಡಿ ರಂಗನಾಥ ದೇವಾಲಯದಲ್ಲಿ ಬಾಗಿಲು ಬದಿಯ ಶಾಖೆಗಳಲ್ಲಿರುವ ಲತಾಬಳ್ಳಿ, ಲತಾ ತೋರಣಗಳು ಹಾಗೂ ಕುಂಭ ತೋರಣಗಳು ಸಾಮಾನ್ಯವಾಗಿ ಯಾಳ ಸವಾರನ ಬಾಯಿಂದ ಹೊರಟಂತೆ ಚಿತ್ರಿಸಲಾಗಿದೆ.

ಮಹಾದ್ವಾರ ಮಂಪಟಗಳ ದ್ವಾರಗಳು ಎತ್ತರವಾಗಿದ್ದು, ಇವು ಕೆಳಭಾಗದಲ್ಲಿ ದ್ವಾರಪಾಲಕರ ಮತ್ತು ಮೇಲ್ಭಾಗದಲ್ಲಿ ಲತಾಶಾಖೆ, ರತ್ನಶಾಖೆ ಮತ್ತು ವಿವಿಧ ಅಲಂಕೃತ ಆಕೃತಿಗಳ ತೋರಣಗಳನ್ನು ಹೊಂದಿವೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಮಾಳೇನಹಳ್ಳಿ ರಂಗನಾಥ ದೇವಾಲಯ, ಹೊರಕೆರೆದೇವರಪುರ ರಂಗನಾಥ ದೇವಾಲಯದಲ್ಲಿ ದ್ವಾರಪಾಲಕರ ಬದಲಿಗೆ ಕುಂಭ ತೋರಣಗಳನ್ನು ಬಿಡಿಸಿರುವುದು ಗಮನಾರ್ಹ. ಈ ದ್ವಾರಗಳ ಮುಂದೆ ಮತ್ತೊಂದು ದ್ವಾರಪಟ್ಟಿಕೆಗಳನ್ನು ರೂಪಿಸಿರುವುದು ಇಲ್ಲಿಯ ವೈಶಿಷ್ಟ್ಯವಾಗಿದೆ. ಇಲ್ಲಿಯ ಪಟ್ಟಿಕೆಗಳ ಕೆಳಭಾಗದಲ್ಲಿ ಲತಾಬಳ್ಳಿಯನ್ನು ಆಶ್ರಯಿಸಿ ನಿಂತ ಬಾಲಿಕೆಯರ ಉಬ್ಬುಶಿಲ್ಪಗಳಿದ್ದು, ಲತಾ ಬಳ್ಳಿಯು ಇದೇ ಬಾಗಿಲ ತುಂಬೆಲ್ಲಾ ವ್ಯಾಪಿಸಿರುತ್ತದೆ. ಈ ಬಳ್ಳಿಯ ವೃತ್ತಗಳಲ್ಲಿ ನೃತ್ಯಗಾರರ್ತಿಯರ ಚಿಕ್ಕ ಚಿಕ್ಕ ಉಬ್ಬು ಶಿಲ್ಪಗಳನ್ನು ಖಂಡರಿಸಲಾಗಿದೆ. ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆ, ಹೊರಕೆರೆದೇವರಪುರ ರಂಗನಾಥ ದೇವಾಲಯದ ಬಾಗಿಲ ಹೊರಪಟ್ಟಿಕೆಯಲ್ಲಿ ಶಿಲಾಬಾಲಕಿಯರ ಬದಲಿಗೆ ಮಕರದ ಬಾಯಿಂದ ಹೊರಟ ಲತಾ ತೋರಣಗಳನ್ನು ಬಿಡಿಸಲಾಗಿದೆ.

**ಭುವನೇಶ್ವರಿ/ಛತ್ತು :**

ಬಹುಪಾಲು ರಂಗನಾಥ ದೇವಾಲಯಗಳಲ್ಲಿ ಮುಚ್ಚಿಕೆ ಅಥವಾ ಛತ್ತನ್ನು ಸಾಮಾನ್ಯವಾಗಿ ಶಿಲಾಹಲಗೆಯಿಂದ ನಿರ್ಮಿಸಲಾಗಿದೆ. ಛತ್ತುಗಳು ಹೆಚ್ಚಿಗೆ ಸರಳವಾಗಿದ್ದರೂ, ಹಲವು ದೇವಾಲಯಗಳಲ್ಲಿ ಭುನೇಶ್ವರಿ ಅಲಂಕರಣೆಗಳನ್ನು ನೋಡಬಹುದು. ಹೆಚ್ಚಾಗಿ ಭುವನೇಶ್ವರಿಯಲ್ಲಿ ಪದ್ಮದ ರೀತಿಯ ಚಿತ್ರವನ್ನು ಬಿಡಿಸಿರುವುದೇ ಕಂಡುಬರುತ್ತದೆ. ಭಾವಣಿಯ ಮಧ್ಯದಲ್ಲಿ ಮೊಗಚಿಹಾಕಿದ ಮೊಗ್ಗು ಇದ್ದು ಅ ಕಮಲದ ಮೊಗ್ಗು ಛತ್ತಿನಿಂದ ನೆಲಕ್ಕೆ ಮುಖ ಮಾಡಿರುವ ಭುವನೇಶ್ವರಿಯು ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆ ದೇವಾಲಯದಲ್ಲಿ ಕಂಡುಬರುತ್ತದೆ. ನೀರ್ಥಡಿಯ ರಂಗನಾಥ ದೇವಾಲಯದಲ್ಲಿ ಅಷ್ಟದಿಕ್ಪಾಲಕರ ಸಮೇತ ಗಜಸಂಹಾರ ಶಿವನನ್ನು ವಾಹನ ಸಮೇತ ಕೆತ್ತಲಾಗಿದೆ. ಜೊತೆಗೆ ಸುತ್ತಲೂ ಹಂಸ, ಪುಷ್ಪ, ಗಿಳಿಗಳು, ಸಾಲು ಶಿಲ್ಪಗಳಿರುತ್ತವೆ.

**ಕಂಬಗಳು/ಭೋಧಿಗೆಗಳು :**

ದೇವಾಲಯದ ನಿರ್ಮಾಣದಲ್ಲಿ ಭಿತ್ತಿ ಎಷ್ಟು ಮುಖ್ಯವೋ ಹಾಗೇ ಸ್ತಂಭಗಳು ಆಧಾರವಾಗಿವೆ. ಸ್ತಂಭಗಳು ಪೀಠ, ದಿಂಡು, ಕುಂಭ, ತಟಿ, ಮಂಡಿ, ಪೋತಿಕಾ, ಭಾಗಗಳನ್ನು ಹೊಂದಿರುತ್ತದೆ. ದಿಂಡು ಸ್ತಂಭದ ಪ್ರಮುಖವಾದ ಅಂಗ. ಇದರ ಆಕಾರವನ್ನು ಅನುಸರಿಸಿಯೇ ಸ್ತಂಭದ ಪ್ರಭೇದಗಳನ್ನು ಗುರುತಿಸಬಹುದು. ಇವುಗಳಿಂದ ದೇವಾಲಯದ ಕಾಲವನ್ನು ಗುರುತಿಸಲು ಸಹಾಯಕವಾಗುತ್ತದೆ. ಮುಖ್ಯವಾಗಿ ರಂಗನಾಥ ದೇವಾಲಯಗಳಲ್ಲಿ ಏಕಕಾಂಡ ಮತ್ತು ದ್ವಿಕಾಂಡ ಕಂಬಗಳೆರಡು ಕಂಡುಬರುತ್ತವೆ. ಇಲ್ಲಿನ ಕಂಬಗಳ ರಚನೆಯಲ್ಲಿ ವಿಜಯನಗರ ಶೈಲಿಯು ಪ್ರಭಾವ

ಬೀರಿರುವುದು ಕಂಡುಬರುತ್ತದೆ. ಹೆಚ್ಚಿನ ರಂಗನಾಥ ದೇವಾಲಯಗಳಲ್ಲಿ ಏಕಕಾಂಡ ಕಂಬಗಳೇ ಹೆಚ್ಚಾಗಿ ದೊರೆಯುತ್ತವೆ. ಈ ಏಕಕಾಂಡ ಕಂಬಗಳಲ್ಲಿ ಕಾಂಡ ಭಾಗದಲ್ಲಿ ಕೆಳಗೆ ಮತ್ತು ತುದಿಯಲ್ಲಿ ಚಚ್ಚೌಕ ಭಾಗಗಳನ್ನು ಹೊಂದಿದ್ದು, ಮಧ್ಯದಲ್ಲಿ ೮–೧೬ ಮುಖಗಳ ಲಂಬ ಮತ್ತು ಅಡ್ಡ ಪಟ್ಟಿಕೆಗಳು ಇರುತ್ತವೆ. ಇಡೀ ಕಂಬಗಳಲ್ಲಿ ಈ ಪಟ್ಟಿಕೆಗಳೇ ಪ್ರಧಾನವಾಗಿ ಗೋಚರಿಸುತ್ತವೆ. ಕೆಳಭಾಗದ ಚೌಕಭಾಗ ಎತ್ತರವಾಗಿದ್ದು ಅಲ್ಲಿ ದೇವತೆಗಳ ಉಬ್ಬುಶಿಲ್ಪಗಳಿವೆ. ಈ ರೀತಿಯ ಕಂಬಗಳು ಬಹುಪಾಲು ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತವೆ. ಉದಾಹರಣೆಗೆ ನಾಗಮಂಗಲದ ಕಾವೇಟಿ ರಂಗನಾಥಸ್ವಾಮಿ ದೇವಾಲಯ, ತುಮಕೂರು ಜಿಲ್ಲೆಯ ತುಂಗವಟಿ, ಶಿವಮೊಗ್ಗ ಜಿಲ್ಲೆಯ ಗೋಪಾಳ ರಂಗನಾಥ ದೇವಾಲಯಗಳು ಸಾಕ್ಷಿಯಾಗಿವೆ. ಕೆಲವು ಕಂಬಗಳು ಯಾವುದೇ ಅಲಂಕರಣೆಯನ್ನು ಹೊಂದಿರದೆ ಕೆಳಗಿನಿಂದ ಮೇಲೆ ಏಕಪ್ರಕಾರದಲ್ಲಿವೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಅಬ್ಬಿನಹೊಳೆ, ದಾವಣಗೆರೆ ಜಿಲ್ಲೆಯ ಶಂಕರನಹಳ್ಳಿ ರಂಗನಾಥ ದೇವಾಲಯಗಳು ಸಾಕ್ಷಿಯಾಗಿವೆ. ಆದರೆ ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆಯ ರಂಗನಾಥ ದೇವಾಲಯದ ಕಂಬಗಳು ಕೂಡರುಚಕ ಸ್ತಂಭಗಳಾಗಿದ್ದು, ಇವುಗಳ ನಾಲ್ಕೂ ಮೂಲೆಗಳಲ್ಲಿ ಕುಂಭ ಪಂಜರಗಳು, ಅವುಗಳ ಮೇಲೆ ಅರ್ಧಗಂಬಗಳ ಅಲಂಕರಣೆಗಳು, ಮೇಲೆ ತೋರಣಗಳು ಇಡೀ ಕಂಬದುದ್ದಕ್ಕೂ ಚಾಚಿವೆ. ಈ ಎರಡು ರೀತಿಯ ಕಂಬಗಳು ಹಂಪಿಯ ದೇವಾಲಯಗಳ ಕಂಬಗಳಂತಿವೆ. ಇಲ್ಲಿ ಕಂಬದ ಯಾವುದೇ ಭಾಗ ಖಾಲಿಯಿರದೆ ಸಂಪೂರ್ಣ ಅಲಂಕೃತಗೊಂಡು ಕಂಬಗಳು ಶಿಷ್ಟ ಕಲಾಕೃತಿಗಳಾಗಿ ಗೋಚರಿಸುತ್ತವೆ.

ದ್ವಿಕಾಂಡ ಕಂಬಗಳ ಶೈಲಿ ವಿಜಯನಗರದ ವಿಶಿಷ್ಟ ಶೈಲಿಯಾಗಿದೆ. ಇದರಲ್ಲಿ ಪ್ರಧಾನ ಕಾಂಡ ಮತ್ತು ಅದಕ್ಕೆ ಹೊಂದಿಕೊಂಡಂತೆ ಉಪಕಾಂಡಗಳಿರುತ್ತವೆ. ಇವುಗಳಿಗೆ ಸಂಯುಕ್ತ ಅಥವಾ ಸಂಯೋಗ ಸ್ತಂಭಗಳೆಂತಲೂ ಕರೆಯಬಹುದಾಗಿದೆ. ಈ ರೀತಿಯ ಕಂಬಗಳನ್ನು ಮಹಾಮಂಟಪ ಇಲ್ಲವೆ ಮುಖಮಂಟಪದ ಮುಂಬದಿಯಲ್ಲಿ ಅಳವಡಿಸಲಾಗಿರುತ್ತದೆ. ಇವುಗಳಲ್ಲಿ ಮೇಲಿನ ತಲ ಹೆಚ್ಚು ಪ್ರಧಾನವಾಗಿದ್ದು ನೆಗೆಯುತ್ತಿರುವ ಸವಾರನನ್ನು ಹೊಂದಿರುವ ಕುದುರೆ, ಅದಕ್ಕೆ ಹೊಂದಿಕೊಂಡಂತೆ ಹುಲಿಯೊಂದಿಗೆ ಸೆಣಸುತ್ತಿರುವ ಯೋಧನೊಬ್ಬನ ಶಿಲ್ಪವಿದೆ. ಕೆಳತಲದಲ್ಲಿ ಮೇಲಿನ ರೀತಿಯಲ್ಲೇ ಸವಾರನನ್ನು ಹೊಂದಿರುವ ನೆಗೆಯುತ್ತಿರುವ ಸಿಂಹ, ಅದರ ಕೆಳಗೆ ಆನೆಯ ಶಿಲ್ಪವನ್ನು ಕಂಡರಿಸಲಾಗಿರುತ್ತದೆ. ಈ ರೀತಿಯ ಕಂಬಗಳು ಬೆಂಗಳೂರು ನಗರ ಜಿಲ್ಲೆಯ ಅವೆನ್ಯೂರೋಡ, ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆ, ನೀರ್ಥಡಿ ಮುಂತಾದ ರಂಗನಾಥ ದೇವಾಲಯಗಳಲ್ಲಿ ವಿಶೇಷವಾಗಿ ಕಂಡುಬರುತ್ತವೆ.

**ಸೋಪಾನ :**

ಬಹುಪಾಲು ರಂಗನಾಥ ದೇವಾಲಯಗಳಲ್ಲಿ ಮುಖಮಂಟಪ, ಸಭಾಮಂಟಪಗಳ ಮುಂಭಾಗದಲ್ಲಿ ಸೋಪಾನಗಳನ್ನು ನಿರ್ಮಿಸಲಾಗಿದೆ. ಬೆಟ್ಟ ಪರಿಸರದಲ್ಲಿರುವ ದೇವಾಲಯಗಳಿಗೆ ಸೋಪಾನಗಳನ್ನು ಏರಿಯೇ ಹೋಗಬೇಕಾಗುತ್ತದೆ. ಸೋಪಾನಗಳ ಎರಡು ಬದಿಯಲ್ಲಿ ಸುರಳಿಯಾಳಿಗಳ, ಆನೆಗಳ, ಸಿಂಹಗಳ, ಯಾಳಿಗಳ ಕೈಪಿಡಿಗಳನ್ನು ಕೆತ್ತಿ ಅಲಂಕರಿಸಲಾಗಿರುತ್ತದೆ. ನಾಗಮಂಗಲದ ಕಾವೇಟಿ ರಂಗನಾಥ ದೇವಾಲಯದಲ್ಲಿ ಆನೆ ಕೈಪಿಡಿಯನ್ನು ಕಾಣಬಹುದು.

**ಶಿಖರ :**

ರಂಗನಾಥನ ಎಲ್ಲ ದೇವಾಲಯಗಳಲ್ಲಿ ಶಿಖರಗಳನ್ನು ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಲಾಗಿದೆ. ಇವು ಸಾಮಾನ್ಯವಾಗಿ ಸರಳವಾಗಿದ್ದು ಹೆಚ್ಚಿನ ಅಲಂಕರಣೆಯನ್ನು ಹೊಂದಿರುವುದಿಲ್ಲ. ಇನ್ನೊಂದು ಮಹತ್ವವಾದ ಸಂಗತಿಯೆಂದರೆ ಮೂಲ ಶಿಖರವನ್ನು ಜೀರ್ಣೋದ್ಧಾರಗೊಳಿಸಿ ನೂತನವಾಗಿ ಶಿಖರಗಳನ್ನು ರಚಿಸಿರುವುದೇ ಹೆಚ್ಚಾಗಿ ಕಂಡುಬರುತ್ತದೆ. ದೊರೆಯುವ ಶಿಖರಗಳು ಹೆಚ್ಚಾಗಿ ದ್ರಾವಿಡ ಮಾದರಿಯಲ್ಲಿರುವ ಶಿಖರಗಳಾಗಿವೆ. ಇವು ದ್ವಿತಲ ಹೊಂದಿವೆ. ಕೆಲವು ಶಿಖರಗಳು ಹಂತ ಹಂತವಾಗಿ ಮೇಲೆರುತ್ತಾ ಚಿಕ್ಕದಾಗಿರುವ ಶಿಖರಗಳು ಕೂಡ ಕಂಡುಬರುತ್ತವೆ. ಕೆಲವು ವೇಸರ ಮತ್ತು ನಾಗರ ಶೈಲಿಯ ಶಿಖರಗಳು ಕೂಡ ಕಂಡುಬರುತ್ತವೆ. ಶಿಖರಗಳಲ್ಲಿ ಗಾರೆ ಶಿಲ್ಪಗಳ ಅಲಂಕರಣೆಯು ತೀರಾ ವಿರಳ.

**ದೇವಾಲಯದ ಆವರಣದ ರಚನೆಗಳು :**

ದೇವಾಲಯದ ಒಳ ಆವರಣದಷ್ಟೇ ಮುಖ್ಯವಾಗಿ ಹೊರ ಆವರಣವನ್ನು ನಿರ್ಮಿಸಲಾಗಿರುತ್ತದೆ. ಆವರಣದಲ್ಲಿ ಬಲಿಪೀಠ, ಮಂಟಪಗಳು, ಪರಿವಾರಾಲಯಗಳು, ಪ್ರಾಕಾರ, ಗರುಡಸ್ತಂಭ, ದೀಪಸ್ತಂಭ, ಉಯ್ಯಾಲೆಸ್ತಂಭ ಗೋಪುರಗಳನ್ನು ಕಾಣಬಹುದಾಗಿದೆ.

**ಬಲಿಪೀಠ :**

ದೇವರಿಗೆ ಎದುರಾಗಿ ಗರ್ಭಗೃಹ ಮತ್ತು ಅದರ ಮುಂದಿನ ಧ್ವಜಸ್ತಂಭದ ಮಧ್ಯೆ ಇರುವ ಇದು ದೇವಾಲಯದ ಅವಶ್ಯಕವಾದ ಭಾಗಗಳಲ್ಲಿ ಒಂದಾಗಿದೆ. ಇದು ದೇವರಿಗೆ ನೈವೇದ್ಯದ ಪದಾರ್ಥಗಳನ್ನು ಪರಿವಾರ ದೇವತೆಗಳಿಗೆ ಇಡಲು ಬಳಸುವ ಪೀಠ. ಗರ್ಭಗುಡಿಯ ಮೇಲಿರುವ ವಿಮಾನವು ಗರ್ಭಗೃಹದ ಎದುರಾಗಿರುವ ಬಲಿಪೀಠವು ಒಂದೇ ಆಗಿದ್ದು ಈ ಎರಡರಲ್ಲೂ ದೇವತೆಗಳು ಒಂದುಕಡೆ ಸೇರುತ್ತಾರೆ ಎಂಬ ಕಾರಣವು ನಾರಾಯಣ ಸಂಹಿತೆಯಲ್ಲಿ ದೊರೆಯುತ್ತದೆ.[೧೦] ಹಾಗೆಯೇ ಮನುಷ್ಯನ ದೇಹರಚನೆಯನ್ನು ಹೋಲುತ್ತದೆ. ಈ ಹಿನ್ನಲೆಯಲ್ಲಿ ಬಲಿಪೀಠದ ಸ್ಥಾನವು 'ನಾಭಿ' ಹೇಗೆ ಮನುಷ್ಯನ ಭೌತಿಕ ಇರುವಿನ ಕೇಂದ್ರ ಸ್ಥಾನವೋ ಹಾಗೆಯೇ

ಬಲಿಪೀಠವು ದೇವಾಲಯದ ಭೌತಿಕ ಸ್ವರೂಪದ ಕೇಂದ್ರಸ್ಥಾನವಾಗಿದೆ.[೧೧] ಗರ್ಭಗೃಹದ ಪ್ರಮಾಣಕ್ಕೆ ೧/೫, ೧/೭, ಅಥವಾ ೧/೮ ಭಾಗದಷ್ಟು ಬಲಿಪೀಠ ಇರುವುದರ ಜೊತೆಗೆ ಬಲಿಪೀಠಗಳ ಗಾತ್ರ ಹಾಗೂ ವಿನ್ಯಾಸಗಳಲ್ಲಿ ಶ್ರೀಬಂಧ, ಪದ್ಮಬಂಧ, ಶ್ರೀಭದ್ರ, ಸರ್ವತೋಭದ್ರ ಮೊದಲಾದ ಭಾಗಗಳನ್ನು ಸೂಚಿಸುತ್ತಾರೆ.[೧೨] ವಿಮಾನದ ರಚನೆಯ ವಿನ್ಯಾಸದಂತೆ ಬಲಿಪೀಠಗಳು ಸಹ ಚಚ್ಚೌಕವಾಗಿ, ಬಹುಭುಜಾಕೃತಿಯಾಗಿ ಇಲ್ಲವೇ ವೃತ್ತಾಕಾರದಲ್ಲಿ ಇರುವುದನ್ನು ಕಾಣಬಹುದು. ರಂಗನಾಥ ದೇವಾಲಯದಲ್ಲಿ ಬಲಿ ಪೀಠಗಳು ಕಡ್ಡಾಯವಾಗಿಯೆ ಕಂಡುಬಂದಿವೆ. ಬಹುಪಾಲು ಬಲಿಪೀಠಗಳು ಬಲಿಕಲ್ಲುಗಳಾಗಿವೆ. ಸ್ತಂಭದ ರೀತಿಯಲ್ಲಿ ತೋರಿಸಿದ್ದಾರೆ. ವಿಶೇಷವಾಗಿ ರಂಗಸ್ಥಳದ ರಂಗನಾಥ ದೇವಾಲಯದ ಬಲಿಪೀಠದ ಎತ್ತರ ಸುಮಾರು ೫ ಅಡಿ ಇದ್ದು, ಕೆಳಗಿನ ರಚನೆಯು ಅಷ್ಟಭುಜಗಳನ್ನು ಹೊಂದಿದ್ದು ಮೇಲೆ ಹೋದಂತೆ ವೃತ್ತಾಕಾರವನ್ನು ಹೊಂದಿವೆ.

**ಧ್ವಜಸ್ತಂಭ :**

ಗರ್ಭಗೃಹ ಮತ್ತು ಬಲಿಪೀಠದ ನಡುವೆ ಇರುತ್ತದೆ. ಗರ್ಭಗೃಹಕ್ಕೆ ಅಭಿಮುಖವಾಗಿರುವ ಧ್ವಜವನ್ನು ಕಟ್ಟಲು ಬಳಸುವ ಸ್ತಂಭ. ಇದನ್ನು ಮರ ಅಥವಾ ಲೋಹದಿಂದ ಮಾಡಲಾಗುತ್ತದೆ. ಮರದ ಸ್ತಂಭವಾಗಿದ್ದಲ್ಲಿ ಅದನ್ನು ಲೋಹದ ತಗಡಿನಿಂದ ಮುಚ್ಚಲಾಗಿರುತ್ತದೆ. ಉದಾಹರಣೆಗೆ ಶ್ರೀರಂಗಪಟ್ಟಣ, ದಾವಣಗೆರೆ ಜಿಲ್ಲೆ ಹಂಪನೂರ ರಂಗನಾಥ ದೇವಾಲಯಗಳಲ್ಲಿ ನೋಡಬಹುದು. ರಂಗಸ್ಥಳದ ರಂಗನಾಥ ದೇವಾಲಯದ ಆವರಣದಲ್ಲಿರುವ ಧ್ವಜಸ್ತಂಭ ಕಲ್ಲಿನ ಪೀಠವಿದ್ದು ಸ್ತಂಭದ ಭಾಗವು ಮರದಲ್ಲಿ ರಚಿಸಲಾಗಿದೆ.

**ದೀಪಸ್ತಂಭ :**

ದೀಪಸ್ತಂಭವನ್ನು ಪೀಠ, ದಂಡ, ಗ್ರೀವ, ಎಂದು ಮೂರು ಭಾಗಗಳನ್ನಾಗಿ ವಿಂಗಡಿಸಬಹುದು. ಸ್ತಂಭದ ದಂಡದ ಭಾಗವು ಚೌಕಾಕಾರದ ಭಾಗ ಮತ್ತು ಅಷ್ಟಭುಜದ ಭಾಗವನ್ನು ಮಾತ್ರ ಹೊಂದಿರುತ್ತದೆ. ಸ್ತಂಭದ ಗ್ರೀವದ ಭಾಗದಲ್ಲಿ ಘಟ, ಫಲಕ, ಪೋಟಿಕಾ ಮತ್ತು ಬಲಿಪೀಠ ಎಂಬ ರಚನೆಗಳಿರುವುದನ್ನು ಕಾಣುತ್ತೇವೆ.[೧೩] ದೇವಾಲಯದ ವಿಶೇಷ ಧಾರ್ಮಿಕ ಕಾರ್ಯದ ದಿನಗಳಲ್ಲಿ ದೀಪ ಹಚ್ಚಲು ಅನುಕೂಲವಾಗುತ್ತವೆ. ರಂಗನಾಥ ದೇವಾಲಯದಲ್ಲಿ ದೀಪಸ್ತಂಭಗಳು ಏಕ ಶಿಲಾಸ್ತಂಭಗಳಾಗಿವೆ ಮತ್ತು ರಚನೆಯಲ್ಲಿ ಏಕತೆಯಿಂದ ಕೂಡಿದ್ದು, ಎತ್ತರದಲ್ಲಿ ವ್ಯತ್ಯಾಸ ಗೊಳ್ಳುತ್ತವೆ.

**ಉಯ್ಯಾಲೆ ಸ್ತಂಭ :**

ಸುಮಾರು ೨೦ ರಿಂದ ೩೦ ಅಡಿ ಎತ್ತರದ ಕಂಭಗಳಿಂದ ಎರಡು ಕಂಭಗಳ ಆಧಾರದ ಮೇಲೆ ಮತ್ತೊಂದು ಚಪ್ಪಡಿಯನ್ನು ಇಟ್ಟು ಇದಕ್ಕೆ ಸರಪಳಿಯನ್ನು ಹೊಂದಿದ ಉಯ್ಯಾಲೆಯನ್ನು

ತೂಗುಬಿಟ್ಟಿರುತ್ತಾರೆ. ದೇವರ ಡೋಲೋತ್ಸವಕ್ಕೆ ನಿರ್ಮಿಸಿರುವ ಈ ಸ್ತಂಭವನ್ನು ಉಯ್ಯಾಲೆ ಸ್ತಂಭವೆಂದು ಕರೆಯುತ್ತಾರೆ. ದೇವಾಲಯದ ವಿಶೇಷ ದಿನಗಳಲ್ಲಿ ದೇವರ ಮೂರ್ತಿಯನ್ನು ಕೂರಿಸಿ ಆಡಿಸುವ ಪದ್ಧತಿ ಇದೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆ, ಹೊರಕೆರೆದೇವರಪುರ, ಶಿವನಸಮುದ್ರ ಮುಂತಾದ ರಂಗನಾಥ ದೇವಾಲಯದಲ್ಲಿ ಬಹಳ ಎತ್ತರವಾದ ಉಯ್ಯಾಲೆ ಸ್ತಂಭಗಳಿವೆ.

**ಪರಿವಾರ ದೇವತೆಗಳು ಪರಿವಾರಾಲಯಗಳು :**

ಮೂಲ ದೇವರಿಗೆ ಸಂಬಂಧಿಸಿದಂತೆ ಉತ್ತರ (ವಾಯವ್ಯ) ಭಾಗದಲ್ಲಿ ಅಂದರೆ ಮೂಲ ದೇವರದ ಎಡಭಾಗದಲ್ಲಿ ಸ್ತ್ರೀ ದೇವತೆಯ ಆಲಯವನ್ನು ನಿರ್ಮಿಸುವುದು ವಿಜಯನಗರ ಕಾಲದಿಂದಲೂ ಹೆಚ್ಚಿಗೆ ಪ್ರಸಿದ್ಧಿಗೆ ಬಂದಿತು. ಈ ರೀತಿಯ ರಚನೆ ಶ್ರೀರಂಗಪಟ್ಟಣ, ಶಿವನಸಮುದ್ರ ರಂಗನಾಥ ದೇವಾಲಯಗಳಲ್ಲಿ ಕಾಣಬಹುದು. ದಾವಣಗೆರೆ ಜಿಲ್ಲೆಯ ದೇವರಹಳ್ಳಿ ರಂಗನಾಥ ದೇವಾಲಯದಲ್ಲಿ ಮೂಲದೇವರಿಗೆ ವಿರುದ್ಧವಾಗಿ ಲಕ್ಷ್ಮೀ ಅಮ್ಮನವರ ದೇವಾಲಯವನ್ನು ನಿರ್ಮಿಸಿರುವುದು ಕಂಡುಬರುತ್ತದೆ.

**ಪ್ರಾಕಾರ :**

ಪ್ರಾಕಾರ, ಆವರಣ, ಸಾಲ, ನಿಹಾರ, ಕೋಶ ಎಂಬ ಹೆಸರುಗಳನ್ನು ಪಡೆದ ಪ್ರಾಕಾರವು ದೇವಾಲಯದ ರಕ್ಷಣೆಗೆ ನಿರ್ಮಿಸಲಾಗುತ್ತದೆ. ಇದರಿಂದ ಪರಿವಾರ ದೇವಾಲಯಗಳಿಗೆ, ದೇವಾಲಯದ ಸುತ್ತ ಭಕ್ತರು ಪ್ರದಕ್ಷಿಣೆ ಬರಲು ಮತ್ತು ಉತ್ಸವ ಮೂರ್ತಿಗಳ ಮೆರವಣಿಗೆ ಮಾಡಲು ಅನೂಕೂಲವಾಗುವುದು. ಚಿತ್ರದುರ್ಗ ಜಿಲ್ಲೆಯ ಅಂಬಲಗೆರೆ, ನೀರ್ಥಡಿ, ದಾವಣಗೆರೆ ಜಿಲ್ಲೆಯ ಹಂಪನೂರ, ರಾಯಚೂರ ಜಿಲ್ಲೆಯ ಯರಗೇರಾ, ಚಿಕ್ಕಬಳ್ಳಾಪುರ ಜಿಲ್ಲೆಯ ರಂಗಸ್ಥಳ, ಶ್ರೀರಂಗಪಟ್ಟಣ, ಶಿವನಸಮುದ್ರ ಮುಂತಾದ ರಂಗನಾಥ ದೇವಾಲಯಗಳು ವಿಸ್ತಾರವಾದ ಪ್ರಾಕಾರವನ್ನು ಹೊಂದಿವೆ. ಪ್ರಾಕಾರದ ಮಧ್ಯಭಾಗದಲ್ಲಿರುವ ಪ್ರವೇಶ ದ್ವಾರವು ಮಹಾದ್ವಾರವಾಗಿದೆ. ಮಹಾದ್ವಾರವು ಗರ್ಭಗೃಹಕ್ಕೆ ಎದುರಾಗಿಯೂ ಇಲ್ಲವೆ ಪ್ರಾಕಾರದ ನಾಲ್ಕು ದಿಕ್ಕಿನಲ್ಲೂ ದ್ವಾರಗಳಿರುತ್ತವೆ. ಇವುಗಳ ಮೇಲೆ ಎತ್ತರವಾಗಿ ಗೋಪುರಗಳನ್ನು ಕಟ್ಟಲಾಗಿರುತ್ತದೆ. ಈ ಗೋಪುರಗಳನ್ನು ಇಟ್ಟಿಗೆ–ಗಾರೆಗಳಿಂದ ಕಟ್ಟಿದ್ದು, ಅದರಲ್ಲಿರುವ ಶಿಲ್ಪಗಳನ್ನು ಸುಣ್ಣ ಅಥವಾ ಗಾರೆ ಗಚ್ಚಿನಿಂದ ಮಾಡಲಾಗಿರುತ್ತದೆ.

ಹೀಗೆ ದೇವಾಲಯಗಳ ವಿವಿಧ ಭಾಗಗಳು ರಚನೆಗೊಂಡಿದ್ದು, ಮೂಲಬೇಟೆರಂಗನ ಜೊತೆಯಲ್ಲಿ ಶಿಷ್ಟ ರಂಗನಾಥನವರೆಗೂ ಬೆಳೆದುಬಂದು ಪ್ರಸ್ತುತ ಕರ್ನಾಟಕದ ೨೨ ಜಿಲ್ಲೆಗಳಲ್ಲಿ ನೆಲೆಗೊಂಡಿವೆ. ೨೭೪ ದೇವಾಲಯಗಳನ್ನು ಕ್ಷೇತ್ರಕಾರ್ಯ ಕೈಗೊಂಡು ದಾಖಲಿಸಿಕೊಳ್ಳಲಾಗಿದ್ದು, ಮುಖ್ಯವಾಗಿ ಕೆಲವು ದೇವಾಲಯಗಳ ವಿವರಣೆಯನ್ನು ಕೆಳಕಂಡಂತೆ ನೀಡಲಾಗಿದೆ.

**ಶ್ರೀರಂಗಪಟ್ಟಣ ರಂಗನಾಥಸ್ವಾಮಿ ದೇವಾಲಯ :**

ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲೂಕಿನ ಶ್ರೀರಂಗಪಟ್ಟಣದ ಶ್ರೀರಂಗನಾಥಸ್ವಾಮಿ ದೇವಾಲಯವು ಐತಿಹಾಸಿಕ ಮಹತ್ವವನ್ನು ಪಡೆದ ಸ್ಥಳವಾಗಿದೆ. ಪ್ರಸ್ತುತ ದೇವಾಲಯವು ಹಂತಹಂತವಾಗಿ ವಿವಿಧ ಅರಸುಮನೆತನಗಳ ಆಶ್ರಯದಲ್ಲಿ ಬೆಳೆದು ಬಂದಿರುವುದು ಕಂಡುಬರುತ್ತದೆ. ಇದರ ಮೂಲ ನಿರ್ಮಾಣದ ಬಗ್ಗೆ ಈವರೆಗೂ ವಿದ್ವಾಂಸರಲ್ಲಿ ಸ್ಪಷ್ಟ ನಿಲುವುಗಳಿಲ್ಲ. ಕ್ರಿ.ಶ. ೮೯೪ ರಲ್ಲಿ ಇಂದಿನ ಶ್ರೀರಂಗನಾಥ ದೇವಾಲಯವನ್ನು ಗಂಗರ ಕಾಲದಲ್ಲಿ ತಿಮ್ಮಣ್ಣ ಅಥವಾ ತಿರುಮಲ ನೆಂಬಾತ ಕಟ್ಟಿಸಿದನೆಂದು ಪ್ರತೀತಿ ಇದೆ. ವಾಸ್ತವವಾಗಿ ಇದಕ್ಕೂ ಹಿಂದೆ ಕ್ರಿ.ಶ. ೬೮೪ ಅಥವಾ ಕ್ರಿ.ಶ. ೯೯೪ ರ ವೇಳೆಗಾಗಲೇ ಅಲ್ಲೊಂದು ರಂಗನಾಥ ದೇವಾಲಯದ ಸಣ್ಣ ಗುಡಿಯಿತ್ತೆಂದೂ ಕ್ರಿ.ಶ. ೮೧೭ ರ ವೇಳೆಗೆ 'ಹಂಬಿ' ಎನ್ನುವ ಮಹಿಳೆ ಆ ಗುಡಿಯನ್ನು ವಿಸ್ತರಿಸಿ ಕಟ್ಟಿಸಿದಳೆಂದು ಅಭಿಪ್ರಾಯಿಸುತ್ತಾರೆ. ಮುಂದೆ ತಿರುಮಲಯ್ಯನೆಂಬಾತ ದೇವಾಲಯಕ್ಕೊಂದು ನವರಂಗ ಮಂಟಪವನ್ನು ಸೇರಿಸಿದನೆಂದು, ವಿಜಯನಗರದ ರಾಜಪ್ರತಿನಿಧಿಯಾಗಿದ್ದ ಶ್ರೀರಂಗರಾಯನು ದೇವಾಲಯದ ಒಳ ಪ್ರಾಕಾರವನ್ನು ಕಟ್ಟಿಸಿ, ದೇವಾಲಯವನ್ನು ವಿಸ್ತರಿಸಿದನೆಂದು ತಿಳಿದು ಬರುತ್ತದೆ. ಮುಂದೆ ಹೊಯ್ಸಳ ವಿಷ್ಣುವರ್ಧನನ ತಮ್ಮ ಉದಯಾದಿತ್ಯ ಕ್ರಿ.ಶ. ೧೧೨೦ ರವೆಳೆಗೆ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೧೧೩೩ ರ ವೇಳೆಗೆ ಜನವಸತಿ ಹೆಚ್ಚುವಂತೆ ಮಾಡಿದನು. ಅಂದಿನಿಂದ ಶ್ರೀರಂಗಪಟ್ಟಣಕ್ಕೆ ಒಂದು ಪ್ರಮುಖ ಕ್ಷೇತ್ರದ ಸ್ವರೂಪ ಬಂದಿತೆಂದು ತಿಳಿದುಬರುತ್ತದೆ. ಅಲ್ಲದೆ ದೇವಾಲಯಕ್ಕೆ ಸಂಬಂಧಿಸಿದಂತೆ ವಿಜಯನಗರದ ಅರಸರ ಅನೇಕ ಶಾಸನಗಳು ಕಂಡುಬಂದಿದ್ದು, ದೇವಾಲಯಕ್ಕೆ ದಾನ ದತ್ತಿ ನೀಡಿರುವುದರ ಬಗ್ಗೆ ತಿಳಿಸಿಕೊಡುತ್ತವೆ. ಮುಂದುವರೆದು ಮೈಸೂರು ಒಡೆಯರು ಮತ್ತು ಟೀಪ್ಪುವಿನ ಕಾಲದಲ್ಲಿ ದೇವಾಲಯಕ್ಕೆ ಅನೇಕ ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ. ಹೀಗಾಗಿ ದೇವಾಲಯದ ವಾಸ್ತು ಲಕ್ಷಣದ ಆಧಾರದ ಮೇಲೆ ಐದು ಹಂತಗಳನ್ನು ಗುರುತಿಸಬಹುದಾಗಿದೆ. ಮೊದಲನೆ ಹಂತದಲ್ಲಿ ಹಂಬಿಯಿಂದ ದೇವಾಲಯ ನಿರ್ಮಾಣಗೊಂಡು, ದ್ವಿತೀಯ ಹಂತದಲ್ಲಿ ಗಂಗನಾಯಕ ತಿರಮಲಯ್ಯನಿಂದ ಜೀರ್ಣೋದ್ಧಾರಗೊಂಡಿತು. ಮೂರನೆಯ ಹಂತದಲ್ಲಿ ಗಂಗರು ಮತ್ತು ಹೊಯ್ಸಳರ ಕಾಲವಧಿಯಲ್ಲಿ ಗರ್ಭಗೃಹ ಮತ್ತು ಸುಖನಾಸ ಮತ್ತು ಅದರ ಮುಂದಿನ ನವರಂಗ ನಿರ್ಮಾಣವಾಗಿರುವುದು ಕಂಡುಬರುತ್ತದೆ. ನಂತರದಲ್ಲಿ ವಿಜಯಗನರ ಕಾಲದಲ್ಲಿ ನವರಂಗದ ಮುಂದಿನ ಮುಖಮಂಟಪ ಸಭಾಮಂಟಪವಾಗಿ ಪರಿವರ್ತನೆಯಾಗಿ ಅದಕ್ಕೆ ಹೊಂದಿಕೊಂಡಂತೆ ಸುತ್ತಾಲಯಗಳು ಮತ್ತು ವಾಯುವ್ಯದ ಮೂಲೆಯಲ್ಲಿ ರಂಗನಾಯಕಿ ಅಮ್ಮನ ಪ್ರತ್ಯೇಕವಾದ ಆಲಯವನ್ನು ನಿರ್ಮಿಸಿಕೊಂಡು ಪ್ರಕಾರದ ಗೋಡೆಯನ್ನು ಪಡೆದುಕೊಂಡಿತು. ಇದೇ ಕಾಲಾವಧಿಯಲ್ಲಿ ಎರಡನೆಯ ಪ್ರಕಾರದ ಗೋಡೆ ಮತ್ತು ರಾಜಗೋಪುರವನ್ನು ನಿರ್ಮಿಸಲಾಯಿತು. ನಂತರದ ನಾಲ್ಕನೆಯ ಹಂತದಲ್ಲಿ

ವಿಜಯನಗರೋತ್ತರ ಕಾಲದಲ್ಲಿ ಇಂದಿನ ಮುಖಮಂಟಪದ ಭಾಗ ನಿರ್ಮಾಣಗೊಂಡಿರುವುದು ಕಂಡುಬರುತ್ತದೆ.

ದೇವಾಲಯವು ದ್ರಾವಿಡ ಶೈಲಿಯಲ್ಲಿದೆ. ಮೂರು ಪ್ರಾಕಾರಗಳನ್ನು ಹೊಂದಿದ್ದು ಮೂರು ಹಂತಗಳಲ್ಲಿ ದೇವಾಲಯವನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಗರ್ಭಗೃಹದ ಒಳಭಾಗವು ಮತ್ತು ದೇವಾಲಯದ ಹೆಚ್ಚಿನ ಒಳಭಾಗವು ಹೊಯ್ಸಳ ಶೈಲಿಯ ವಾಸ್ತುಲಕ್ಷಣಗಳನ್ನು ಹೊಂದಿದೆ. ಇದರ ಅಧಿಷ್ಠಾನವು ಕಲಶಬಂಧ ಅಧಿಷ್ಠಾನವನ್ನು ಹೊಂದಿದ್ದು ಸುತ್ತಲೂ ಹೊಯ್ಸಳ ತೋರಣ, ಸ್ತಂಭಪಂಜರವನ್ನು ಹೊಂದಿದೆ. ಗರ್ಭಗೃಹ ಮತ್ತು ಸುಖನಾಸಿಗಳ ಛಾವಣಿಗಳ ನಡುವೆ ಪದ್ಮಗಳನ್ನು ಬಿಡಿಸಲಾಗಿದೆ. ಗರ್ಭಗೃಹದಲ್ಲಿ ಶ್ರೀರಂಗನಾಥನು ಐದು ಹೆಡೆಗಳುಳ್ಳ ಸರ್ಪ ಪರ್ಯಂಕನದ ಮೇಲೆ ಪವಡಿಸಿದ್ದಾನೆ. ದೇಹದ ಶೀರೋಭಾಗವು ಮಾತ್ರ ಸ್ವಲ್ಪ ಮೇಲೆತ್ತಿದ್ದು ಬಲಗೈಗೊಂದು ತಲೆಗೆ ದಿಂಬಿನಂತೆ ಆಸರೆಯಾಗಿದೆ. ಸರ್ವಾಲಂಕಾರ ಭೂಷಿತನಾದ ವಿಷ್ಣುವಿನ ಬಳಿ ಲಕ್ಷ್ಮೀಯು ಪಾದಸೇವೆಯಲ್ಲಿ ತೊಡಗಿರುವಂತೆ ತೋರುತ್ತದೆ. ಇದು ಕಾವೇರಿಯ ಶಿಲ್ಪವು ಎನ್ನುವ ಅಭಿಪ್ರಾಯವು ಇದೆ.

ನವರಂಗದ ದ್ವಾರದ ಇಕ್ಕೆಲದಲ್ಲಿ ಎರಡು ದ್ವಾರಪಾಲಕರ ಶಿಲ್ಪಗಳಿವೆ. ಚರ್ತುವಿಂಶತಿ ವಿಷ್ಣುವಿನ ಮೂರ್ತಿಗಳನ್ನು ಕೆತ್ತಿರುವ ಎರಡು ಕಂಬಗಳು ವಿಶೇಷವಾಗಿವೆ. ಅಲ್ಲದೆ ವಿಜಯನಗರ ಕಾಲದ ಗಂಟೆ ಮಾದರಿಯ ಕಂಬಗಳಿವೆ. ಗರ್ಭಗೃಹವನ್ನು ಪ್ರದಕ್ಷಿಣವಾಗಿ ಬರಲು ನವರಂಗದಲ್ಲಿನ ಉಭಯ ಪಾರ್ಶ್ವದಲ್ಲೂ ದ್ವಾರವಿರುವುದು. ಇದರಿಂದ ಗರ್ಭಗೃಹವನ್ನು ಪ್ರದಕ್ಷಿಣೆ ಗೈಯಬಹುದು. ನವರಂಗವು ೨೫ ಅಂಕಣಗಳಿಂದ ೩೨ ಅಂಕಣಗಳನ್ನೊಳಗೊಂಡು ಚತುರಶ್ರವಾಗಿರುವುದು. ಕಂಭಗಳಲ್ಲಿ ವಿಶೇಷ ಅಲಂಕಾರಗಳೇನೂ ಇರುವುದಿಲ್ಲ. ನವರಂಗದ ಹೊರಗೆ ಬಂದರೆ ದ್ವಿತಿಯ ಪ್ರಾಕಾರ ದೊರೆಯುತ್ತದೆ.

ನವರಂಗದ ಹೊರಕ್ಕೆ ಬರುವ ದ್ವಾರದ ಇಕ್ಕೆಲಗಳಲ್ಲಿ ಎರಡು ದ್ವಾರಪಾಲಕರ ಶಿಲ್ಪಗಳಿವೆ. ಅಲ್ಲಿಂದ ಪ್ರದಕ್ಷಿಣವಾಗಿ ಹೊರಟರೆ ದಕ್ಷಿಣ, ಪಶ್ಚಿಮ, ಉತ್ತರ ಪ್ರಾಕಾರವು ಮೇಲಛಾವಣಿಯಿಂದ ಮುಚ್ಚಲ್ಪಟ್ಟಿರುವುದು. ಇಲ್ಲಿ ಧ್ವಜಸ್ತಂಭ, ಬಲಿಪೀಠಗಳಿರುವುದು ಕಂಡುಬರುತ್ತದೆ.

ವಾಯವ್ಯ ಮೂಲೆಯಲ್ಲಿ ಶ್ರೀ ಲಕ್ಷ್ಮೀರಂಗನಾಯಕೀ ಅಮ್ಮನವರ ಸನ್ನಿಧಿ ದೊರೆಯುತ್ತದೆ. ಇದು ಗರ್ಭಗೃಹ, ಶುಕನಾಸಿ, ಮುಂದೆ ಕೈಸಾಲೆ, ಮಂಟಪದಿಂದ ಕೂಡಿರುವುದು ಅಮ್ಮನವರ ಶುಕನಾಸಿ ಸ್ಥಳದ ಎಡಭಾಗದಲ್ಲಿ ಚಿಕ್ಕದಾದ ನೆಲಮಾಳಿಗೆ ಇರುವುದು.

ಮುಂದೆ ಬರುವಾಗ ದೇವಾಲಯದ ಉತ್ತರಭಾಗ ಅಂದರೆ ಎಡಭಾಗಕ್ಕೆ ಉದ್ದಕ್ಕೂ ಆಳ್ವಾರ ಸನ್ನಿಧಿ, ಶ್ರೀರಾಮನುಜನರು, ಅವರ ಪಕ್ಕದಲ್ಲಿ ವೇದಾಂತ ದೇಶಿಕರ ಸನ್ನಿದಿ, ಅವರ ಪಕ್ಕದಲ್ಲಿ

ಯಾಗಶಾಲೆ ಇರುವುದು. ಶ್ರೀನಿವಾಸಸ್ವಾಮಿ ದೇವಾಲಯ, ಬಲಭಾಗದಲ್ಲಿ ವೈಕುಂಠನಾಥ ಸ್ವಾಮಿಯ ಮೂರ್ತಿ ಪ್ರತಿಷ್ಠಾಪಿತವಾಗಿರುವುದು ಕಂಡುಬರುತ್ತದೆ. ಎರಡನೇ ಪ್ರಾಕಾರದಿಂದ ಮುಂದೆ ಬಂದರೆ ಮೂರನೆ ಪ್ರಕಾರದ ವಿಶಾಲವಾದ ಮಂಟಪಕ್ಕೆ ಬರಲಾಗುತ್ತದೆ. ಈ ಮಂಟಪವು ವಿಶಾಲವಾಗಿದ್ದು ಎತ್ತರವೂ, ಚತುರಶ್ರವೂ ಆದ ೩೦ ಸ್ತಂಭಗಳಿಂದ ಕೂಡಿರುವುದು. ಈ ಮಂಟಪದ ಮಧ್ಯದಲ್ಲಿ ದೀಪಸ್ತಂಭವಿರುವುದು. ಇಲ್ಲಿಂದ ಪ್ರದಕ್ಷಿಣವಾಗಿ ಬಂದರೆ ಆಗ್ನೇಯ ಮೂಲೆಯಲ್ಲಿ ಪಾಕಶಾಲೆ, ಅದರ ಪಕ್ಕದಲ್ಲಿ ರಾಮಾನುಜಕೂಟ, ಅಲ್ಲಿಂದ ಮುಂದೆ ಬಂದರೆ ವಾಯವ್ಯ ಭಾಗದಲ್ಲಿ ಪ್ರಸನ್ನ ವೆಂಕಟರಮಣಸ್ವಾಮಿ ಸನ್ನಿಧಿ ಇದೆ. ಮುಂದೆ ಈಶಾನ್ಯ ಮೂಲೆಯಲ್ಲಿ ವಸಂತ ಮಂಟಪವಿರುವುದು. ಗೋಪುರವು ಆಯತಚತುರಾಶ್ರವಾಗಿದ್ದು, ಮೇಲೆ ಹೋಗುತ್ತಾ ಕಿರಿದಾಗುತ್ತದೆ. ಐದು ಅಂತಸ್ತುಗಳಿಂದಲೂ, ಐದು ದ್ವಾರಗಳಿಂದಲೂ ನಿರ್ಮಿಸಲ್ಪಟ್ಟಿರುವುದು. ಕರ್ಣಕೂಟ, ಹಾರ, ಪಂಜರ, ಶಾಲ, ಗಳ ಅಲಂಕಾರದಿಂದ ಕೂಡಿದೆ.

ಮುಖ್ಯವಾಗಿ ದೇವಾಲಯದಲ್ಲಿ ಕಂಡುಬರುವ ಮೂರ್ತಿಗಳಲ್ಲಿ ಅತೀ ಪ್ರಾಚೀನವಾದುದು ರಂಗನಾಥ ಮೂರ್ತಿಶಿಲ್ಪವಾಗಿದೆ. ಆದರೆ ದೇವಾಲಯದಲ್ಲಿರುವ ಬಹುತೇಕ ಮೂರ್ತಿಶಿಲ್ಪಗಳು ವಿಜಯನಗರ ಕಾಲದವೆಂದು ಖಚಿತವಾಗುತ್ತದೆ. ಮುಖ್ಯವಾಗಿ ಗರುಡನ ವಿಗ್ರಹ, ಪ್ರಾಣದೇವರು ವಿಗ್ರಹ, ಒಳಗುಡಿಯ ವೆಂಕಟರಮಣ, ಪ್ರಸನ್ನ ವೆಂಕಟರಮಣ, ಸ್ವರ್ಗದ ಬಾಗಿಲು ವೆಂಕಟರಮಣ, ರಂಗನಾಯಕಿ ಅಮ್ಮನವರು, ಸುದರ್ಶನ ಆಳ್ವಾರ, ಗೋಪಾಲಕೃಷ್ಣ ಮುಂತಾದ ಮೂರ್ತಿಶಿಲ್ಪಗಳು ವಿಜಯನಗರ ಕಾಲದ ರಚನೆಗಳಾಗಿರುವುದು ಕಂಡುಬರುತ್ತದೆ. ಆದರೆ ಈ ಎಲ್ಲ ಶಿಲ್ಪಗಳು ವಿಶೇಷವೆನಿಸುವ ಶಿಲ್ಪ ಸೌಂದರ್ಯವನ್ನು ತಮ್ಮದಾಗಿಸಿಕೊಂಡಿಲ್ಲದಿರುವುದು ಗೋಚರಿಸುತ್ತದೆ. ಅಲ್ಲದೆ ಪಟ್ಟಾಭಿರಾಮ, ಕೋದಂಡರಾಮ ಮುಂತಾದ ಸುತ್ತಾಲಯದ ವಿಗ್ರಹಗಳು ಮೈಸೂರು ಒಡೆಯರ ಕಾಲದಲ್ಲಿ ರಚಣೆಯಾಗಿರುವುವೆಂದು ಅಭಿಪ್ರಾಯಿಸಲಾಗಿದೆ.

**ರಂಗಸ್ಥಳ ರಂಗನಾಥಸ್ವಾಮಿ ದೇವಾಲಯ :**

ರಂಗಸ್ಥಳ ಒಂದು ಪ್ರಮುಖ ಕ್ಷೇತ್ರವಾಗಿದ್ದು, ಚಿಕ್ಕಬಳ್ಳಾಪುರ ಜಿಲ್ಲೆ ಚಿಕ್ಕಬಳ್ಳಾಪುರ ತಾಲೂಕಿನಿಂದ ೬ ಕಿ.ಮೀ. ದೂರದಲ್ಲಿ ಇರುವ ಜ್ವಾಲಾನರಸಿಂಹ ಸ್ವಾಮಿ (ಕಲವರ) ಬೆಟ್ಟದ ಪಾದದಲ್ಲಿ ಇದೆ. ಕರ್ನಾಟಕದಲ್ಲಿ ಇರುವ ರಂಗನಾಥ ದೇವಾಲಯಗಳಲ್ಲಿ ಈ ದೇವಾಲಯವೊಂದೆ ವಾಸ್ತು ಮತ್ತು ಶಿಲ್ಪಕಲೆಯ ದೃಷ್ಟಿಯಿಂದ ಮಹತ್ವ ಪಡೆದುಕೊಂಡಿದೆ. ವಿಶಾಲವಾದ ಪ್ರಾಂಗಣದ ಮಧ್ಯಬಾಗದಲ್ಲಿ ದೇವಾಲಯವನ್ನು ನಿರ್ಮಿಸಲಾಗಿದೆ. ದಕ್ಷಿಣಾಭಿಮುಖವಾದ ದೇವಾಲಯ ಆಯತಾಕಾರದ ಗರ್ಭಗೃಹ, ಅದೇ ಆಕಾರದ ಅಂತರಾಳ, ವಿಶಾಲವಾದ ನವರಂಗ, ಇನ್ನೂ ವಿಶಾಲವಾದ ರಂಗಮಂಟಪ ಮತ್ತು ರಂಗಪಂಟಪವನ್ನು ಮೂರು ದಿಕ್ಕಿನಲ್ಲೂ ಆವರಿಸಿರುವ ಪಾತಾಳಾಂಕಣ

ಹೊಂದಿದೆ. ದೇವಾಲಯದ ಸುತ್ತಲೂ ಎತ್ತರವಾದ ಪ್ರಾಕಾರವಿದೆ. ಪ್ರಾಕಾರಕ್ಕೆ ನಾಲ್ಕು ದಿಕ್ಕುಗಳಲ್ಲಿ ಮಧ್ಯಭಾಗದಲ್ಲಿ ಪ್ರವೇಶ ದ್ವಾರವಿದೆ. ಇವುಗಳಲ್ಲಿ ದಕ್ಷಿಣದ ಪ್ರವೇಶ ದ್ವಾರ ದೇವಾಲಯದ ಮುಖ್ಯ ದ್ವಾರವಾಗಿದೆ. ಪ್ರಾಕಾರದ ಒಳ ಮಂಟಪವು ಕಂಬದ ಸಾಲುಳ್ಳ ಕೈಸಾಲೆಯ ಸುತ್ತಲೂ ಇದೆ.

ಪ್ರಸ್ತುತ ರಂಗಸ್ಥಳದ ದೇವಾಲಯದ ಗರ್ಭಗೃಹದ ತಳವಿನ್ಯಾಸ ವೃತ್ತಾಯತ ತಳವಿನ್ಯಾಸಕ್ಕೆ ಒಂದು ಪ್ರಶಸ್ತ ಹಾಗೂ ಒಂದು ಸ್ಪಷ್ಟ ನಿದರ್ಶನವಾಗಿದೆ ಎಂದು ಇತಿಹಾಸ ವಿದ್ವಾಂಸರಾದ ಡಾ. ಎಂ. ಎಸ್. ಕೃಷ್ಣಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[೧೪] ಅಲ್ಲದೆ ಇಂತಹ ರಚನೆ ಇದುವರೆಗೆ ಭಾರತದ ಯಾವುದೇ ದೇವಾಲಯಗಳಲ್ಲಿ ಕಂಡುಬಂದಿರುವುದು ವರದಿಯಾಗಿಲ್ಲ ವೆಂದು, ಹೀಗಾಗಿ ಈ ದೇವಾಲಯದ ತಳವಿನ್ಯಾಸ ಅಪೂರ್ವವು ಅದ್ವೀತಿಯವು ಆದ ತಲವಿನ್ಯಾಸವಾಗಿದೆ ಎಂದು ಅಭಿಪ್ರಾಯಿಸುತ್ತಾರೆ.

ತಳವಿನ್ಯಾಸದ ಹೊರ ಆಕೃತಿ ವೃತ್ತಾಯದ ರೂಪದಲ್ಲಿ ಇದೆ. ಆದರೆ ಗರ್ಭಗೃಹದ ಒಳ ಆಕೃತಿ ಮಾತ್ರ ಆಯತಾಕಾರವಿದೆ. ಗರ್ಭಗೃಹದಲ್ಲಿ ಮಧ್ಯದಲ್ಲಿ ಆಯತಾಕಾರದ ಪೀಠದ ಮೇಲೆ ಶಯನ ರಂಗನಾಥನ ಶಿಲ್ಪವಿದೆ.

ಶಯನರೂಪಿ ರಂಗನಾಥನ ತಲೆಯ ಮೇಲೆ ಹೆಡೆ ಬಿಚ್ಚಿದ ಆದಿಶೇಷನಿದ್ದಾನೆ. ರಂಗನಾಥನ ಪಾದದ ಬಳಿಯಲ್ಲಿ ಶ್ರೀದೇವಿ ಭೂದೇವಿಯರು ಆಸೀನರಾಗಿದ್ದಾರೆ. ಇಲ್ಲಿರುವ ಎಲ್ಲ ಲಕ್ಷಣಗಳು ಮುಖ್ಯವಾಗಿ ಶೇಷಶಯನ ಅನಂತಶಯನ ಶಿಲ್ಪದಲ್ಲಿ ಬರುವ ಪ್ರಕಾರಗಳಾಗಿವೆ. ಗರ್ಭಗೃಹದ ವಿಶೇಷತೆಯೆಂದರೆ ಒಳ ಭಿತ್ತಿಯ ಮಧ್ಯಭಾಗದಲ್ಲಿ ಸುತ್ತಲೂ ಪ್ರಧಾನವಾಗಿ ಕಾಣುವಂತೆ ಸಾಲು ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ಸಪ್ತಋಷಿಗಳು, ಕಾಮಧೇನು, ಕಲ್ಪವೃಕ್ಷ, ವಿಷ್ಣುವಿನ ಪಂಚ ಆಯುಧಗಳಾದ ಶಂಖ, ಚಕ್ರ, ಗದಾ, ಖಡ್ಗ, ಧನಸ್ಸು ಇವೆಲ್ಲ ಶಿಲ್ಪಗಳಿದ್ದು, ವೈಕುಂಠದ ಪರಿಕಲ್ಪನೆಯಾಗಿದೆ. ಅಪ್ಸರೆಯರು, ಅಷ್ಟದಿಕ್ಪಾಲಕರು, ಇಂದ್ರ, ಬ್ರಹ್ಮ, ಶಿವ, ಸುದರ್ಶನ, ಶಾರ್ಙ್ಗ ಮುಂತಾದವುಗಳನ್ನು ಇಲ್ಲಿ ಉಬ್ಬುಶಿಲ್ಪಗಳಲ್ಲಿ ಕಂಡರಿಸಲಾಗಿದೆ. ಗರ್ಭಗೃಹಕ್ಕೆ ಪೂರ್ವ ದಿಕ್ಕಿನಲ್ಲಿ ಜಾಲವಾತಾಯನ ತೋರಿಸಲಾಗಿದ್ದು ವಿಶೇಷವಾಗಿದೆ. ಮಕರ ಸಂಕ್ರಾಂತಿಯ ದಿನದಂದು ಸೂರ್ಯೋದಯ ಕಾಲದಲ್ಲಿ ಸೂರ್ಯ ಕಿರಣಗಳು ಈ ಜಾಲಂಧ್ರದ ಮೂಲಕ ಪ್ರವೇಶಿಸಿ ವಿಷ್ಣುವಿನ ಪಾದಗಳನ್ನು ಸ್ಪರ್ಶಿಸುತ್ತವೆ ಎಂದು ಅರ್ಚಕರು ತಿಳಿಸುತ್ತಾರೆ. ಮೂಲವಿಗ್ರಹ ಹಾಗೂ ಭಿತ್ತಿಯ ಸಾಲು ಶಿಲ್ಪಗಳು ವಿಜಯನಗರ ಕಾಲದ ಶಿಲ್ಪಕೆತ್ತನೆಯ ಲಕ್ಷಣಗಳನ್ನು ಪ್ರತಿಬಿಂಬಿಸುತ್ತವೆ. ನಂತರ ಅಂತರಾಳವಿದ್ದು ದ್ವಾರವು ಸುಂದರವಾಗಿದೆ.

ನವರಂಗ ಎರಡು ಕಂಬಳ ಸಾಲುಗಳನ್ನು ಹೊಂದಿದೆ. ಈ ಕಂಬಗಳು ವಿಜಯನಗರ ಕಾಲದ ಚಿತ್ರಖಂಡ ಮಾದರಿಯ ದಿಂಡುಗಳನ್ನು ಪುಷ್ಪಬೋದಿಗೆಯನ್ನು ಹೊಂದಿವೆ. ನವರಂಗದ ಮುಂಭಾಗದ

ರಂಗಮಂಟಪ ಸಾಕಷ್ಟು ವಿಶಾಲವಾಗಿದೆ. ನಾಲ್ಕು ಕಂಬಗಳ ಆರು ಸಾಲುಗಳನ್ನು ಈ ರಂಗ ಮಂಟಪ ಹೊಂದಿದೆ. ಇಲ್ಲಿ ವಿಜಯನಗರ ಶೈಲಿಯ ವಿವಿಧ ಮಾದರಿಯ ಕಂಬಗಳನ್ನು ರಚಿಸಲಾಗಿದೆ. ರಂಗಮಂಟಪದ ಸುತ್ತಲು ಒಂದು ಅಂಕಣ ಆಳದ ಪಾತಾಳಾಂಕಣವಿದೆ. ಪಾತಾಳಾಂಕಣದ ಮುಂದಿನ ಮಧ್ಯದ ಎರಡು ಕಂಬಗಳು ವಿಜಯನಗರ ವಾಸ್ತುಶೈಲಿಯ ಅಮೋಘವಾದ ಕಂಬಗಳಾಗಿವೆ. ಸುಮಾರು ೨೦ ಅಡಿಗಳಷ್ಟು ಎತ್ತರವಾದ ಈ ಕಂಬಗಳು ನೀಳವಾಗಿದ್ದು, ಎರಡು ತಲಗಳಲ್ಲಿ ರಚಿಸಲಾಗಿದೆ. ಮೇಲ ತಲದಲ್ಲಿ ನೆಗೆಯುತ್ತಿರುವ ಸವಾರನನ್ನು ಹೊಂದಿರುವ ಕುದುರೆ, ಅದಕ್ಕೆ ಹೊಂದಿಕೊಂಡಂತೆ ಹುಲಿಯೊಂದಿಗೆ ಸೆಣಸುತ್ತಿರುವ ಯೋಧನೊಬ್ಬನ ಶಿಲ್ಪವಿದೆ. ಕೆಳಹಂತದಲ್ಲಿ ಮೇಲಿನ ರೀತಿಯಲ್ಲೇ ಸವಾರನನ್ನು ಹೊಂದಿರುವ ನೆಗೆಯುತ್ತಿರುವ ಸಿಂಹ, ಅದರ ಕೆಳಗಡೆ ಆನೆಯ ಶಿಲ್ಪವನ್ನು ಕಂಡರಿಸಲಾಗಿದೆ. ಕಂಬದ ದಿಂಡಿನ ಭಾಗ ಚಿತ್ರಖಂಡ ರೀತಿಯದಾಗಿದ್ದು, ಸುತ್ತಲು ಸುಂದರ ಕೆತ್ತನೆಗಳಿವೆ. ಪಾತಾಳಾಂಕಣದ ಕಂಬಗಳು ಪೀಠ, ಎತ್ತರವಾದ ದಿಂಡು, ವಿಶಾಲ ಚಾಚು ಪೀಠಗಳು, ಪುಷ್ಪ ಬೋದಿಗೆ ಇವೆಲ್ಲವುಗಳನ್ನು ಹೊಂದಿದೆ. ದೇವಾಲಯದ ಮತ್ತೊಂದು ಅನುಪಮವಾದ ವಾಸ್ತು ಅಂಶವೆಂದರೆ ಪಾತಾಳಾಂಕಣದ ಮುಂಭಾಗದ ಅಂಕಣಗಳ ಮೇಲೆ ನಿರ್ಮಿಸಿರುವ ಮಹಡಿ. ಇದು ಒಂದಂಕಣ ಆಳವಾಗಿದ್ದು ಪತಾಳಾಂಖನದಷ್ಟೇ ಅಗಲವಾಗಿವೆ. ಮುಂಭಾಗದಲ್ಲಿ ವಿಜಯನಗರ ಶೈಲಿಯ ಚಿತ್ರಖಂಡ ಮಾದರಿಯ ಕುಳ್ಳಾದ ಕಂಬಗಳು, ಪುಷ್ಪ ಬೋದಿಗೆಗಳು ಕಾಣಬರುತ್ತವೆ. ದೇವಾಲಯ ಪ್ರದಕ್ಷಿಣಾಪಥ ಹೊಂದಿದ್ದು, ದೇವಾಲಯದ ಪ್ರಾಂಗಣದಿಂದ ಪ್ರವೇಶ ಮಾಡಬಹುದೇ ಹೊರತು ದೇವಾಲಯದ ಒಳಭಾಗದಿಂದ ಪ್ರವೇಶವಿಲ್ಲ.

ಅಧಿಷ್ಠಾನವು ಸು. ೧ ಮೀ ಎತ್ತರವಾಗಿದ್ದು ಉಪಾನ, ಜಗತಿ, ವೃತ್ತ ಕುಮುದ, ಕಪೋತ, ಪಟ್ಟಿಕಾ, ಕಂಪ, ಗಳ, ಕಂಪ ಮತ್ತು ಪ್ರತಿ ಹೊಂದಿದು ಪ್ರತಿಬಂಧ ಅಧಿಷ್ಠಾನವಾಗಿದೆ. ಅಧಿಷ್ಠಾನದ ಹೊರ ಅಂಚು ಅನೇಕ ಹಿಂಬಣೆ-ಮುಂಬಣೆಗಳನ್ನು ಹೊಂದಿದ್ದು, ಪ್ರತಿಯೊಂದು ದಿಕ್ಕಿನ ಮಧ್ಯಭಾಗದಲ್ಲಿ ಒಂದೊಂದು ಸುಭದ್ರಗಳು ಹೊಂದಿದೆ. ಹಾಗೆಯೇ ಮೂಲೆಗಳಲ್ಲಿ ಕರ್ಣಗಳು ಇವೆ. ತಳಪಾಯದ ಹಿನ್‌ಸರಿತಗಳು ಬಹಳ ಕಿರಿದಾಗಿದ್ದು ಇದರಿಂದಾಗಿ ಮುನ್‌ಸರಿತಗಳು ಪ್ರಧಾನವಾಗಿ ಕಂಡುಬರುತ್ತವೆ.

ಇಲ್ಲಿಯ ಭಿತ್ತಿಯ ನಿರ್ಮಾಣದ ಒಂದು ವಿಶೇಷ ಅಂಶವೆಂದರೆ ಭಿತ್ತಿತಳದಿಂದ ಅರೆಗಂಬಳ ಬೋದಿಗೆಯವರೆಗಿನ ಭಾಗವನ್ನು ನೇರವಾಗಿ ನಿಲ್ಲಿಸಿದ ಏಕಶಿಲೆಗಳಿಂದ ನಿರ್ಮಿಸಲಾಗಿದೆ. ಭಿತ್ತಿಯ ನಿರ್ಮಾಣದಲ್ಲಿ ಅಡ್ಡವರಸೆಗಳ ಬಳಕೆ ಕಾಣಬರುವುದಿಲ್ಲ. ಭಿತ್ತಿಯ ಭಾಗವು ಸಹ ಅಧಿಷ್ಠಾನದ ಹಿನ್‌ಸರಿತ್ ಮುನ್‌ಸರಿತ್‌ಗಳಿಂದ ಕೂಡಿದೆ. ಪ್ರತಿಯೊಂದು ಮುನ್‌ಸರಿತದ ಎರಡು

ಪಾರ್ಶ್ವಗಳಲ್ಲಿ ಒಂದೊಂದು ಅರೆಗಂಬ ಇದೆ. ಅರೆಗಂಬಗಳ ಮಧ್ಯದ ಉಬ್ಬಿದ ಭಾಗದಲ್ಲಿ ಒಂದೊಂದು ತೆಳು ಉಬ್ಬು ಮೂರ್ತಿ ಶಿಲ್ಪಗಳನ್ನು ಕಂಡರಿಸಲಾಗಿದೆ. ಇವುಗಳಲ್ಲಿ ಹೆಚ್ಚಿನವು ಭಕ್ತ ಅಥವಾ ಅಲಂಕಾರಿಕ ಸ್ತ್ರೀ ಶಿಲ್ಪಗಳು.

ಕಪೋತವು ವಿಜಯನಗರ ಕಾಲದ ಕಪೋತದ ಮೇಲಿನ ಅಲಂಕರಣೆಯ ಸ್ಪಷ್ಟ ಲಕ್ಷಣವಾಗಿದೆ. ಕಪೋತದ ಭಾಗ ಜೋಡಿ ಜೋಡಿಯಾಗಿ ಕಂಡರಿಸಿದ ನಾಸಿಗಳನ್ನು ಹೊಂದಿದ್ದು, ಇದಕ್ಕೆ ನೇತ್ರಾನಾಸಿಗಳೆಂದು ಕರೆಯುತ್ತಾರೆ. ಕಪೋತದ ಮೇಲಿನ ವಾಜನವೂ ಸಹ ಸಿಂಹ, ಹಂಸ, ಆನೆ, ಮನುಷ್ಯಾಕೃತಿ ಮುಂತಾದವುಗಳಿಂದ ಕೂಡಿದ ಉಬ್ಬುಶಿಲ್ಪಗಳ ಸಾಲನ್ನು ಹೊಂದಿದೆ. ವಿತಾನದ ಮೇಲೆ ಗಳ, ಊರ್ಧ್ವಪದ್ಮ ಮತ್ತು ಪ್ರತಿಗಳನ್ನು ರಚಿಸಲಾಗಿದೆ. ಪ್ರಸ್ತರದ ಮೇಲ್ಭಾಗ ಅದರ ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ಅಲ್ಲದೆ ಶಿಖರವನ್ನು ಆಧುನಿಕವಾಗಿ ರಚಿಸಲಾಗಿದೆ. ಈ ದೇವಾಲಯದ ಕಾಲಮಾನವು ಸ್ಪಷ್ಟವಾಗಿ ನಿರ್ಧರಿಸಲು ಆಕರಗಳ ಕೊರತೆ ಇದೆ ಎಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಹೀಗಾಗಿ ದೇವಾಲಯದ ಕಾಲಮಾನವು ಸ್ಪಷ್ಟವಾಗಿಲ್ಲ.

**ಶಿವನಸಮುದ್ರ ರಂಗನಾಥಸ್ವಾಮಿ ದೇವಾಲಯ**

ಚಾಮರಾಜನಗರ ಜಿಲ್ಲೆ ಕೊಳ್ಳೆಗಾಲ ತಾಲೂಕಿನಲ್ಲಿರುವ ಶಿವನಸಮುದ್ರ ರಂಗನಾಥ ದೇವಾಲಯವು ಮಧ್ಯರಂಗವೆಂದೆ ಪ್ರಸಿದ್ಧಿ ಪಡೆದಿದೆ. ಅಲ್ಲದೆ ಇಲ್ಲಿಯ ರಂಗನಾಥನಿಗೆ ಜಗನ್ಮೋಹನ ರಂಗನಾಥಸ್ವಾಮಿ ಎಂದು ಕರೆಯುತ್ತಾರೆ. ದೇವಾಲಯದ ನಿರ್ಮಾಣದ ಬಗ್ಗೆಯು ಸ್ಪಷ್ಟತೆ ಇಲ್ಲದೆ ಇರುವುದು ಕಂಡುಬರುತ್ತದೆ. ಇದು ಹೊಯ್ಸಳರ ಕಾಲದ ದೇವಾಲಯವೆಂದು ಪ್ರತೀತಿ. ಗರ್ಭಗೃಹ, ಅಂತರಾಳ, ಮುಖಮಂಟಪ, ಹೊಂದಿದ್ದು ದೇವಾಲಯದ ಎಡಭಾಗದಲ್ಲಿ ರಂಗನಾಯಕಿ ಅಮ್ಮನವರ ಸನ್ನಿಧಿ ಇದೆ. ಸುತ್ತಲೂ ಎತ್ತರವಾದ ಪ್ರಾಕಾರವಿದ್ದು ಪ್ರಾಕಾರದಲ್ಲಿ ಕಲ್ಯಾಣ ಮಂಟಪ, ಲತಾ ಮಂಟಪವಿದೆ. ಗರ್ಭಗೃಹದಲ್ಲಿ ರಂಗನಾಥ ಸ್ವಾಮಿಯು ಐದು ಹೆಡೆಗಳುಳ್ಳ ಆದಿಶೇಷನ ಮೇಲೆ ಪವಡಿಸಿದ್ದು, ಇದು ಮೂರು ಸುತ್ತಿನ ಆವೃತ್ತಿಯುಳ್ಳ ಪರ್ಯಂಕನವಾಗಿದೆ. ಆತನ ಬಲಕೈಯು ತಲೆಗೆ ದಿಂಬಿನಂತೆ ಆಸರೆಯಾಗಿದೆ. ಎಡಕೈಯು ಸಮಾನಾಂತರವಾಗಿ ಚಾಚಿದೆ. ಗರ್ಭಗೃಹವು ಆಯತಾಕಾರವಾಗಿದೆ. ಮುಂಭಾಗದಲ್ಲಿ ಅಂತರಾಳವಿದ್ದು ಸರಳ ದ್ವಾರಬಂಧವನ್ನು ಹೊಂದಿದೆ. ದ್ವಾರದ ಇಕ್ಕೆಲದಲ್ಲಿ ದ್ವಾರಪಾಲಕ ಶಿಲ್ಪಗಳಿವೆ. ನಂತರ ವಿಶಾಲವಾದ ಮುಖಮಂಟಪವಿದ್ದು ಅಂತರಾಳದ ಗೋಡೆಯು ತುಸು ಮುಂದುವರೆದು ನಂತರ ಮುಖಮಂಟಪವು ರಚನೆಯಾಗಿದ್ದು, ಇದರ ಬಲ ಮತ್ತು ಎಡಭಾಗದಲ್ಲಿ ಒಂದು ಗರ್ಭಗೃಹಗಳು ಏರ್ಪಟ್ಟಿವೆ. ಇವುಗಳ ಒಳಭಾಗದಲ್ಲಿ ನಮ್ಮಆಳ್ವಾರ್‌ರ ಮತ್ತು ಎಡಭಾಗದಲ್ಲಿ ವೇದಾಂತ ದೇಶಿಕರ ಶಿಲ್ಪಗಳಿವೆ. ಅಲ್ಲದೆ ಅಂಡಾಳ್ ಗೋದಾದೇವಿಯ, ತಕ್ಷಕನ ಶಿಲ್ಪವಿದೆ. ಮುಖಮಂಟಪವು ೪+೪ ಕಂಬಗಳ

ವಿನ್ಯಾಸವನ್ನು ಹೊಂದಿದೆ. ಮುಖಮಂಟಪದ ದ್ವಾರದಲ್ಲಿ ಇತ್ತೀಚೆಗೆ ದ್ವಾರಪಾಲಕರ ಶಿಲ್ಪಗಳನ್ನು ಇಡಲಾಗಿದೆ. ಗರ್ಭಗೃಹ ಅಂತರಾಳದ ಅಧಿಷ್ಠಾನವು ಪಾದಬಂಧ ಅಧಿಷ್ಠಾನವಾಗಿದ್ದು ಉಪಾನ, ಜತಿ, ತ್ರಿಪಟ್ಟ ಕುಮುದ, ಗಲ ಮತ್ತು ಮಹಾಪಟ್ಟಿಗಳನ್ನು ಹೊಂದಿದೆ. ಭಿತ್ತಿಯಲ್ಲಿ ಅರೆಗಂಬಗಳ ಸಾಲುಗಳಿದ್ದು ಶಾಲ ತೋರಣಗಳ ಅಲಂಕಾರವನ್ನು ನಿರ್ಮಿಲಾಗಿದೆ. ಈ ತೋರಣದಲ್ಲಿ ಆಂಜನೇಯ, ಗೋಪಾಲಕೃಷ್ಣ ಆಳ್ವಾರರ ಶಿಲ್ಪಗಳಿವೆ. ಭಿತ್ತಿಗಳ ಮೇಲೆ ಟಗರ ಕಾಳಗ, ಜಟ್ಟಿಗಳ, ಇತರ ಮಂಡಲಗಳ ಚಿತ್ರಗಳನ್ನು ತೋರಿಸಲಾಗಿದೆ. ದೇವಾಲಯ ಮುಂಭಾಗದಲ್ಲಿ ಗರುಡ ಮಂಟಪ, ಬಲಿಪೀಠ, ಧ್ವಜಸ್ತಂಭ, ಗರುಡಸ್ತಂಭವಿದೆ. ಸ್ವಾಮಿಯ ಪಾದುಕೆಗಳಿವೆ. ದೇವಾಲಯದ ಗೋಪುರವು ಶಾಲಾಕಾರವಾಗಿದ್ದು ನೂತನವಾಗಿ ನಿರ್ಮಿಸಲಾಗಿದೆ. ಪ್ರಾಕಾರದ ಮುಖ್ಯದ್ವಾರವು ಮಂಚಬಂಧ ಅಧಿಷ್ಠಾನವನ್ನು ಹೊಂದಿದ್ದು ಗೋಪುರವನ್ನು ಹೊಂದಿರುವುದಿಲ್ಲ. ದೇವಾಲಯ ಮುಂಭಾಗದಲ್ಲಿ ಎತ್ತರವಾದ ಉಯ್ಯಾಲೆ ಮಂಟಪವಿದೆ.

**ಅಂಬಲಗೆರೆ ರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲೂಕಿನ ಅಂಬಲಗೆರೆ ರಂಗನಾಥ ದೇವಾಲಯವು ವಿಜಯನಗರ ಕಾಲದ ದೇವಾಲಯವಿದೆ. ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ರಂಗನಾಥನ ಸ್ಥಾನಕ ಮೂರ್ತಿಶಿಲ್ಪವಿದೆ. ರಂಗನಾಥನು ಚತುರ್ಭುಜನಾಗಿದ್ದು, ಮೇಲ ಕೈಯಲ್ಲಿ ಶಂಖ, ಚಕ್ರ, ಕೆಳಕೈ ವರದ, ಗದೆ ಹಿಡಿದಿರುವ ಶಿಲ್ಪವಿದೆ. ರಂಗನಾಥನ ಪೀಠಭಾಗದಲ್ಲಿ ಸಣ್ಣ ಸ್ಥಾನಕ ಶ್ರೀಭೂದೇವಿಯರ ಶಿಲ್ಪಗಳನ್ನು ಕಂಡರಿಸಲಾಗಿದೆ. ಶಿಲ್ಪವು ಕರಂಡಮುಕುಟ, ಕರ್ಣಕುಂಡಲ, ಕೊರಳಹಾರ, ಯಜ್ಞೋಪವೀತ ಹೊಂದಿದ್ದು, ಪ್ರಭಾವಳಿಯಲ್ಲಿ ದಶಾವತಾರದ ಶಿಲ್ಪಗಳನ್ನು ಹೊಂದಿದೆ. ಆದರೆ ಆ ಶಿಲ್ಪಗಳು ಸ್ಪಷ್ಟವಾಗಿಲ್ಲ. ಇಲ್ಲಿ ರಂಗನಾಥನ ಶಿಲ್ಪವು ಸಮಭಂಗದಲ್ಲಿದ್ದು, ತನ್ನ ಪಾದಗಳ ಬೆರಳನ್ನು ನೆಲಕ್ಕೆ ಒತ್ತಿ ಹಿಮ್ಮಡಿಯನ್ನು ಎತ್ತಿದಂತೆ ತೋರಿಸಲಾಗಿದೆ.

ದೇವಾಲಯವನ್ನು ಗ್ರಾನೈಟ್ ಮಾಧ್ಯಮದಲ್ಲಿ ನಿರ್ಮಿಸಲಾಗಿದ್ದು ಅಂತರಾಳವು ನಾಲ್ಕು ಅರೆಗಂಬಗಳನ್ನು ಹೊಂದಿದೆ. ದ್ವಾರಬಂಧದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿದ್ದು ಲಲಾಟ ಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ. ಅಂತರಾಳಕ್ಕೆ ಹೊಂದಿಕೊಂಡಂತೆ ನಾಲ್ಕು ಕಂಬಗಳ ನವರಂಗವಿದೆ. ಗೋಡೆಯಲ್ಲಿ ೧೨ ಅರೆಗಂಬಗಳಿವೆ. ನವರಂಗದ ನಾಲ್ಕು ಕಂಬಗಳ ಮಧ್ಯ ಅರ್ಧ ಅಡಿಯಷ್ಟು ಜಗತಿಯಿದೆ. ಮೇಲ ಛತ್ತಿನಲ್ಲಿ ಭುವನೇಶ್ವರಿಯಿದ್ದು, ಅದರಲ್ಲಿ ಮುಗಚಿ ಹಾಕಿದ ಕಮಲವಿದೆ. ನವರಂಗದ ಮಧ್ಯ ಮುಖ್ಯವಾದ ನಾಲ್ಕು ಕಂಬಗಳು ಪೀಠ, ಪಾದ, ಚೌಕಾಕಾರದ ದಿಂಡು, ಹೂಗಳಿಂದ ಅಲಂಕೃತವಾದ ಅಷ್ಟಮುಖ, ಚಾಚುಬೋಧಿಗೆಗಳನ್ನು

ಹೊಂದಿದೆ. ಕಂಬಗಳ ಪ್ರತಿ ಚೌಕದಲ್ಲಿಯು ವಿವಿಧ ಉಬ್ಬು ಶಿಲ್ಪಗಳಿವೆ. ನವರಂಗದ ಪ್ರವೇಶದ್ವಾರದಲ್ಲಿ ಲತಾ ಸುರಳಿ, ರತ್ನ ಪಟ್ಟಿಕ, ಹೂಬಳ್ಳಿಗಳು, ಸಪ್ತ ಪಟ್ಟಿಗೆಗಳ ಶಾಖೆಗಳಿವೆ. ಆದರೆ ಪ್ರಸ್ತುತ ಬಣ್ಣ ಬಳೆಯಲಾಗಿದೆ. ದ್ವಾರದ ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲಕರ ಮೂರ್ತಿಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮೀ ಅಲಂಕರಣೆಯಿದ್ದು, ಮೇಲಿನ ಉತ್ತರಾಂಗದಲ್ಲಿ ಅನಂತಶಯನ ವಿಷ್ಣುವಿನ ಶಿಲ್ಪವಿದೆ. ಪಾದದ ಅಡಿಯಲ್ಲಿ ಲಕ್ಷ್ಮೀ ಶಿಲ್ಪವಿದೆ.

ನವರಂಗದ ಮುಂದೆ ನಾಲ್ಕು ಸ್ತಂಭಗಳ ತೆರೆದ ಸಭಾಮಂಟಪವಿದೆ. ಸಭಾಮಂಟಪಕ್ಕೆ ಸುತ್ತಲೂ ಕಕ್ಷಾಸನವನ್ನು ಅಳವಡಿಸಲಾಗಿದೆ. ಸಭಾಮಂಟಪಕ್ಕೆ ಪೂರ್ವ, ಉತ್ತರ, ದಕ್ಷಿಣ ದಿಕ್ಕಿನಲ್ಲಿ ಮೂರು ಕಡೆ ಪ್ರವೇಶ ಕಲ್ಪಿಸಲಾಗಿದೆ. ಸಭಾಮಂಟಪದ ಸ್ತಂಭಗಳು ವಿಜಯನಗರ ಕಾಲದ ಸಂಯುಕ್ತ ಸ್ತಂಭಗಳ ಶೈಲಿಯಲ್ಲಿವೆ. ಅಂದರೆ ಪೀಠ, ಕಾಂಡದಲ್ಲಿ ಚೌಕಾಕಾರ, ಮೇಲೆ ತರಂಗ ಹಾಗೂ ಪುಷ್ಪಾಲಂಕಾರ ಬೋದಿಗೆಯಲ್ಲಿವೆ. ಕಂಬಗಳ ಒಂದು ಬದಿಯಲ್ಲಿ ಮಕರದ ಮೇಲೆ ದೊಡ್ಡ ಗಾತ್ರದ ನೆಗೆಯುತ್ತಿರುವ ಸಿಂಹಗಳಿವೆ. ಈ ಸಭಾಮಂಟಪದಲ್ಲಿರುವ ಮತ್ತೊಂದು ರೀತಿಯ ಕಂಬಗಳೆಂದರೆ ಚೌಕಾಕಾರ ಅಷ್ಟಮುಖಗಳ ಪಟ್ಟಿಕಾ, ಮತ್ತೆ ಚೌಕಕಾರ, ಅಷ್ಟಮುಖ ಪಟ್ಟಿಕಾ ಮತ್ತೆ ಚೌಕ ಮೇಲೆ ತರಂಗ ಬೋಧಿಗೆಯಲ್ಲಿವೆ. ಈ ಕಂಬಗಳ ಚೌಕದಲ್ಲಿ ವಿಷ್ಣು, ರಾಮಾನುಜಾಚಾರ್ಯ, ಆನೆ, ಹಂಸ, ಆಮೆ, ಭಕ್ತ, ಗರುಡ, ಆಂಜನೇಯ ಉರ್ಧ್ವಪುಂಡ, ವಾಮನ, ಶಂಖ, ಚಕ್ರ, ಚಾಮರಧಾರಿ, ವಿಠ್ಠಲ, ಬೇಟೆಗಾರ, ಮಿಥುನಶಿಲ್ಪ, ಲಿಂಗವನ್ನು ಅಪ್ಪಿಕೊಂಡಿರುವ ಬೇಡರ ಕಣ್ಣಪ್ಪ, ಲಕ್ಷ್ಮೀ, ಬಲಮುಖದ ಅಂಜನೇಯ, ಭಕ್ತೆ ಶಿಲ್ಪಗಳು, ವ್ಯಾಳಿ, ಲಿಂಗದ ಮೇಲೆ ಹಾಲು ಸುರುಸುತ್ತಿರುವ ಹಸು, ಲಿಂಗದ ಮುಂದೆ ಅಂಜಲಿ ಬದ್ಧವಾಗಿ ಎಡಕೈಯಲ್ಲಿ ಬಿಲ್ಲು ಧರಿಸಿದ ಬೇಡರ ಕಣ್ಣಪ್ಪನ ಶಿಲ್ಪ, ಚುಂಚುಲಕ್ಷ್ಮೀ, ಬಾಲಕೃಷ್ಣ, ಪದ್ಮನಿಧಿ, ಕಾಳಿಂಗ ಮರ್ಧನ, ಗರುಡ, ಭೈರವ, ಕಡೆಗೋಲದಿಂದ ಮಜ್ಜಿಗೆ ಕಡೆಯುವ ಕೃಷ್ಣ ಬೆಣ್ಣೆಯನ್ನು ತೆಗೆದುಕೊಳ್ಳುವ ಉಬ್ಬು ಶಿಲ್ಪಗಳಿವೆ. ದೇವಾಲಯದ ಅಧಿಷ್ಠಾನವು ಸರಳವಾಗಿದ್ದು ಅದರಲ್ಲಿ ಜಗತಿ, ಪದ್ಮ, ತ್ರಿಪಟ್ಟ ಕುಮುದ, ಕಪೋತ ಭಾಗಗಳಿವೆ. ಭಿತ್ತಿಯು ಸರಳವಾಗಿದ್ದು, ಕಪೋತ ನಂತರ ಪ್ರಸ್ತರದಲ್ಲಿ ದೇವಾಲಯದ ಸುತ್ತಲೂ ಪಟ್ಟಿಕೆಯನ್ನು ನಿರ್ಮಿಸಲಾಗಿದೆ. ಪಟ್ಟಿಕೆಯ ಮೇಲೆ ಕಂಗೂರಾಕೃತಿಯ ಅಲಂಕಾರವಿದೆ.

ದೇವಾಲಯದ ಶಿಖರವು ದ್ವಿತಲದಲ್ಲಿದ್ದು ದ್ರಾವಿಡ ಮಾದರಿಯಲ್ಲಿದೆ. ದೇವಾಲಯ ಹಿಂಭಾಗದಲ್ಲಿ ಲಕ್ಷ್ಮೀ ಅಮ್ಮನವರ ಸನ್ನಿಧಿ, ಮುಂಭಾಗದಲ್ಲಿ ಬಲಿಸ್ತಂಭವಿದೆ. ದೇವಾಲಯದ ಸುತ್ತಲೂ ಪ್ರಾಕಾರವಿದೆ. ಪ್ರಾಕಾರದ ಹೊರಭಾಗದಲ್ಲಿ ಸುಮಾರು ೩೫ ಅಡಿ ಎತ್ತರದ ದೀಪಸ್ತಂಭ ಗರುಡಸ್ತಂಭಗಳಿವೆ. ನಂತರದಲ್ಲಿ ಉಯ್ಯಾಲೆ ಸ್ತಂಭಗಳಿವೆ. ಕ್ರಿ. ಶ. ೧೫೫೪ ರ ಶಾಸನ

ವಿಜಯನಗರದ ಸದಾಶಿವರಾಯನು ಆಳ್ವಿಕೆ ಮಾಡುತ್ತಿರುವ ಸಂದರ್ಭದಲ್ಲಿ ಅಂಬಲಗೆರೆಯ ತಿರುವೆಂಗಳನಾಥ ದೇವರಿಗೆ ಗೋಸಿಕೆರೆ ನಾಡೊಳಗಿರುವ ಉಪರಿಕರಹಳ್ಳಿಗೆ ವೆಂಗಳಾಪುರ ಎಂದು ಮರುನಾಮಕರಣ ಮಾಡಿ ದತ್ತಿ ನೀಡಿರುವ ವಿಷಯವು ತಿಳಿದುಬರುತ್ತದೆ.[೧೫] ಅಲ್ಲದೆ ಈ ಶಾಸನದಲ್ಲಿ ರಂಗನಾಥನನ್ನು ತಿರುವೆಂಗಳನಾಥನೆಂದು ಕರೆಯಲಾಗಿದ್ದು, ನಂದಾದೀಪಕ್ಕಾಗಿ ಗ್ರಾಮದ ಸುಂಕವನ್ನು ನೀಡಿರುವ ವಿಷಯವನ್ನು ಉಲ್ಲೇಖಿಸುತ್ತದೆ. ಈ ದೇವಾಲಯವು ಸದಾಶಿವರಾಯನ ಕಾಲವಧಿಯಲ್ಲಿ ನಿರ್ಮಿಸಿರುವುದು ತಿಳಿದುಬರುತ್ತದೆ.

**ಗವಿರಂಗಾಪುರ ರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲೂಕಿನ ಗವಿರಂಗಾಪುರದಲ್ಲಿ ಇರುವ ಗವಿರಂಗನಾಥ ದೇವಾಲಯವು ಪ್ರಮುಖ ಧಾರ್ಮಿಕ ಕ್ಷೇತ್ರವಾಗಿದೆ. ಮುಖ್ಯವಾಗಿ ದೇವಾಲಯವು ರಂಗನಾಥನ ಪ್ರಾಚೀನವಾದ ಆರಾಧನಾ ನೆಲೆಯಾಗಿದೆ. ಇದು ರಂಗನಾಥ ಸಂಪ್ರದಾಯದ ಬೇಟೆ ಮತ್ತು ಪಶುಪಾಲನಾ ಹಂತಗಳ ಆರಾಧನಾ ನೆಲೆಗಳಿಗೆ ಮುಖ್ಯ ಉದಾಹರಣೆಯಾಗಿದೆ. ಪ್ರಾರಂಭದಲ್ಲಿ ದಟ್ಟ ಮರ, ಗಿಡ ಬಂಡೆಗಳಿಂದ ಕೂಡಿದ ಈ ನೆಲೆ ಹಂತ ಹಂತವಾಗಿ ಪರಿಶಿಷ್ಟದಿಂದ ಶಿಷ್ಟಗೊಂಡು ಪ್ರಸ್ತುತ ನೆಲೆಗೊಂಡಿದೆ. ದೇವಾಲಯವು ಎತ್ತರವಾದ ಗ್ರಾನೈಟ್ ಬಂಡೆಗಳಿಂದ ಆವೃತವಾದ ಎತ್ತರವಾದ ಬೆಟ್ಟದ ಮೇಲಿದೆ. ವಿಶೇಷವೆಂದರೆ ಗರ್ಭಗೃಹವು ಬಂಡೆಗಳಿಂದ ಆವೃತವಾದ ಸಂಪೂರ್ಣ ಗುಹಾರಚನೆಯನ್ನು ಹೊಂದಿದೆ. ಈ ಗುಹಾ ದೇವಾಲಯದ ಗರ್ಭಗೃಹದಲ್ಲಿ ಸ್ವಾಮಿಯು ಕೂರ್ಮ ರೂಪದಲ್ಲಿ ನೆಲೆಸಿರುವನೆಂದು ಪ್ರತೀತಿ. ಹೀಗಾಗಿ ಇದು ಗವಿರಂಗನಾಥಸ್ವಾಮಿ ಎಂದು ಕರೆಯಿಸಿಕೊಂಡಿದೆ. ಕಾಲಾನಂತರದಲ್ಲಿ ದೇವಾಲಯವು ಶ್ರೀವೈಷ್ಣವ ಪ್ರಭಾವಕ್ಕೆ ಒಳಗಾಗಿ ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ದೇವಾಲಯವನ್ನು ನಿರ್ಮಿಸಿಕೊಂಡು ನೆಲೆನಿಂತಿದೆ. ದೇವಾಲಯವು ಸ್ಪಷ್ಟವಾಗಿ ಶಿಷ್ಟ ಸಂಪ್ರದಾಯ ಆಕ್ರಮಿಸಿಕೊಂಡಿರುವ ಹಂತಗಳನ್ನು ತಿಳಿಸಿಕೊಡುತ್ತದೆ. ಗುಹೆಯನ್ನೇ ಬಳಿಸಿಕೊಂಡು, ಗುಹೆಯ ಮುಂಭಾಗದಲ್ಲಿರುವ ಸ್ಥಳದಲ್ಲಿಯೇ ಅಂತರಾಳ, ಮುಖಮಂಟಪವನ್ನು ನಿರ್ಮಿಸಲಾಗಿದೆ. ಇಡೀ ಬೆಟ್ಟವನ್ನು ಬಿಡದೆ ಸ್ಥಳಾವಕಾಶ ಇರುವ ಕಡೆಯಲೆಲ್ಲ ದೇವಾಲಯವನ್ನು ವಿಸ್ತರಿಸುತ್ತಾ ಬಂದಿದ್ದಾರೆ. ಜೊತೆಗೆ ಅಮೂರ್ತ ರೂಪದ ಲಕ್ಷ್ಮೀ ಅಮ್ಮನವರ ಸನ್ನಿಧಿ ಇದೆ. ರಂಗನಾಥನ ಪ್ರಥಮ ಗಣಗಳಾದ ಕೆಂಚರಾಯಭೂತಪ್ಪ, ಕಾಡರಾಯಭೂತಪ್ಪನ ಅಮೂರ್ತ(ಕಲ್ಲುಗುಂಡು) ಸನ್ನಿಧಿಗಳಿವೆ. ಅಲ್ಲದೆ ಅನಂತಶಯನಸ್ವಾಮಿಯ ಸನ್ನಿಧಿ, ಆಂಜನೇಯನ ಸನ್ನಿಧಿ ಇದೆ. ಬೆಟ್ಟದ ಕೆಳಭಾಗದಲ್ಲಿ ಉಯ್ಯಾಲೆಸ್ತಂಭ, ಗರುಡಸ್ತಂಭಗಳನ್ನು ನಿರ್ಮಿಸಲಾಗಿದೆ. ಬೆಟ್ಟದ ತಳಭಾಗದಲ್ಲಿ ಗೋಪುರವನ್ನು ನಿರ್ಮಿಸಲಾಗಿದೆ. ಇಡೀ ಬೆಟ್ಟವನ್ನು ದೇವಾಲಯವಾಗಿ ಬಳಸಿಕೊಳ್ಳಲಾಗಿದೆ.

**ಲೊಕದೊಳಲು ದೊಡ್ಡಹೊಟ್ಟೆ ರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆಯ ಹೊಳಲಕೆರೆ ತಾಲೂಕಿನ ಲೊಕದೊಳಲು ದೊಡ್ಡ ಹೊಟ್ಟೆರಂಗನಾಥಸ್ವಾಮಿ ದೇವಾಲಯ ಪ್ರಸಿದ್ಧಿ ಪಡೆದ ಕ್ಷೇತ್ರವಾಗಿದೆ. ದೇವಾಲಯವು ಗ್ರಾಮದ ಎತ್ತರವಾದ ಬೆಟ್ಟದ ಮೇಲಿದೆ. ಬೆಟ್ಟವು ಸು. ೩೭೫೦ ಅಡಿ ಎತ್ತರವಾಗಿದೆ. ಸಮೃದ್ಧವಾದ ದಟ್ಟವಾದ ಮರ, ಕುರುಚಲು ಸಸ್ಯ, ಕಣಶಿಲೆ ಬಂಡೆಗಳಿಂದ ಬೆಟ್ಟವು ಆವೃತ್ತವಾಗಿದೆ. ದೇವಾಲಯದ ಗರ್ಭಗೃಹವು ಬೃಹತ್ ಬಂಡೆಗಳಿಂದ ಆವೃತವಾಗಿದೆ. ಬಂಡೆಗಳನ್ನೇ ಆಶ್ರಯಿಸಿ ದೇವಾಲಯವನ್ನು ನಿರ್ಮಿಸಲಾಗಿದೆ. ದೇವಾಲಯ ಬೇಟೆ ಮತ್ತು ಪಶುಪಾಲನೆಗೆ ಹಂತದ ರಂಗನಾಥ ಸಂಪ್ರದಾಯವನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ. ಕಾರಣ ಬೆಟ್ಟದ ಪರಿಸರವು ಬೇಟೆ ಮತ್ತು ಪಶುಪಾಲಕರಿಗೆ ಅನುಕೂಲಕರವಾದ ಸ್ಥಳವನ್ನು ಒದಗಿಸಿದಂತೆ ಕಂಡುಬರುತ್ತದೆ. ಅಲ್ಲಲ್ಲಿ ನೈಸರ್ಗಿಕ ನೀರಿನ ತಾಣಗಳು ಬೆಟ್ಟದಲ್ಲಿ ಕಂಡುಬರುತ್ತದೆ. ಮುಖ್ಯವಾಗಿ ಇಲ್ಲಿ ರಂಗನಾಥನ ಆರಾಧನೆಯ ನೆಲೆಯು ಪ್ರಾಚೀನವಾಗಿದ್ದು, ನಂತರದಲ್ಲಿ ದೇವಾಲಯವನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಇದು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿದೆ. ಆದರೆ ಯಾವ ಪಾಳೆಯಗಾರರು ಎಂಬುದಕ್ಕೆ ಆಧಾರಗಳಿಲ್ಲ. ಗರ್ಭಗೃಹದಲ್ಲಿ ಹುಟ್ಟು ಬಂಡೆಯನ್ನು ರಂಗನಾಥನೆಂದು ಪೂಜಿಸಲಾಗುತ್ತಿದೆ. ಬಂಡೆಗೆ ಆಶ್ರಯವಾಗಿಯೇ ಗರ್ಭಗೃಹ, ಮುಂದಿನ ಸ್ವಲ್ಪ ಸ್ಥಳವನ್ನು ಅಂತರಾಳವಾಗಿ ನಿರ್ಮಿಸಿರುವುದು ಕಂಡುಬರುತ್ತದೆ. ಈ ಸ್ಥಳವು ಶ್ರೀವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದು, ದೇವಾಲಯದ ಐತಿಹ್ಯದಿಂದ ತಿಳಿದು ಬರುತ್ತದೆ. ಬೆಟ್ಟದ ಪರಿಸರದಲ್ಲಿ ದೇವಾಲಯದ ಹತ್ತಿರ ಶ್ರೀ ಲಕ್ಕಮ್ಮ, ತೊಳಸಮ್ಮರ ದೇವಾಲಯ, ಆಂಜನೇಯ ಸ್ವಾಮಿ, ಕುಮಾರ ತಿಮ್ಮಪ್ಪನ ದೇವಾಲಯಗಳಿವೆ. ಬೆಟ್ಟದಲ್ಲಿ ರಂಗನಾಥ ಸ್ವಾಮಿಯಿಂದ ನಿರ್ಮಿಸಿದ್ದೆಂದು ಹೇಳುವ ಬಿಲ್ದೋಣಿ ಇದೆ. ಪಾಳೆಯಗಾರರ ಕಾಲದ ಕಟ್ಟಡದ ಅನೇಕ ಅವಶೇಷಗಳು ಬೆಟ್ಟದ ಪರಿಸರದಲ್ಲಿವೆ. ಪುಷ್ಕರಣಿ (ಗಜಾಹೊಂಡ), ಭೂತನಾಥೇಶ್ವರ ಮತ್ತು ಚೌಡನಾಥೇಶ್ವರ, ಭೈರವ ದೇವಾಲಯ ಅದರ ಮುಂದೆ ಎರಡು ಪಾದಗಳು, ಕೋಟೆಯ ದ್ವಾರಗಳು, ವೀರಗಲ್ಲುಗಳು ಕಟ್ಟಡ ಅವಶೇಷಗಳು ಚದುರಿಕೊಂಡಿವೆ. ಹೀಗೆ ಬೆಟ್ಟ ಪರಿಸರ ನಿರಂತರವಾಗಿ ಅನಾದಿ ಮಾನವನಿಗೆ ಆಶ್ರಯ ತಾಣವಾಗಿರುವುದು ಕಂಡುಬರುತ್ತದೆ.

**ಬೆಟ್ಟಳ್ಳಿ–ಬನ್ನೂರು ಒಡ್ಡಗಲ್ಲು ರಂಗನಾಥಸ್ವಾಮಿ ದೇವಾಲಯ**

ಮೈಸೂರು ಜಿಲ್ಲೆ ಟಿ. ನರಸೀಪುರ ತಾಲೂಕಿನ ಬೆಟ್ಟಳ್ಳಿ–ಬನ್ನೂರ ಒಡ್ಡಗಲ್ಲು ರಂಗನಾಥಸ್ವಾಮಿ ಪ್ರಸಿದ್ಧ ಕ್ಷೇತ್ರವಾಗಿದೆ. ದೇವಾಲಯವು ಎತ್ತರವಾದ ವಿಶಾಲವಾದ ಬೆಟ್ಟ ಪರಿಸರದಲ್ಲಿ ನೆಲೆಗೊಂಡಿದೆ. ಕಣಶಿಲೆಗಳಿಂದ ಆವೃತವಾದ ವಿಶಾಲ ಬಂಡೆ ಕಲ್ಲುಗಳನ್ನು ಹೊಂದಿದೆ. ಬೆಟ್ಟವನ್ನು ಸುಮಾರು

೧೫ ಕಿ.ಮೀ ಸುತ್ತುವರೆದು ದೇವಾಲಯ ತಲುಪ ಬೇಕಾಗುತ್ತದೆ. ಈ ಸ್ಥಳ ಪ್ರಾಗೈತಿಹಾಸಿಕ ಕಾಲದ ನೆಲೆಯಾಗಿದೆ. ಬೆಟ್ಟದಲ್ಲಿ ಅನೇಕ ಬೃಹತ್ ಶಿಲಾಸಂಸ್ಕೃತಿಯ ಸಮಾಧಿಗಳು ಕಂಡುಬರುತ್ತವೆ. ಈ ಸ್ಥಳದಲ್ಲಿ ರಂಗನಾಥನ ಆರಾಧನೆಯು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು, ಮುಂದುವರೆದುಕೊಂಡು ಬಂದಂತೆ ಕಂಡುಬರುತ್ತದೆ. ಬಹುಶಃ ಅನಾದಿ ಮಾನವನ ಪ್ರಮುಖ ಆರಾಧನಾ ನೆಲೆಯಾಗಿ ಪ್ರಸ್ತುತ ಸ್ಥಳವು ಗೋಚರಿಸುತ್ತದೆ. ದೇವಾಲಯವು ಬಂಡೆಕಲ್ಲುಗಳಿಂದ ಆವೃತವಾದ ಗುಹಾಮಾದರಿಯ ಗರ್ಭಗೃಹವನ್ನು ಹೊಂದಿದೆ. ಗರ್ಭಗೃಹದಲ್ಲಿ ರಂಗನಾಥನ ಉದ್ಭವ ಗುಂಡುಕಲ್ಲನ್ನು ಪೂಜಿಸಲಾಗುತ್ತದೆ. ಗುಹಾಲಯದ ಮುಂದಿರುವ ಸ್ಥಳದಲ್ಲಿಯೇ ಅಂತರಾಳವನ್ನು ನಿರ್ಮಿಸಲಾಗಿದ್ದು, ಆ ಬಂಡೆಗಳು ಸುತ್ತವರೆದ ರೀತಿಯಲ್ಲಿಯೆ ಮುಖಮಂಟಪವನ್ನು ನಿರ್ಮಿಸಲಾಗಿದೆ. ಅಂತರಾಳದಲ್ಲಿ ಆಳ್ವಾರರ ಮೂರು ಶಿಲ್ಪ, ಅಂಡಾಳ್ ಶಿಲ್ಪ, ಆಂಜನೇಯ ಶಿಲ್ಪಗಳಿವೆ. ಮುಖಮಂಟಪದ ಉತ್ತರ ದಕ್ಷಿಣದಲ್ಲಿ ಅಮ್ಮನವರ ಸುಬ್ರಹ್ಮಣ್ಯಸ್ವಾಮಿಯವರ ಸನ್ನಿಧಿಯನ್ನು ನಿರ್ಮಿಸಲಾಗಿದೆ. ಮುಖಮಂಟಪದ ಕಂಬಗಳು ಸರಳ ರಚನೆ ಪಡೆದಿವೆ. ದೇವಾಲಯದ ಮುಂಭಾಗದಲ್ಲಿ ಬಲಿಪೀಠ, ಗರುಡಸ್ತಂಭ, ಬೃಂದಾವನ, ಸ್ವಾಮಿ ಪಾದುಕೆಗಳಿವೆ. ಹೀಗೆ ಪ್ರಾಚೀನ ಕಾಲದ ಆರಾಧನಾ ನೆಲೆಯನ್ನು ಶಿಷ್ಟ ಸಂಪ್ರದಾಯವು ಅದರಲ್ಲೂ ಶ್ರೀವೈಷ್ಣವ ಧರ್ಮ ಆಕ್ರಮಿಸಿಕೊಂಡಿರುವ ಲಕ್ಷಣಗಳನ್ನು ಸ್ಪಷ್ಟವಾಗಿ ದೇವಾಲಯದಲ್ಲಿ ಕಾಣಬಹುದು. ಬಂಡೆಯ ಸಂದುಗಳಲ್ಲಿ ಇರುವ ಸ್ಥಳಾವಕಾಶವನ್ನು ಬಳಸಿಕೊಂಡು ದೇವಾಲಯ ನಿರ್ಮಿಸಿರುವುದರ ಜೊತೆಗೆ ನೂತನವಾಗಿ ದೇವಾಲಯವನ್ನು ವಿಸ್ತರಿಸುವ ಕೆಲಸ ನಡೆದಿದೆ.

**ಮಾವಿನಕೆರೆ ಬೆಟ್ಟದರಂಗನಾಥಸ್ವಾಮಿ ದೇವಾಲಯ :**

ಹಾಸನ ಜಿಲ್ಲೆ ಹೊಳೆನರಸೀಪುರ ತಾಲೂಕಿನ ಮಾವಿನಕೆರೆ ರಂಗನಾಥಸ್ವಾಮಿ ದೇವಾಲಯವು ಎತ್ತರವಾದ ಬೆಟ್ಟದ ಮೇಲೆ ಸ್ಥಾಪಿತವಾಗಿದೆ. ಹಾಸನ ಜಿಲ್ಲೆಯಲ್ಲಿ ಅಲ್ಲದೇ ಸುತ್ತಲೂ ಈ ದೇವಾಲಯವು ತುಂಬಾ ಪ್ರಸಿದ್ಧಿಯನ್ನು ಪಡೆದ ದೇವಾಲಯವಾಗಿದೆ. ಇಲ್ಲಿಯ ರಂಗನಾಥ ಆರಾಧನಾ ಸ್ಥಳವು ಪ್ರಾಚೀನವಾಗಿದ್ದು, ನಂತರದಲ್ಲಿ ದೇವಾಲಯವನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಈ ಸ್ಥಳವು ಬೇಟೆ ಮತ್ತು ಪಶುಪಾಲಕರ ಅನುಕೂಲತೆಗಾಗಿ ಬಳಸಿಕೊಂಡಂತೆ ಕಂಡುಬರುತ್ತದೆ. ಇಲ್ಲಿಯ ಬೃಹತ್ ಕಣಶಿಲೆಯ ಬಂಡೆಗಳಿಂದ ದೇವಾಲಯವು ಆವೃತವಾಗಿದೆ. ಬೆಟ್ಟದ ಮಧ್ಯದಲ್ಲಿ ಗುಹಾಮಾದರಿಯ ಗರ್ಭಗೃಹದಲ್ಲಿ ರಂಗನಾಥನನ್ನು ಉದ್ಭವ ಕಲ್ಲಿನ ರೂಪದಲ್ಲಿ ಪೂಜಿಸಲಾಗುತ್ತಿದೆ. ಜೊತೆಗೆ ಬಂಡೆಗಳನ್ನು ಆಶ್ರಯಿಸಿ ದೇವಾಲಯವನ್ನು ನಿರ್ಮಿಸಲಾಗಿದೆ. ಗುಹಾ ಮುಂಭಾಗದ ಸ್ಥಳವಾಕಾಶವನ್ನು ಅಂತರಾಳವಾಗಿ ಮಾರ್ಪಡಿಸಲಾಗಿದೆ. ಬಂಡೆಗಳ ಎಲ್ಲ ಸಂದು ಭಾಗಗಳನ್ನು ಗೋಡೆಯಿಂದ ತುಂಬಿ ಪೂರ್ಣ ದೇವಾಲಯವನ್ನು ನಿರ್ಮಿಸಲಾಗಿದೆ.

ಶಿಖರವನ್ನು ನೂತನವಾಗಿ ನಿರ್ಮಿಸಲಾಗಿದೆ. ದೇವಾಲಯದ ಹಿಂಭಾಗದಲ್ಲಿ ವಿಜಯನಗರೋತ್ತರ ಕಾಲಘಟ್ಟದ ಕಣಶಿಲೆಯಿಂದ ನಿರ್ಮಿಸಿದ ಮಂಟಪದ ರಚನೆಯ ಕಂಬಸಾಲುಗಳಿವೆ. ಇದು ಪಾಳೆಯಗಾರರ ಕಾಲದಲ್ಲಿ ನಿರ್ಮಿಸಿರುವ ಮಂಟಪವಾಗಿದೆ. ಇದರ ರಚನೆ ಅರ್ಧದಲ್ಲಿ ನಿಂತಿರುವುದು ಕಂಡುಬರುತ್ತದೆ. ಕಂಭಗಳಲ್ಲಿ ಭಕ್ತ, ಭಕ್ತೆ, ಶಿಲ್ಪಗಳಿವೆ. ಭಕ್ತ ಶಿಲ್ಪವು ಅಂಜಲಿ ಬದ್ಧವಾಗಿದ್ದು, ಪಕ್ಕದಲ್ಲಿ ಬಾಣದ ಶಿಲ್ಪವನ್ನು ತೋರಿಸಲಾಗಿದೆ.

**ಗುಂಡ್ಲಹಳ್ಳಿ ಗುಡ್ಡದ ರಂಗನಾಥಸ್ವಾಮಿ ದೇವಾಲಯ :**

ತುಮಕೂರ ಜಿಲ್ಲೆ ಮಧುಗಿರಿ ತಾಲೂಕಿನ ಗುಂಡ್ಲಹಳ್ಳಿಯ ರಂಗನಾಥ ದೇವಾಲಯವು ನಿರ್ಜನವಾದ ಪರಿಸರದಲ್ಲಿದೆ. ಸುತ್ತಲೂ ಹೆಬ್ಬಂಡೆಗಳಿಂದ ಸುತ್ತವರಿದ ಪ್ರದೇಶವಾಗಿದೆ. ಗುಂಡ್ಲಹಳ್ಳಿ ಗ್ರಾಮದಿಂದ ಹೊರಭಾಗದಲ್ಲಿ ಬಂಡೆಗಳ ಮಧ್ಯದಲ್ಲಿದೆ. ದೇವಾಲಯವು ಬೃಹತ್ ಬಂಡೆಗಳಿಂದ ಆವೃತವಾದ ಗುಹಾಮಾದರಿಯ ಗರ್ಭಗೃಹವನ್ನು ಹೊಂದಿದೆ. ಪೂರ್ಣರೂಪದ ಗವಿಯ ರಚನೆಯಲ್ಲಿ ಗುಂಡಕಲ್ಲನ್ನು ರಂಗನಾಥನೆಂದು ಪೂಜಿಸಲಾಗುತ್ತಿದೆ. ಬಂಡೆಗಳಿಗೆ ಆಶ್ರಯವಾಗಿ ನೂತನವಾಗಿ ಕಟ್ಟಡವನ್ನು ನಿರ್ಮಿಸಲಾಗಿದೆ. ಗವಿಯ ಮುಂಭಾಗದಲ್ಲಿರುವ ಬಯಲು ಸ್ಥಳವನ್ನು ಅಂತರಾಳವಾಗಿ ಮಾರ್ಪಡಿಸಲಾಗಿದೆ. ಬಂಡೆಗಳ ಗುಂಪಿನಲ್ಲಿಯೇ ಶಿಖರವನ್ನು ನಿರ್ಮಿಸಿರುವುದು ಕಂಡುಬರುತ್ತದೆ.

**ದಾನವಾಡಿ ರಂಗನಾಥಸ್ವಾಮಿ ದೇವಾಲಯ :**

ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲೂಕಿನ ದಾನವಾಡಿ ರಂಗನಾಥ ದೇವಾಲಯವು ದುರ್ಗಮವಾದ ಬೆಟ್ಟ ಪರಿಸರದಲ್ಲಿ ನೆಲೆಗೊಂಡಿದೆ. ಬೆಟ್ಟವು ಎತ್ತರವಾಗಿದ್ದು ಸಮೃದ್ಧವಾದ ಗಿಡ, ಮರ, ಬಂಡೆಗಳಿಂದ ಆವೃತವಾಗಿದೆ. ಸುಮಾರು ೨೦ ಕಿ.ಮೀ. ಬೆಟ್ಟವನ್ನು ಸುತ್ತುವರೆದು ದೇವಾಲಯದ ಅರ್ಧದಾರಿ ತಲುಪಬಹುದು. ಮುಂದೆ ಕಾಲುದಾರಿಯಲ್ಲಿಯೇ ಬೆಟ್ಟದಲ್ಲಿ ಸಾಗಬೇಕಾಗುತ್ತದೆ. ಎತ್ತರವಾದ ಬೆಟ್ಟದ ತುದಿಯಲ್ಲಿ ದೇವಾಲಯ ನೆಲೆಗೊಂಡಿದೆ. ವಾಸ್ತುಶೈಲಿ ಲಕ್ಷಣದಿಂದ ನೋಡಿದರೆ ಪಾಳೆಯಗಾರರ ಕಾಲದ ದೇವಾಲಯವೆನಿಸಿದರು, ಗರ್ಭಗೃಹದಲ್ಲಿರುವ ರಂಗನಾಥ ಶಿಲ್ಪವು ಹೊಯ್ಸಳ ಕಾಲದ ಶಿಲ್ಪವೆನಿಸುತ್ತದೆ.

ದೇವಾಲಯವು ಗರ್ಭಗೃಹ, ಅಂತರಾಳ, ಮುಖಮಂಟಪ, ತೆರೆದ ಮುಖಮಂಟಪ ಹೊಂದಿದೆ. ಗರ್ಭಗೃಹದಲ್ಲಿ ರಂಗನಾಥನ ಸ್ಥಾನಕ ಶಿಲ್ಪವಿದೆ. ಗರುಡ ಪೀಠದ ಮೇಲೆ ಚತುರ್ಭುಜನಾದ ರಂಗನಾಥನು ಮೇಲಕೈಯಲ್ಲಿ ಚಕ್ರ, ಶಂಖ, ಕೆಳಕೈಯು ಬಿಲ್ಲು, ಬಾಣ ಹಿಡಿದ ಸುಮಾರು ೩ ಅಡಿ ಎತ್ತರದ ಶಿಲ್ಪವಿದೆ. ಕಪ್ಪು ಶಿಲೆಯಲ್ಲಿದ್ದು ಕೀರಿಟ ಮುಕುಟ, ಆಭರಣ, ಸುಂದರವಾದ ವಸ್ತ್ರ ಅಲಂಕರಣವನ್ನು ಹೊಂದಿದೆ. ಪಾದದ ಅಡಿಯಲ್ಲಿ ಸಣ್ಣದಾದ ಶ್ರೀದೇವಿ ಭೂದೇವಿಯ

ಶಿಲ್ಪಗಳನ್ನು ಕಂಡರಿಸಲಾಗಿದೆ. ರಂಗನಾಥನ ಪ್ರಭಾವಳಿಯ ಸುತ್ತಲೂ ಹೂಬಳ್ಳಿಯ ಅಲಂಕರಣವಿದೆ. ಶಿಲ್ಪವು ಹೊಯ್ಸಳ ಶೈಲಿಯ ಲಕ್ಷಣಗಳನ್ನು ಹೋಲುತ್ತದೆ. ಗರ್ಭಗೃಹದ ದ್ವಾರದ ಇಕ್ಕೆಲದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿದ್ದು, ಲಲಾಟದಲ್ಲಿ ಗಜಲಕ್ಷ್ಮೀಯನ್ನು ಚಿತ್ರಿಸಲಾಗಿದೆ. ಮುಖಮಂಟಪದ ಕಂಬಗಳು ಸರಳ ರಚನೆಯನ್ನು ಹೊಂದಿವೆ. ಮುಖಮಂಟಪದಲ್ಲಿ ಗರ್ಭಗೃಹದ ಎಡಭಾಗದಲ್ಲಿ ಗೋಡೆಗೆ ಒಂದು ಸಪ್ತಮಾತೃಕೆಯರ ಶಿಲ್ಪಗಳ ಪಟ್ಟಿಕೆಯನ್ನು ಸೇರಿಸಲಾಗಿದೆ. ಅಲ್ಲದೆ ಭಕ್ತ-ಭಕ್ತೆಯರ, ಗರುಡ ಶಿಲ್ಪವಿದೆ. ಸಪ್ತಮಾತೃಕೆಯ ಪಟ್ಟಿಕೆಯಿರುವುದು ವಿಶೇಷವಾಗಿದೆ. ಮುಖಮಂಟಪದ ದ್ವಾರಬಂಧದಲ್ಲಿ ತೆರೆದ ಮುಖಮಂಟಪದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪವಿದ್ದು, ಲಲಾಟದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ. ಮುಂಭಾಗದ ನಾಲ್ಕು ಕಂಬಗಳು ಗರುಡ, ಆಂಜನೇಯ, ಭಕ್ತ, ಪದ್ಮ, ಕೃಷ್ಣ ಮುಂತಾದ ಶಿಲ್ಪಗಳನ್ನು ಹೊಂದಿವೆ. ಅಧಿಷ್ಠಾನವು ಸರಳ ರಚನೆಯಿದ್ದು ಭಿತ್ತಿ ಭಾಗ ಕುಡ್ಯ ಸ್ತಂಭದಿಂದ ಕೂಡಿದೆ. ಭಿತ್ತಿಯಲ್ಲಿ ಗಿಳಿ, ಹುಲಿಯನ್ನು ಬೇಟೆಯಾಡುವ ವ್ಯಕ್ತಿ, ಮಿಥುನಶಿಲ್ಪ, ಆನೆ, ವ್ಯಾಳಿ, ಶಿಲ್ಪಗಳಿವೆ. ಶಿಖರವು ಸರಳ ಅಲಂಕರಣೆ ಹೊಂದಿದ್ದು, ಐದು ಪಟ್ಟಿಕೆಗಳು ಮೇಲೆರುತ್ತಾ ಹೋಗಿವೆ. ಅದರ ಮೇಲೆ ಕಳಸವಿದೆ.

**ಪಿಳ್ಳಂಗೆರೆ ರಂಗನಾಥಸ್ವಾಮಿ ದೇವಾಲಯ :**

ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ತಾಲೂಕಿನ ಪಿಳ್ಳಂಗೆರೆ ರಂಗನಾಥಸ್ವಾಮಿ ದೇವಾಲಯ ಪ್ರಸಿದ್ಧಿ ಪಡೆದ ಕ್ಷೇತ್ರವಾಗಿದೆ. ಈ ದೇವಾಲಯ ನೆಲೆಗೊಂಡ ಬೆಟ್ಟಕ್ಕೆ ಮಹೇಂದ್ರಗಿರಿ ಎಂದು ಕರೆಯಲಾಗಿದೆ. ಇದು ಹರಿ-ಹರರ ಕ್ಷೇತ್ರವಾಗಿದೆ. ಒಂದೇ ಗರ್ಭಗೃಹದಲ್ಲಿ ರಂಗ-ಲಿಂಗ ಇಬ್ಬರನ್ನು ಪೂಜಿಸಲಾಗುತ್ತಿದೆ. ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಹೊಂದಿದೆ. ಗರ್ಭಗೃಹ, ಅಂತರಾಳ, ಬಾಗಿಲುವಾಡ ಪ್ರಾಚೀನವಾಗಿದ್ದು, ಮುಖಮಂಟಪವನ್ನು ಸಂಪೂರ್ಣವಾಗಿ ಜಿರ್ಣೋದ್ಧಾರಗೊಳಿಸಲಾಗಿದೆ. ಗರ್ಭಗೃಹವು ಚೌಕಾಕಾರವಾಗಿದ್ದು ರಂಗನಾಥನ ಸ್ಥಾನಕ ಮೂರ್ತಿಶಿಲ್ಪವಿದೆ. ಸ್ವಾಮಿಯು ಗರುಡ ಪೀಠದ ಮೇಲೆ ಚತುರ್ಭುಜನಾಗಿ ನಿಂತಿದ್ದು, ಮೇಲಕೈಯಲ್ಲಿ ಚಕ್ರ, ಶಂಖ, ಕೆಳಕೈಯು ಅಭಯ, ತೊಡೆಗೆ ಆತುಕೊಂಡಂತೆ ನಿರ್ಮಿಸಲಾಗಿದೆ. ರಂಗನಾಥನ ಕೆಳಭಾಗದಲ್ಲಿ ಪಾಣಿವಟ್ಟವಿರುವ ಶಿವಲಿಂಗವಿದೆ. ಅಂತರಾಳವು ಸರಳ ರಚನೆಯಾಗಿದ್ದು, ಆಳ್ವಾರರ ಶಿಲ್ಪವಿದೆ. ನವರಂಗದ ಕಂಬಗಳಲ್ಲಿ ಆಂಜನೇಯ, ಕೃಷ್ಣ, ರಾಮ, ಪದ್ಮ, ನವಿಲುಗಳ ಶಿಲ್ಪಗಳಿವೆ. ದೇವಾಲಯದ ಎಡಭಾಗದಲ್ಲಿ ಹೆಬ್ಬಂಡೆಯಲ್ಲಿ ಆಂಜನೇಯನ ಬಂಡೆಶಿಲ್ಪವಿದೆ. ದೇವಾಲಯದ ಶಿಖರವು ದ್ವಿತಲದಲ್ಲಿದ್ದು ನಾಗರ ಶೈಲಿಯ ಶಿಖರವನ್ನು ಹೊಂದಿದೆ. ಸುತ್ತಲು ಪ್ರಾಕಾರವನ್ನು ಹೊಂದಿದ್ದು, ಪ್ರವೇಶದಲ್ಲಿ ಪ್ರಾಕಾರ ಮಂಟಪವನ್ನು ಹೊಂದಿದೆ. ಪ್ರಾಕಾರದ ಮೇಲೆ ಗೋಪುರದ ರಚನೆಯಿಲ್ಲ.

**ಬೆಳಗೆರೆ ರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕಿನ ಬೆಳಗೆರೆ ಗ್ರಾಮವು ವೇದಾವತಿ ನದಿಯ ಎಡದಂಡೆಯ ಮೇಲಿದೆ. ಗ್ರಾಮದ ಕೆರೆ ಹಿಂಭಾಗದ ಪೂರ್ವ ಭಾಗದಲ್ಲಿ ರಂಗನಾಥ ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ದೇವಾಲಯವು ವಿಜಯನಗರ ಮತ್ತು ಪಾಳೆಯಗಾರರ ಕಾಲದಲ್ಲಿ ನಿರ್ಮಿಸಲಾಗಿದೆ. ದೇವಾಲಯದ ನಿರ್ಮಾಣಕ್ಕೆ ಕಣಶಿಲೆ, ಗಾರೆ, ಇಟ್ಟಿಗೆ ಬಳಸಲಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ, ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಸ್ಥಾನಕ ರಂಗನಾಥನ ಶಿಲ್ಪವಿದೆ. ರಂಗನಾಥನು ಚತುರ್ಭುಜನಾಗಿದ್ದು ಮೇಲ ಕೈಯಲ್ಲಿ ಶಂಖ, ಚಕ್ರ, ಕೆಳಕೈಯು ವರದ ಮತ್ತು ಗದೆಯನ್ನು ಹಿಡಿದ ಶಿಲ್ಪವಾಗಿದೆ. ಅಂತರಾಳವು ಸರಳ ರಚನೆಯಿಂದ ಕೂಡಿದ್ದು ಶ್ರೀಲಕ್ಷ್ಮೀಯ ಮತ್ತು ಶಿವಲಿಂಗದ ಶಿಲ್ಪಗಳಿವೆ. ಶಿವಲಿಂಗದ ಶಿಲ್ಪದ ಮುಂದೆ ನಂದಿಯ ಶಿಲ್ಪವಿದೆ. ಸಭಾಮಂಟಪವು ಪೂರ್ವ ಮತ್ತು ದಕ್ಷಿಣದ ಭಾಗಗಳಲ್ಲಿ ಎರಡು ದ್ವಾರವನ್ನು ಹೊಂದಿದೆ. ಕಂಬಗಳ ಚೌಕಾಕಾರದ ಪಟ್ಟಿಕೆಯಲ್ಲಿ ಗರುಡ, ಆಂಜನೇಯ, ಹಸು, ಶಂಖ, ಚಕ್ರ, ಹಂಸ, ಹಸು ಕರುವಿಗೆ ಹಾಲುಣಿಸುವ ಶಿಲ್ಪಗಳಿವೆ. ಗರ್ಭಗೃಹದ ಸುತ್ತಲು ಪ್ರದಕ್ಷಿಣಾ ಪಥವಿದೆ. ದೇವಾಲಯದ ಪ್ರಸ್ತರ ಭಾಗವು ಗಾರೆ ಶಿಲ್ಪಗಳಿಂದ ಅಲಂಕೃತಗೊಂಡಿದ್ದು ವಿಶೇಷವಾಗಿದೆ. ಈ ಪಟ್ಟಿಕೆವು ವಿವಿಧ ಗಾರೆ ಶಿಲ್ಪಗಳನ್ನು ಹೊಂದಿದೆ. ಪ್ರಸ್ತರದ ಬಲಭಾಗದ ಪಟ್ಟಿಕೆಯಲ್ಲಿ ಗಜಲಕ್ಷ್ಮೀಯ ಶಿಲ್ಪ, ಅಶ್ವಾರೋಹಿಯ ವ್ಯಕ್ತಿ, ಕಾಮಧೇನು, ಆಂಜನೇಯ, ಗರುಡ, ಕೋಲಾಟದ ಸ್ತ್ರೀ ಶಿಲ್ಪಗಳಿದ್ದು, ಎಡಭಾಗದ ಪಟ್ಟಿಕೆಯಲ್ಲಿ ಗಂಡಭೇರುಂಡ ಕಾಮಧೇನು, ಗಜಲಕ್ಷ್ಮೀ, ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ, ನಗ್ನಸ್ತ್ರೀ ಶಿಲ್ಪಗಳು, ಕೃಷ್ಣನ ಶಿಲ್ಪಗಳನ್ನು ತೋರಿಸಲಾಗಿದೆ. ದೇವಾಲಯದ ಅಧಿಷ್ಠಾನವು ಸರಳವಾಗಿದೆ. ಮುಂಭಾಗದಲ್ಲಿ ಗರುಡಸ್ತಂಭವಿದೆ. ಶಿಖರವು ದ್ರಾವಿಡ ಮಾದರಿಯದಾಗಿದ್ದು ದ್ವಿತಲಗಳಿಂದ ಕೂಡಿದೆ.

**ತಂಬ್ರಹಳ್ಳಿ ಬಂಡೆರಂಗನಾಥೇಶ್ವರ ದೇವಾಲಯ :**

ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿಯಲ್ಲಿರುವ ದೇವಾಲಯವು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿದೆ. ಇದು ತುಂಗಭದ್ರಾ ನದಿ ದಂಡೆಯ ಸಮೀಪವಿದೆ. ಆದರೆ ದೇವಾಲಯವು ಯಾವ ಪಾಳೆಯಗಾರರು ನಿರ್ಮಿಸಿದರು ಎಂಬುವುದರ ಬಗ್ಗೆ ಸ್ಪಷ್ಟತೆ ಇಲ್ಲ. ದೇವಾಲಯವು ಎತ್ತರವಾದ ಬಂಡೆಯ ಹಾಸಿಗೆಯ ಮೇಲೆ ನಿರ್ಮಿತವಾಗಿದೆ. ಇಲ್ಲಿ ವಿಶೇಷವೆಂದರೆ ದೇವಾಲಯದ ಗರ್ಭಗೃಹ. ಬೃಹತ್ ಹೆಬ್ಬಂಡೆಗೆ ಸೇರಿಕೊಂಡೆ ಗರ್ಭಗೃಹ ನಿರ್ಮಿಸಲಾಗಿದೆ. ದೇವಾಲಯದ ಒಳಭಾಗದಲ್ಲಿ ಅದೇ ಬಂಡೆಯ ಮೇಲೆ ರಂಗನಾಥನ ಶಯನ ಅಸ್ಪಷ್ಟ ಮೂರ್ತಿಶಿಲ್ಪವಿದೆ. ಇದನ್ನು ಗ್ರಾಮಸ್ಥರು ಸ್ವತಹ ಒಡಮೂಡಿರುವುದು ಎಂದು

ಅಭಿಪ್ರಾಯಿಸುತ್ತಾರೆ. ಅಲ್ಲದೆ ಶಯನ ಶಿಲ್ಪದಲ್ಲಿ ತಲೆಯ ಮೇಲೆ ಐದು ಹೆಡೆಯ ಸರ್ಪ, ಬಿಲ್ಲು ಬಾಣಗಳನ್ನು ತೋರಿಸಲಾಗಿದೆ. ಬಂಡೆಗಲ್ಲುಗಳಿಂದ ಕೂಡಿದ ಗರ್ಭಗೃಹವು ಗುಹೆಯ ಮಾದರಿಯನ್ನು ಹೋಲುತ್ತದೆ. ಶಯನ ಶಿಲ್ಪದ ಎಡಭಾಗದಲ್ಲಿ ಒಂದು ಸಣ್ಣ ಗೋಲಾಕಾರದಲ್ಲಿ ಶಿವಲಿಂಗವು ಉದ್ಭವವಾಗಿದೆ. ಅದಕ್ಕಾಗಿಯೇ ದೇವಾಲಯವನ್ನು ಶ್ರೀ ರಂಗನಾಥೇಶ್ವರ ಎಂದು ಕರೆಯುವುದು ಪ್ರಚಲಿತದಲ್ಲಿದೆ. ಅಲ್ಲದೇ ಎರಡು ದೇವರುಗಳಿಗೆ ವೈಷ್ಣವ ಮತ್ತು ಶೈವ ಪೂಜಾ ಪದ್ಧತ್ತಿಯಲ್ಲಿ ಪೂಜಿಸಲಾಗುತ್ತದೆ.

ನವರಂಗದಲ್ಲಿ ೧೬ ಕಂಭಗಳಿದ್ದು ಚೌಕ ಪಟ್ಟಿಕೆಗಳಿಂದ ಕೂಡಿವೆ. ಪ್ರತಿ ಕಂಬವು ವಿವಿಧ ರೀತಿಯ ಶಿಲ್ಪಗಳಿಂದ ಅಲಂಕೃತಗೊಂಡಿವೆ. ವಿಠಲ, ಕೃಷ್ಣ, ಕಾಳಿಂಗ ಮರ್ಧನ, ಆಂಜನೇಯ, ವ್ಯಾಳ, ಲಜ್ಜಾಗೌರಿ, ಪದ್ಮ, ಬಾಲಕೃಷ್ಣ, ಗಣೇಶ, ಗೋಪಾಲಕೃಷ್ಣ, ಲಕ್ಷ್ಮೀಯ ಶಿಲ್ಪಗಳು ಕಂಡುಬರುತ್ತವೆ. ಗರ್ಭಗೃಹ ಮತ್ತು ನವರಂಗದ ದ್ವಾರದ ಇಕ್ಕೆಲದಲ್ಲಿ ಎಡ ಮತ್ತು ಬಲಭಾಗದಲ್ಲಿ ವೈಷ್ಣವರ ದ್ವಾರಪಾಲಕ ಶಿಲ್ಪಗಳಿವೆ. ದೇವಾಲಯದ ಎಡಭಾಗದಲ್ಲಿ ಲಕ್ಷ್ಮೀ ಅಮ್ಮನವರ ಸನ್ನಿಧಿ ಇದೆ. ದೇವಾಲಯವು ದ್ರಾವಿಡ ಶೈಲಿಯಿದ್ದು, ಐದು ತಲಗಳನ್ನು ಹೊಂದದೆ. ಪ್ರಸ್ತುತ ಸಂಪೂರ್ಣವಾಗಿ ಜಿರ್ಣೋದ್ಧಾರಗೊಂಡಿದೆ. ದೇವಾಲಯ ಮುಂಭಾಗದಲ್ಲಿ ಬಲಿಪೀಠ, ಗರುಡಸ್ತಂಭ, ಸುತ್ತಲೂ ಪ್ರಾಕಾರವನ್ನು ಹೊಂದಿದೆ. ಪ್ರಾಕಾರದ ಹೊರಭಾಗದಲ್ಲಿ ಉತ್ಸವ ಮಂಟಪವಿದೆ. ತುಂಗಭದ್ರಾ ನದಿಯ ದಡದ ಹತ್ತಿರ ಸ್ವಾಮಿಯ ಪಾದದ ಮಂಟಪವನ್ನು ನಿರ್ಮಿಸಲಾಗಿದೆ. ವಿಸ್ತಾರವಾದ ಬಂಡೆಹಾಸಿಗೆಯ ಮೇಲೆ ಮೂರು ಶಾಸನಗಳು ದೊರೆತಿವೆ. ಇವು ಗ್ರಾಮದ ಮುಖ್ಯಸ್ಥರು ರಂಗನಾಥ ದೇವರಿಗೆ ಉತ್ಸವ ಮಂಟಪವನ್ನು ಕಟ್ಟಿಸಿ ದಾನವನ್ನು ನೀಡಿರುವುದರ ಬಗ್ಗೆ ಹಾಗೂ ದೇವಾಲಯದ ಪಕ್ಕದಲ್ಲಿರುವ ಗಜಾ ಹೊಂಡವನ್ನು ನಿರ್ಮಿಸಿರುವ ಬಗೆಗೆ ತಿಳಿಸುತ್ತವೆ.[೧೬] ಆದರೆ ಯಾವುದೇ ರೀತಿಯ ಕಾಲದ ಉಲ್ಲೇಖವನ್ನು ನೀಡುವುದಿಲ್ಲ.

**ಮರಡಿಗುಡ್ಡದ ರಂಗನಾಥಸ್ವಾಮಿ ದೇವಾಲಯ :**

ರಂಗನಾಥಪುರ ಶಿರಾ ಬುಕ್ಕಾಪಟ್ಟಣ ರಸ್ತೆಯಲ್ಲಿ ಕಂಬದಳ್ಳಿ ಗೇಟ್‌ನಿಂದ ಎಡಭಾಗಕ್ಕೆ ನಾಲ್ಕು ಕಿಲೋಮೀಟರ್ ದೂರದಲ್ಲಿಯೂ, ಶಿರಾದಿಂದ ೧೮ ಕಿ.ಮೀ. ದೂರದಲ್ಲಿದೆ. ಈ ದೇವಾಲಯವು ಮರಡಿಗುಡ್ಡದ ಮೇಲೆ ಇರುವುದರಿಂದ ಅದಕ್ಕೆ ಮರಡ್ಡಿಗುಡ್ಡದ ರಂಗನಾಥಸ್ವಾಮಿ ಎಂದು ಕರೆಯಲಾಗುತ್ತದೆ. ಗುಡ್ಡದ ಮೇಲೆ ದೇವಾಲಯವಿರುವುದರಿಂದ ಅದೇ ಹೆಸರಿನಲ್ಲಿ ಗುಡ್ಡದ ತಳಭಾಗದಲ್ಲಿ ರಂಗನಾಥಪುರವೆಂಬ ಗ್ರಾಮ ಉದಯವಾಗಿದೆ. ಮೂಲತಃ ದೇವಾಲಯ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹವು ಚಿಕ್ಕದಾಗಿದ್ದು ರಂಗನಾಥನನ್ನು ಉದ್ಭವ ಗುಂಡುಕಲ್ಲು ರೂಪದಲ್ಲಿ ಪೂಜಿಸಲಾಗುತ್ತಿದೆ. ನಂತರ ಸುಖನಾಸಿ ಇದ್ದು ಇಲ್ಲಿ ಸ್ವಾಮಿಯ ಧನಸ್ಸು, ಬಾಣ,

ನಾಗರ ವಿಗ್ರಹಗಳು, ಗಣಪತಿ, ಭಕ್ತೆ-ಭಕ್ತರ ಶಿಲ್ಪ, ಮತ್ತು ಆಂಜನೇಯನ ಸಣ್ಣ ಶಿಲ್ಪಗಳನ್ನು ಇಡಲಾಗಿದೆ. ಇವು ಕಪ್ಪು ಶಿಲೆಯಲ್ಲಿವೆ. ನವರಂಗದಲ್ಲಿ ನಾಲ್ಕು ವಿನ್ಯಾಸವುಳ್ಳ ಕಲ್ಲಿನ ಕಂಬಗಳಿದ್ದು ಇವುಗಳನ್ನು ಆರು ಭಾಗಗಳಾಗಿ ವಿಂಗಡಿಸಬಹುದು. ತಳಪಟ್ಟಿಗೆ, ಆರು ದಳಗಳು, ಚಚ್ಚೌಕಾರದ ಪಟ್ಟಿಕೆಗಳು ಹೂಗಳ, ವಿವಿಧ ಚಿತ್ರಗಳನ್ನು ಕಂಬಗಳ ಮೇಲೆ ಕೆತ್ತಲಾಗಿದೆ. ಒಳ ಛಾವಣಿಯಲ್ಲಿ ಕಮಲದ ಹೂವನ್ನು ಬಿಡಿಸಲಾಗಿದೆ. ಬೃಹದಾಕಾರದ ಸರ್ಪವನ್ನು ಮೇಲ್ಛಾವಣಿಯಲ್ಲಿ ಕೆತ್ತಲಾಗಿದೆ. ಮೆರವಣಿಗೆಯಲ್ಲಿ ಬಳಸುವ ಭೂತಪ್ಪನ ಹರಿಗೆಗಳು, ಜಾಗಟೆ, ಭವನಾಸಿ, ಕತ್ತಿ, ಘಂಟೆಗಳು, ನಗಾರಿ, ಛತ್ರಿಗಳು ಮುಂತಾದ ವಸ್ತುಗಳನ್ನು ಇಡಲಾಗಿದೆ. ಉತ್ತರ ದಿಕ್ಕಿನಲ್ಲಿ ದಾಸೋಹದ ಕಡೆಗೆ ಒಂದು ಚಿಕ್ಕ ಬಾಗಿಲು ಇದೆ. ಗರ್ಭಗೃಹದ ಎಡಭಾಗಕ್ಕೆ ನವರಂಗದಲ್ಲಿ ಶ್ರೀಲಕ್ಷ್ಮೀ ಅಮ್ಮನವರ ಸನ್ನಿಧಿ ಇದೆ. ಇಲ್ಲಿ ಅಮ್ಮನವರು ವಿವಿಧ ಆಭರಣಗಳಿಂದ ಭೂಷಣಗೊಂಡಿದ್ದು ಪ್ರತಿಷ್ಠಾಪಿಸಲಾಗಿದೆ. ಇದೇ ನವರಂಗದಲ್ಲಿ ಸ್ವಾಮಿಯ ಗರ್ಭಗೃಹದ ದಕ್ಷಿಣಕ್ಕೆ ಮತ್ತೊಂದು ಗರ್ಭಗೃಹವಿದೆ. ಇಲ್ಲಿ ಆಳ್ವಾರರ ಮತ್ತು ಶ್ರೀ ರಾಮಾನುಜಾಚಾರ್ಯರ ವಿಗ್ರಹಗಳಿವೆ.

ನಂತರದಲ್ಲಿ ಮುಖಮಂಟಪ ರಚನೆಯಿದ್ದು, ಬಹುವಿಸ್ತಾರವಾಗಿದೆ. ಇದು ಬೃಹದಾಕಾರದ ಆರು ಕಲ್ಲಿನ ಕಂಬಗಳಿಂದ ನಿರ್ಮಾಣಗೊಂಡಿದೆ. ಈ ಕಂಬಗಳಲ್ಲಿ ೧೬ ಚೌಕಪಟ್ಟಿಕೆಗಳು ಕಂಡುಬರುತ್ತವೆ. ಈ ಪಟ್ಟಿಕೆಗಳ ಮೇಲೆ ನಾಲ್ಕು ದಿಕ್ಕುಗಳಿಗೂ ವಿವಿಧ ರೂಪದ ಚಿತ್ರಗಳು, ಸುಂದರವಾದ ಹೂವುಗಳು, ಚಕ್ರ, ಮತ್ತು ಹಂಸ ಈ ಹಂಸಗಳು ಶಿವನನ್ನು ಪೂಜಿಸುತ್ತಿರುವ ಚಿತ್ರಗಳನ್ನು ಕೆತ್ತಲಾಗಿದೆ. ಛಾವಣಿಯಲ್ಲಿ ವಿವಿಧ ಶಿಲ್ಪಗಳು ಕಂಡುಬರುತ್ತವೆ. ಮುಖ್ಯವಾಗಿ ಗಂಡಭೇರುಂಡ, ಪಕ್ಷಿಗಳ ಚಿತ್ರ, ಪುರಷಮೃಗ, ಬಳ್ಳಿ, ಹೂಗಳ, ಕಾಮಧೇನುವಿನ ವಿಗ್ರಹ, ಮೀನನ್ನು ಹಿಡಿಯುವ ಕೊಕ್ಕರೆಯ ಚಿತ್ರ, ಬೃಹದಾಕಾರದ ಆದಿಶೇಷನ ಚಿತ್ರ, ಮಂಗವು ಹಾವನ್ನು ಹಿಡಿದಿರುವ ಚಿತ್ರ, ಎರಡು ಮೀನುಗಳು ವಿರುದ್ಧ ದಿಕ್ಕಿನಲ್ಲಿ ಹೂವುಗಳನ್ನು ನುಂಗುತ್ತಿರುವ ಚಿತ್ರ ಬಿಡಿಸಲಾಗಿದೆ. ದ್ವಾರಬಂಧದಲ್ಲಿ ಎಡಬಲಕ್ಕೆ ಸುಮಾರು ನಾಲ್ಕು ಅಡಿ ಎತ್ತರದ ದ್ವಾರಪಾಲಕರ ಶಿಲ್ಪಗಳಲ್ಲಿದ್ದು, ಶಂಖ, ಚಕ್ರ ಮತ್ತು ಗದೆಯನ್ನು ಹಿಡಿದಿದ್ದಾರೆ. ಮಹಾದ್ವಾರದ ಲಲಾಟದಲ್ಲಿ ಗಜಲಕ್ಷ್ಮೀಯ ಶಿಲ್ಪವನ್ನು ಕೆತ್ತಲಾಗಿದೆ. ಗೋಪುರವು ಸಂಪೂರ್ಣವಾಗಿ ನೂತನವಾಗಿ ನಿರ್ಮಿಸಲಾಗಿದೆ.

ಈ ದೇವಾಲಯವನ್ನು ಚಿತ್ರದುರ್ಗದ ಪಾಳೆಯಗಾರರ ಕಾಲದ ಕಸ್ತೂರಿರಂಗಪ್ಪನಾಯಕರು ನಿರ್ಮಿಸಿರುವರೆಂದು ದೇವಾಲಯದ ಅರ್ಚಕರು ತಿಳಿಸುತ್ತಾರೆ. ಆದರೆ ಮೂಲದಲ್ಲಿ ಪಾಳೆಯಗಾರರ ಕಾಲದ ದೇವಾಲಯವಾಗಿದ್ದು, ಪ್ರಸ್ತುತ ಜೀರ್ಣೋದ್ಧಾರಗೊಂಡಿದ್ದು ಕಣಶಿಲೆಯಿಂದ ನಿರ್ಮಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಗರುಡಸ್ತಂಭವಿದೆ. ದೇವಾಲಯ ಎಡಭಾಗದಲ್ಲಿ ಉತ್ಸವ ಮಂಟಪ, ದಾಸೋಹ ಮಂಟಪಗಳಿವೆ. ದೇವಾಲಯದ ಆವರಣದಲ್ಲಿ ಎರಡು ವೀರಗಲ್ಲುಗಳಿದ್ದು ಪಾಳೆಯಗಾರರ ಕಾಲದ್ದಾಗಿವೆ.

**ಹಳ್ಳೂರು ರಂಗನಾಥಸ್ವಾಮಿ ದೇವಾಲಯ :**

ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕಿನ ಹಳ್ಳೂರಿನಲ್ಲಿರುವ ಈ ದೇವಾಲಯವು ಗ್ರಾಮದ ಎತ್ತರವಾದ ಬೆಟ್ಟದ ಮೇಲಿದೆ. ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ, ಮುಖಮಂಟಪವನ್ನು ಹೊಂದಿದೆ. ಮೂಲಗರ್ಭಗೃಹವು ಪ್ರಾಚೀನವಾಗಿದೆ. ನಂತರದ ಭಾಗಗಳು ಅನೇಕ ಭಾರಿ ಜೀರ್ಣೋದ್ಧಾರಕ್ಕೆ ಒಳಪಟ್ಟಿವೆ ಎಂಬುದನ್ನು ಗುರುತಿಸಬಹುದು. ದೇವಾಲಯಕ್ಕೆ ಮೈಸೂರು ಒಡೆಯರ ಕಾಲದಲ್ಲಿ ೧೬೨ ಟಸ್ತಿಕ್ಸಗಳನ್ನು ಕೊಡುತ್ತಿದ್ದರು ಎಂದು ಅರ್ಚಕರು ತಿಳಿಸುತ್ತಾರೆ. ಗರ್ಭಗೃಹದದಲ್ಲಿ ಉದ್ಭವಲಿಂಗ ರೂಪದ ಮೂರ್ತಿ ಇದ್ದು ಭಕ್ತರಿಂದ ನಿತ್ಯವೂ ರಂಗನಾಥಸ್ವಾಮಿ ನಾಮಾಂಕಿತದಲ್ಲಿ ಆರಾಧನೆಗೆ ಒಳಪಟ್ಟಿದೆ. ಅಂತರಾಳದಲ್ಲಿ ಉತ್ತರ ದಕ್ಷಿಣ ಎರಡು ಕಡೆ ದ್ವಾರವಿರುವುದು ಕಂಡುಬರುತ್ತದೆ. ಪ್ರಸ್ತುತ ಉತ್ತರ ದಿಕ್ಕಿನಲ್ಲಿರುವ ದ್ವಾರವನ್ನು ಮುಚ್ಚಿದ್ದಾರೆ. ದಕ್ಷಿಣದ ಕಡೆಯ ದ್ವಾರವು ತೆರೆದುಕೊಂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವನ್ನು ಕೆತ್ತಲಾಗಿದೆ. ದ್ವಾರದ ಇಕ್ಕೆಲದಲ್ಲಿ ಬಲಭಾಗದಲ್ಲಿ ಆಂಜನೇಯ ಮತ್ತು ಎಡಭಾಗದ ದ್ವಾರದ ಇಕ್ಕೆಲದಲ್ಲಿ ಸರ್ಪವನ್ನು ಕೈಯಲ್ಲಿ ಹಿಡಿದಿರುವ ಗರುಡನ ಸ್ಥಾನಕ ಮೂರ್ತಿಶಿಲ್ಪಗಳಿವೆ.

ಹಾಗೇ ಮುಂದುವರೆಯುತ್ತ ಸಭಾಮಂಟವಿದ್ದು, ಅದರ ದ್ವಾರಬಂಧವು ಸ್ತಂಭ ಪಟ್ಟಿಕೆಯ ಅಲಂಕರಣೆಯನ್ನು ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮೀಯ ಉಬ್ಬು ಶಿಲ್ಪವಿದೆ. ದ್ವಾರದ ಇಕ್ಕೆಲದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಸಭಾಮಂಟಪ ೧೬ ಕಂಬಗಳನ್ನು ಹೊಂದಿದ್ದು, ಮಧ್ಯದ ಆರು ಕಂಬಗಳು ಗಾತ್ರದಲ್ಲಿ ದಪ್ಪವಾಗಿದ್ದು ಶಿಲ್ಪಗಳ ಅಲಂಕರಣೆಯನ್ನು ಹೊಂದಿದೆ. ಈ ಕಂಬಗಳಲ್ಲಿ ಚೌಕ ಮತ್ತು ಚತುರಾಸ್ರ ಭಾಗಗಳನ್ನು ಒಳಗೊಂಡ ಒಂದು ರೀತಿಯ ಕಂಬಗಳಿವೆ. ಮತ್ತೊಂದು ಪೀಠಭಾಗದಲ್ಲಿ ಚೌಕಾಕಾರವಿದ್ದು, ದಂಡ ಭಾಗವು ೧೬ ಭಾಗಗಳಿಂದ ಕೂಡಿದ ಕಂಬಗಳಾಗಿದ್ದು ಎರಡು ಕಂಬಗಳ ಭೋದಿಗೆಯ ಭಾಗ ಬೇರೆ ಬೇರೆಯಾಗಿವೆ. ಕಂಭಗಳಲ್ಲಿ ಭಕ್ತರ ಶಿಲ್ಪಗಳು, ಭೇಟಿಗೆ ಸಿದ್ಧವಾಗಿರುವ ಪತಿ ಪತ್ನೀಯ ಜೊತೆಗಿನ ಶಿಲ್ಪ, ಚೌರಿ ಹಿಡಿದಿರುವ ವ್ಯಕ್ತಿ ಶಿಲ್ಪ, ಆಂಜನೇಯ ಶಿಲ್ಪ, ಶ್ರೀಕೃಷ್ಣ, ಗಜವೇರಿದ ಸೈನಿಕ, ಉಗ್ರನರಸಿಂಹ, ಶ್ರೀ ಭೂದೇವಿಯರ ಸಮೇತ ವಿಷ್ಣು, ಆಕಳು ಮತ್ತು ಮಹಿಳೆ, ವ್ಯಕ್ತಿಯೊಬ್ಬಳು ಹಸುವಿನ ಹಾಲು ಕರೆಯುತ್ತಿರುವ ಶಿಲ್ಪ, ಭಕ್ತ-ಭಕ್ತೆಯರ ಶಿಲ್ಪ ಇಲ್ಲಿ ಭಕ್ತನು ತನ್ನ ಎಡಕ್ಕೆ ಹೆಗಲ ಮೇಲಿಂದ ಕೆಳಗೆ ನವಿಲೊಂದನ್ನು ಕಟ್ಟಿಕೊಂಡು ತೂಗುಬಿಟ್ಟಿರುವ ಶಿಲ್ಪ, ಚಾಮರ ಹಿಡಿದಿರುವ ಮಹಿಳೆ ತನ್ನ ಎಡಕೈಯಿಂದ ಮಗುವಿನ ಕೈಯನ್ನು ಹಿಡಿದಿರುವ ಶಿಲ್ಪ, ಪುರುಷಮೃಗ, ಗೋಪಿಕಾ ಸ್ತ್ರೀ ವಸ್ತ್ರಾಪಹರಣದ ಕೃಷ್ಣನ ಶಿಲ್ಪ ಇತ್ಯಾದಿ ಶಿಲ್ಪಗಳು ಕಂಡುಬರುತ್ತವೆ. ದೇವಾಲಯದ ಅಧಿಷ್ಠಾನವು ಸರಳವಾಗಿದೆ. ಶಿಖರವು ಜೀರ್ಣೋದ್ಧಾರಗೊಂಡಿದೆ.

**ಕೊಣಚಗಲ್ ರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆ ಜಗಳೂರ ತಾಲೂಕಿನ ಕೊಣಚಗಲ್ ಗವಿರಂಗನಾಥ ಸ್ವಾಮಿಯು ಗ್ರಾಮದ ಹೊರಭಾಗದ ಎತ್ತರವಾದ ಬೆಟ್ಟವಾಗಿದೆ. ಬೆಟ್ಟವನ್ನು ಬಹುದೂರದ ವರೆಗೆ ಸುತ್ತುವರೆದು ದೇವಾಲಯ ತಲುಪಬೇಕಾಗುತ್ತದೆ. ಹೊರಭಾಗದಿಂದ ದೇವಾಲಯವಿರುವುದು ಗೋಚರಿಸುವುದಿಲ್ಲ. ದೇವಾಲಯದ ವಿಶೇಷವೆಂದರೆ ಬೃಹತ್ ಕಣಶಿಲೆಯ ಕಲ್ಲು ಬಂಡೆಗಳಿಂದ ಆವೃತವಾದ ಗುಹಾಲಯ ಮಾದರಿಯ ಗರ್ಭಗೃಹವಿದೆ. ಈ ಸ್ಥಳವು ರಂಗನಾಥನ ಪ್ರಾಚೀನ ಆರಾಧನಾ ನೆಲೆಯಾಗಿದೆ. ಇದು ಬೇಟೆ ಮತ್ತು ಪಶುಪಾಲಕ ಜನಸಮುದಾಯದ ನೆಲೆಯಾಗಿರುವಂತೆ ಕಂಡುಬರುತ್ತದೆ. ಗರ್ಭಗೃಹದಲ್ಲಿ ಉದ್ಭವ ಕಲ್ಲುಬಂಡೆಯನ್ನು ರಂಗನಾಥನೆಂದು ಆರಾಧಿಸುತ್ತಿದ್ದಾರೆ. ದೇವಾಲಯವು ಪೂರ್ಣ ಗುಹಾರೂಪದ ಗರ್ಭಗೃಹ, ಅಂತರಾಳ, ನವರಂಗ, ಹಾಗೂ ತೆರೆದ ಮುಖಮಂಟಪ ಹೊಂದಿದೆ.

ನವರಂಗದಲ್ಲಿ ನಾಲ್ಕು ಗ್ರಾನೈಟ್ ಶಿಲೆಯ ಬೃಹತ್ ಕಂಬಗಳಿವೆ. ಆ ಕಂಬಗಳು ಚೌಕ-ಚತುರಶ್ರವಾಗಿದ್ದು ಇಲ್ಲಿನ ಚೌಕಾಕಾರದ ಭಾಗದಲ್ಲಿ ಮತ್ಸ್ಯ, ಗರುಡ, ಹನುಮ, ಹಂಸ, ಯಾಳಿ, ಯತಿ, ಲಿಂಗದೊಡನೆ ಇರುವ ನಂದಿ, ಶಂಖ, ಮೃದಂಗ ಬಾರಿಸುವವ, ವಿಷ್ಣು, ಚಕ್ರ, ಲಕ್ಷ್ಮೀ ನರಸಿಂಹ ಮುಂತಾದ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಕಂಬಗಳ ಮೇಲಿನ ಬೋದಿಗೆಯು ಪುಷ್ಪಗಳ ಅಲಂಕಾರದಿಂದ ಕೂಡಿದೆ. ಕಂಬಗಳ ಮಧ್ಯದ ಮುಚ್ಚಗೆಯಲ್ಲಿ ಪದ್ಮವಿದೆ. ನವರಂಗದ ಪಶ್ಚಿಮ ಗೋಡೆಯ (ಅಂತರಾಳ ಭಿತ್ತಿ) ಯಲ್ಲಿ ಗಣೇಶನ ಶಿಲ್ಪವಿದೆ. ನವರಂಗಕ್ಕೆ ಉತ್ತರ ಮತ್ತು ಪೂರ್ವದಲ್ಲಿ ದ್ವಾರಗಳಿದ್ದು, ಉತ್ತರ ದ್ವಾರದ ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿದ್ದು ತ್ರಿಭಂಗದಲ್ಲಿ ನಿಂತಿದ್ದಾರೆ. ದ್ವಾರವು ಸರಳ ರೀತಿಯ ಅಲಂಕರಣೆಯನ್ನು ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವನ್ನು ಕೆತ್ತಲಾಗಿದೆ. ಪೂರ್ವ ದ್ವಾರದ ಕೆಲ ಭಾಗದಲ್ಲಿ ವೈಷ್ಣವ ದ್ವಾರ ಪಾಲಕರ ಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ.

ಮುಖಮಂಟಪವು ತೆರೆದ ರೀತಿಯಲ್ಲಿದ್ದು, ಅದರಲ್ಲಿ ಎಂಟು ಬೃಹತ್ತ ಗಾತ್ರದ ಕಂಬಗಳಿವೆ. ಅವು ಚೌಕ ಚತುರಶ್ರಾಕಾರವಾಗಿವೆ. ಚೌಕಕಾರದ ಭಾಗದಲ್ಲಿ ವಿವಿಧ ಶಿಲ್ಪಗಳನ್ನು ಕೆತ್ತಲಾಗಿದೆ. ಹಣ್ಣು ತಿನ್ನುತ್ತಿರುವ ಕೋತಿ, ಹಾವನ್ನು ಹಿಡಿದಿರುವ, ಆಂಜನೇಯ, ನಂದಿ, ಯತಿಗಳು ಮೂರು ತಲೆಯ ಹಾವು, ಲಿಂಗಕ್ಕೆ ಹಾಲನ್ನು ಸುರಿಸುತ್ತಿರುವ ಹಸು, ಕೈಯಲ್ಲಿ ಬಿಲ್ಲು ಹಿಡಿದ ಪುರುಷ, ಕತ್ತಿ ಹಿಡಿದಿರುವ ಸ್ತ್ರೀ ಮುಂತಾದ ಶಿಲ್ಪಗಳು ಆಕರ್ಷಕವಾಗಿವೆ. ಮುಖಮಂಟಪದ ಪಶ್ಚಿಮ ಭಿತ್ತಿಯಲ್ಲಿ (ನವರಂಗ ದ್ವಾರದ ಭಿತ್ತಿಯಲ್ಲಿ) ಜೋಡಿ ಮೀನು, ಕದನದಲ್ಲಿ ತೊಡಗಿದ ಆನೆಗಳು ಎಡಭಾಗದಲ್ಲಿ ಇದ್ದರೆ, ಬಲಭಾಗದ ಭಿತ್ತಿಯಲ್ಲಿ ಮಿಥುನ ಶಿಲ್ಪಗಳಿವೆ.

ದೇವಾಲಯದ ಅಧಿಷ್ಠಾನವು ಯಾವುದೇ ಅಲಂಕರಣೆಯಿಲ್ಲದೆ ಸರಳವಾಗಿದೆ. ಭಿತ್ತಿಯು ಸರಳ ರೀತಿಯಲ್ಲಿದ್ದು, ಭಿತ್ತಿಯ ಮೇಲಿನ ಕಪೋತ ಭಾಗವು ದೇವಾಲಯದ ಸುತ್ತಲು ಸ್ವಲ್ಪ ಮುಂದೆ ಚಾಚಿ, ಕೆಳ ಭಾಗದ ರೀತಿಯಲ್ಲಿದ್ದು ಅದರಲ್ಲೂ ಯಾವುದೇ ಅಲಂಕಾರವಿಲ್ಲ. ದೇವಾಲಯದ ಮುಂಭಾಗದಲ್ಲಿ ಕಣಶಿಲೆಯ ದೀಪಸ್ತಂಭ ಹಾಗೂ ಗರುಡ ಸ್ತಂಭಗಳಿವೆ. ಈ ಸ್ತಂಭಗಳ ಕೆಳಭಾಗದ ಕಟ್ಟೆ (ಜಗಲಿ)ಯಲ್ಲಿ ಅಂಜಲಿ ಹಸ್ತರಾಗಿರುವ ಸ್ತ್ರೀ ಮತ್ತು ಪುರುಷ ಭಕ್ತ ಶಿಲ್ಪಗಳಿವೆ. ಬೆಟ್ಟದ ಪರಿಸರದಲ್ಲಿ ದೇವಾಲಯದ ಎಡಭಾಗದಲ್ಲಿ ಶ್ರೀ ಮಹಾಕಂಪಳಿ ಮಾರಮ್ಮನ ಮತ್ತು ಭೂತಪ್ಪನ ದೇವಾಲಯವಿದೆ. ಬೆಟ್ಟದ ಕೆಳಭಾಗದಲ್ಲಿ ಆಂಜನೇಯ, ಮತ್ತು ಒಂದು ವೈಷ್ಣವ ದೇವಾಲಯ ಮತ್ತು ಪುಷ್ಕರಣಿಯಿದೆ. ದೇವಾಲಯವು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿದೆ.

**ಶಂಕರನಹಳ್ಳಿ ರಂಗನಾಥಸ್ವಾಮಿ ದೇವಾಲಯ :**

ದಾವಣಗೆರೆ ಜಿಲ್ಲೆ ದಾವಣಗೆರೆ ತಾಲೂಕಿನ ಶಂಕರನಹಳ್ಳಿ ರಂಗನಾಥ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಹೊಂದಿದೆ. ಗರ್ಭಗೃಹ ಚೌಕಾಕಾರವಾಗಿದ್ದು, ಗುಂಡುಕಲ್ಲು ಒಂದನಿಟ್ಟು ರಂಗನಾಥನೆಂದು ಆರಾಧಿಸಲಾಗುತ್ತಿದೆ. ಗರ್ಭಗೃಹದ ದ್ವಾರಬಂಧದ ಇಕ್ಕೆಲದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ. ಅಂತರಾಳ, ನವರಂಗವು ಸರಳ ರಚನೆಯನ್ನು ಹೊಂದಿದೆ. ನವರಂಗದಲ್ಲಿನ ಕಂಬವು ಚೌಕ ಚತುರಾಸ್ರ ಚೌಕ ಕಂಬಗಳನ್ನು ಹೊಂದಿದೆ. ಮೇಲ್ಭಾಗದಲ್ಲಿ ಪುಷ್ಪ ಬೋದಿಗೆಯನ್ನು ಹೊಂದಿದ್ದು, ನಾಲ್ಕು ದಿಕ್ಕಿನಲ್ಲೂ ತಾವರೆಯ ಮೊಗ್ಗು ಇಳಿಬಿದ್ದ ರೀತಿಯ ಅಲಂಕರಣವಿದೆ. ನವರಂಗದ ಉತ್ತರ ಮತ್ತು ದಕ್ಷಿಣಕ್ಕೆ ದ್ವಾರಗಳಿವೆ. ಈ ದೇವಾಲಯದ ವಿಶೇಷವೆಂದರೆ ದೇವಾಲಯದ ಮುಖ್ಯದ್ವಾರ ಮತ್ತು ನವರಂಗದ ಉತ್ತರ ದಕ್ಷಿಣ ದ್ವಾರಬಂಧಗಳ ರಚನೆಯು ಒಂದೇ ರೀತಿಯಾಗಿರುವುದು. ಅಲ್ಲದೆ ಉತ್ತರ ದಕ್ಷಿಣ ದ್ವಾರಗಳ ಕಪೋತದಲ್ಲಿ ಪುಷ್ಪ ಪ್ರಣಾಳ ತೋರಿಸಿರುವುದು ವಿಶೇಷವಾಗಿದೆ. ನವರಂಗದ ಕಂಬಗಳಲ್ಲಿ ವಿಷ್ಣುವಿನ ಮೂರು ಶಿಲ್ಪಗಳಿವೆ. ಪ್ರವೇಶ ದ್ವಾರವು ಸರಳ ಅಲಂಕರಣೆಯನ್ನು ಹೊಂದಿದ್ದು, ದ್ವಾರದ ಇಕ್ಕೆಲದಲ್ಲಿ ವೈಷ್ಣವರ ದ್ವಾರಪಾಲಕರ ಶಿಲ್ಪಗಳಿವೆ. ದ್ವಾರದ ಎಡ ಮತ್ತು ಬಲಭಾಗದ ಎರಡು ಕಡೆ ಮುಂಚಾಚಿದ ಪಟ್ಟಿಕೆಗಳಿದ್ದು ಅದರಲ್ಲಿ ಸ್ಥಾನಕ ಗರುಡ ಮತ್ತು ಆಂಜನೇಯ ಶಿಲ್ಪಗಳಿವೆ. ದೇವಾಲಯದ ಮುಂಭಾಗದ ಭಿತ್ತಿಯು ಸರಳವಾಗಿದ್ದು, ಬಲ ಮತ್ತು ಎಡಭಾಗದಿಂದ ಆನೆಗಳು ಸಮ ದಿಕ್ಕಿನಲ್ಲಿ ಬರುವ ರೀತಿಯಲ್ಲಿ ತೋರಿಸಲಾಗಿದೆ. ಈ ರೀತಿಯ ರಚನೆಯನ್ನು ನವರಂಗದ ಉತ್ತರ ದಕ್ಷಿಣ ದ್ವಾರದಲ್ಲಿಯೂ ತೋರಿಸಿರುವುದು ವಿಶೇಷವಾಗಿದೆ. ದೇವಾಲಯದ ಅಧಿಷ್ಠಾನವು ಪಾದಬಂಧ ಅಧಿಷ್ಠಾನವನ್ನು ಹೊಂದಿದ್ದು ಉಪಾನ, ಜಗತಿ, ತ್ರಿಪಟ್ಟ, ಕುಮುದ, ಗಳ ಮತ್ತು ಮಹಾಪಟ್ಟಿ ಹೊಂದಿದೆ. ಕಪೋತ ಭಾಗವು ದೇವಾಲಯದ ಸುತ್ತಲೂ ಹೂಬಳ್ಳಿಯ ಅಲಂಕರಣೆಯನ್ನು ಹೊಂದಿದೆ.

**ಸಿಂಗೇನಹಳ್ಳಿ ರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆ ಹೊಳಲಕೆರೆ ತಾಲೂಕಿನ ರಂಗನಾಥ ಸ್ವಾಮಿಯು ಗ್ರಾಮದ ಹೊರಭಾಗದ ಎತ್ತರವಾದ ಬೆಟ್ಟದ ಮೇಲಿದೆ. ಬೆಟ್ಟವು ಕಣಶಿಲೆಯ ಬಂಡೆಗಳಿಂದ ಕೂಡಿದೆ. ಈ ಬೆಟ್ಟವು ಅನೇಕ ಕುರುಚಲ ಗಿಡಗಳಿಂದ ಕೂಡಿದ್ದು, ವಿಸ್ತಾರವಾದ ಎತ್ತರವಾದ ಬೆಟ್ಟವಾಗಿದೆ. ಬೆಟ್ಟದಲ್ಲಿ ಪಾಳೆಯಗಾರರ ಕಾಲದ ಕೋಟೆ ಇದೆ. ಆದರೆ ಇದು ಯಾವ ಪಾಳೆಯಗಾರರ ಕಾಲದೆಂದು ಸ್ಪಷ್ಟವಿಲ್ಲ. ಈ ಕೋಟೆ ಆವರಣದಲ್ಲಿ ಎತ್ತರವಾದ ಕಲ್ಲು ಬಂಡೆಗಳಿಂದ ಆವೃತವಾದ ಗರ್ಭಗೃಹದಲ್ಲಿ ರಂಗನಾಥಸ್ವಾಮಿಯ ಉದ್ಭವ ಕಲ್ಲುಬಂಡೆ ಶಿಲ್ಪವಿದೆ. ದೊಡ್ಡ ಕಲ್ಲುಬಂಡೆಯನ್ನು ರಂಗನಾಥನೆಂದು ಆರಾಧಿಸುತ್ತಿದ್ದಾರೆ. ಆ ಬಂಡೆಗೆ ಆಶ್ರೀತವಾಗಿ ದೇವಾಲಯ ಕಟ್ಟಲಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ ಭಾಗವನ್ನು ಹೊಂದಿದೆ. ಗರ್ಭಗೃಹದ ದ್ವಾರಬಂಧದ ಇಕ್ಕೆಲದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ನೆಲಮಟ್ಟದಿಂದಲೇ ದೇವಾಲಯ ನಿರ್ಮಾಣವಾಗಿದ್ದು ಅಧಿಷ್ಠಾನ ತಳಮಟ್ಟದಲ್ಲಿಯೇ ಇದ್ದು, ಭಿತ್ತಿಯು ಕಲ್ಲು ಪಟ್ಟಿಕೆಗಳಿಂದ ಕೂಡಿದ್ದು ಸರಳವಾಗಿವೆ. ದೇವಾಲಯದ ಮುಂಭಾಗದಲ್ಲಿ ಗರುಡಸ್ತಂಭ, ತುಳಸಿ, ಬೃಂದಾವನವಿದೆ. ಶಿಖರವು ದ್ರಾವಿಡ ಮಾದರಿಯಲ್ಲಿದೆ. ಕೋಟೆಯ ಹೊರ ಆವರಣದಲ್ಲಿ ಕೆಂಚರಾಯ, ಭೂತಪ್ಪನ ಅಮೂರ್ತ ರೂಪದ ದೇವಾಲಯವಿದೆ.

**ಗಿಲಕೇನಹಳ್ಳಿ ರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆ ಹೊಳಲಕೆರೆ ತಾಲೂಕಿನ ಗಿಲಕೇನಹಳ್ಳಿ ರಂಗನಾಥಸ್ವಾಮಿ ದೇವಾಲಯವಿದೆ. ಇದು ಚಿತ್ರದುರ್ಗ ಹೊಳಲಕೆರೆ ರಸ್ತೆಯಲ್ಲಿ ಗಿಲಕೇನಹಳ್ಳಿ ಕ್ರಾಸ್‌ನಿಂದ ೨ ಕಿ.ಮೀ ಅಂತರದಲ್ಲಿದೆ. ದೇವಾಲಯವು ಬಹುಶಃ ಚಿತ್ರದುರ್ಗ ಪಾಳೆಯಗಾರರ ಕಾಲಾವಧಿಯಲ್ಲಿ ನಿರ್ಮಾಣಗೊಂಡಿರುವಂತೆ ಕಂಡುಬರುತ್ತದೆ. ದೇವಾಲಯ ಗರ್ಭಗೃಹ, ಅಂತರಾಳ, ಸಭಾಮಂಟಪ, ತೆರೆದ ಮುಖಮಂಟಪ ಹೊಂದಿದೆ. ಇದು ಗ್ರಾನೈಟ್ (ಕಣಶಿಲೆಯಿಂದ) ನಿರ್ಮಿಸಲಾಗಿದೆ. ಗರ್ಭಗೃಹವು ಅತ್ಯಂತ ಸರಳವಾಗಿದ್ದು, ಚೌಕಾಕಾರವಾಗಿದೆ. ದ್ವಾರಬಂಧದ ಇಕ್ಕೆಲದಲ್ಲಿ ಎರಡು ವೈಷ್ಣವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ದ್ವಾರದ ಲಲಾಟಬಿಂಬದಲ್ಲಿ ಶಿಲ್ಪಗಳು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಗರ್ಭಗೃಹದಲ್ಲಿ ಹುಟ್ಟುಗುಂಡಕಲ್ಲು ಮತ್ತು ಒಂದು ಸ್ಥಾನಕ ರಂಗನಾಥ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಮುಂಭಾಗದಲ್ಲಿ ಹುಟ್ಟು ಗುಂಡ ಕಲ್ಲು ಇದೆ. ಅದರ ಹಿಂಭಾಗದಲ್ಲಿ ಒಂದು ಸ್ಥಾನಕ ರಂಗನಾಥ ಮೂರ್ತಿಶಿಲ್ಪವಿದೆ. ರಂಗನಾಥನು ಚತುರ್ಭುಜನಾಗಿದ್ದು, ಮೇಲಬಲಕೈಯಲ್ಲಿ ಶಂಖ, ಮೇಲ ಎಡಕೈಯಲ್ಲಿ ಚಕ್ರ, ಕೆಳಬಲಕೈಯು ವರದ, ಕೆಳಎಡಕೈಯು ಗದೆ ಹಿಡಿದ ಮೂರ್ತಿಶಿಲ್ಪವಾಗಿದೆ. ಅಂತರಾಳವು ಸರಳವಾಗಿದ್ದು, ದ್ವಾರಬಾಗಿಲ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಇದರ ಲಲಾಟಬಿಂಬದ ಶಿಲ್ಪವೂ ಸಹ ಸ್ಪಷ್ಟವಾಗಿ ಕಂಡುಬರುವುದಿಲ್ಲ.

ಸಭಾಮಂಟಪವು ಒಂಭತ್ತು ಅಂಕಣಗಳಲ್ಲಿದ್ದು ಕಂಬಗಳು ಸರಳವಾಗಿವೆ. ಕಂಬಗಳು ಕೆಳಗೆ ಮತ್ತು ಮೇಲೆ ಚೌಕಭಾಗಗಳಿದ್ದು, ಮಧ್ಯದಲ್ಲಿ ಎಂಟು ಮುಖಗಳ ಲಂಬಪಟ್ಟಿಯನ್ನು ಹೊಂದಿದೆ. ಕಂಬಗಳ ಬೋದುಗೆಗಳು ಸರಳವಾಗಿವೆ. ಮಧ್ಯದ ಅಂಕಣದ ಛತ್ತಿನಲ್ಲಿ ಅರಳು ಕಮಲದ ಭುವನೇಶ್ವರಿಯಿದ್ದು, ಅದರ ಮಧ್ಯದಲ್ಲಿ ಮೊಗಚಿ ಹಾಕಿದ ಮೊಗ್ಗು ಇದೆ. ಸಭಾಮಂಟಪದ ಭಿತ್ತಿಗಳು ಸರಳವಾಗಿವೆ.

ಮುಂಭಾಗದ ತೆರೆದ ಮುಖಮಂಟಪವು ಪ್ರತಿ ಸಾಲಿನಲ್ಲಿ ನಾಲ್ಕರಂತೆ ನಾಲ್ಕು ಸಾಲುಗಳಲ್ಲಿ ಒಟ್ಟು ಹದಿನಾರು ಅಂಕಣಗಳನ್ನು ಹೊಂದಿದೆ. ಮೊದಲ ಮೂರು ಅಂಕಣಗಳು ಮಾತ್ರ ತೆರೆದ ರೀತಿಯಲ್ಲಿದ್ದು, ಮುಖಮಂಟಪದಂತೆ ತೋರುತ್ತದೆ. ಎರಡು ಬದಿಗೂ ಭಿತ್ತಿಯನ್ನು ನಿರ್ಮಿಸಲಾಗಿದೆ. ಇಲ್ಲಿಯ ಕಂಬಗಳು ತೀರಾ ಸರಳವಾಗಿದ್ದು, ಕೆಳಗೆ ಮತ್ತು ಮೇಲೆ ಚೌಕಭಾಗಗಳನ್ನು ಹೊಂದಿವೆ. ಅದರ ಮಧ್ಯದಲ್ಲಿ ಎಂಟು ಮುಖಗಳು ಲಂಬಪಟ್ಟಿಕೆಯಿದೆ. ಅಲ್ಲದೆ ಕಂಬಗಳ ಬೋದುಗೆಗಳು ಸರಳವಾಗಿವೆ. ಮುಖಮಂಟಪದ ಭಿತ್ತಿ ಮತ್ತು ಛತ್ತು ಕೂಡ ಸರಳವಾಗಿವೆ. ಮುಖಮಂಟಪದ ಕಂಬಗಳಲ್ಲಿ ಭಕ್ತ, ಗುಂಟಿಕೆ ಪವಾಡದ ವ್ಯಕ್ತಿಯ ಶಿಲ್ಪಗಳಿವೆ.

ದ್ವಾರಮಂಟಪಕ್ಕೆ ಮೂರು ಮೆಟ್ಟಿಲುಗಳಿದ್ದು ಇಕ್ಕೆಲಗಳಲ್ಲಿ ಸುರುಳಿಯಾಳಿಗಳ ಕೈಪಿಡಿಗಳಿವೆ. ಮಹಾದ್ವಾರದ ಬಾಗಿಲ ಚೌಕಟ್ಟಿನಲ್ಲಿ ಪೂರ್ಣಕುಂಭಗಳು, ಅವುಗಳ ಮೇಲೆ ರತ್ನಶಾಖೆಗಳಿದ್ದು, ಲಲಾಟದಲ್ಲಿ ಕಾಳಿಂಗಮರ್ದನ ಕೃಷ್ಣನ ಬಿಂಬವಿದೆ. ಒಳಪಟ್ಟಿಕೆಯಲ್ಲಿ ಲತೆಯನ್ನು ಆಶ್ರಯಿಸಿ ನಿಂತ ಶಿಲಾಬಾಲಕಿಯರ ಉಬ್ಬುಶಿಲ್ಪಗಳಿವೆ. ಮಂಟಪವು ಆರು ಅಂಕಣಗಳಲ್ಲಿದ್ದು ಮಧ್ಯದ ಎರಡು ಅಂಕಣಗಳು ಪ್ರವೇಶ ಹಾದಿಯನ್ನು, ಬದಿಯ ನಾಲ್ಕು ಅಂಕಣಗಳು ಎತ್ತರವಾದ ಕಟ್ಟೆಗಳನ್ನು ಹೊಂದಿದೆ. ಮಧ್ಯದ ಎರಡು ಕಂಬಗಳು ಕೆಳಗೆ ಮಧ್ಯ ಮತ್ತು ಮೇಲೆ ಮೂರು ಅಸಮವಾದ ಚೌಕಭಾಗಗಳನ್ನು ಹೊಂದಿದ್ದು, ಅವುಗಳ ಮೇಲೆ ವೇಣುಗೋಪಾಲ, ಪಾಳೆಯಗಾರರ, ಗರುಡ ಹಾಗೂ ವಿವಿಧ ಪುಷ್ಪಾಕೃತಿಗಳ ಉಬ್ಬುಶಿಲ್ಪಗಳಿವೆ.

ದ್ವಾರಮಂಟಪದ ಮುಂಭಾಗದಲ್ಲಿ ಎತ್ತರವಾದ ಉಯ್ಯಾಲೆ ಸ್ತಂಭವಿದೆ. ಬಹುಶಃ ಇದು ಮೂವತ್ತು ಮೀಟರ್ ಅಂತರದಲ್ಲಿ ಇಪ್ಪತ್ತೈದು ಮೀಟರ್ ಎತ್ತರವಾಗಿದೆ. ಇದರ ಇಕ್ಕೆಲಗಳಲ್ಲಿ ಆನೆಗಳ ಶಿಲ್ಪಗಳಿವೆ. ಉಯ್ಯಾಲೆ ಕಂಬದ ತುತ್ತ ತುದಿಯಲ್ಲಿ ದ್ರಾವಿಡ ಶೈಲಿಯ ಶಿಖರ, ವಿಮಾನಗಳು ಕೆಳಭಾಗದಲ್ಲಿ ಎರಡು ಅಂತಸ್ತುಗಳಲ್ಲಿ ಕಲ್ಲಿನಲ್ಲಿ ಕೆತ್ತಿದ ಅಲಂಕಾರವಿದೆ. ಅತ್ಯಂತ ಕೆಳಭಾಗದ ಇಕ್ಕೆಲಗಳಲ್ಲಿ ಕಲ್ಲಿನ ಕಟಾಂಜನಗಳು ಕಂಡುಬರುತ್ತವೆ.

ದೇವಾಲಯದ ಅಧಿಷ್ಠಾನವು ಮಂಚಬಂಧ ಶೈಲಿಯಲ್ಲಿದ್ದು ಉಪಾನಗಳ ಹಾಗೂ ಕಪೋತ ಭಾಗಗಳನ್ನು ಹೊಂದಿದೆ. ಭಿತ್ತಿಯು ಸರಳವಾಗಿದ್ದು, ಕಂಬ ಮತ್ತು ಬೋದುಗೆಗಳು ಗೋಚರಿಸುತ್ತವೆ.

ಭಿತ್ತಿಯಲ್ಲಿ ಜೋಡಿ ಮೀನು, ಆನೆ ಮತ್ತು ಮಿಥುನ ಶಿಲ್ಪಗಳಿವೆ. ಗರ್ಭಗೃಹದ ಮೇಲಿನ ಶಿಖರವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ.

**ಬಿಳಿಗಿರಿ ರಂಗನಬೆಟ್ಟದ ರಂಗನಾಥಸ್ವಾಮಿ ದೇವಾಲಯ :**

ಚಾಮರಾಜನಗರ ಜಿಲ್ಲೆ ಯಳಂದೂರು ತಾಲೂಕಿನ ವ್ಯಾಪ್ತಿಗೆ ಸೇರಿದ ಬಿಳಿಗಿರಿರಂಗನ ಬೆಟ್ಟದಲ್ಲಿ ಪ್ರಸಿದ್ಧ ರಂಗನಾಥಸ್ವಾಮಿ ದೇವಾಲಯವಿದೆ. ಈ ಬೆಟ್ಟ ಪರಿಸರ ಲಕ್ಷಾಂತರ ವರ್ಷಗಳಿಂದಲೂ ಮಾನವನ ಚಟುವಟಿಕೆಯ ಕೇಂದ್ರವಾಗಿದೆ. ಬೃಹತ್ ಶಿಲಾಸಮಾಧಿ, ಶಿಲಾಯುಗ ಹಾಗೂ ಚಾರಿತ್ರಿಕ ಕಾಲಘಟ್ಟದಲ್ಲಿ ಮಹತ್ವ ಪಾತ್ರವಹಿಸಿದ ಅನೇಕ ನೆಲೆಗಳು ಪ್ರಸ್ತುತ ಪ್ರದೇಶದಲ್ಲಿವೆ.

ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ದೇವಾಲಯದ ರಚನೆಯ ಕಾಲ ಸ್ಪಷ್ಟವಾಗಿಲ್ಲ. ದೇವಾಲಯವು ರಚನೆಯಲ್ಲಿ ಎರಡು ಭಾಗಗಳನ್ನು ಹೊಂದಿದೆ. ಮೊದಲಿಗೆ ಮೂಲ ರಂಗನಾಥಸ್ವಾಮಿ ದೇವಾಲಯವಿದೆ. ಅದರ ಬಲಭಾಗದಲ್ಲಿ ಅಲಮೇಲು ಮಂಗಮ್ಮನ ದೇವಾಲಯವಿದೆ. ಎರಡು ದೇವಾಲಯಗಳಿಗು ಗರ್ಭಗೃಹ, ಸುಖನಾಸಿ, ನವರಂಗ ಭಾಗಗಳಿದ್ದು, ರಂಗನಾಥಸ್ವಾಮಿ ದೇವಾಲಯದಿಂದ ಅಲಮೇಲಮ್ಮ ದೇವಾಲಯಕ್ಕೆ ತೆರಳಲು ಕಿರಿದಾದ ಪ್ರವೇಶದ್ವಾರವಿದೆ. ಮೂಲ ರಂಗನಾಥ ದೇವಾಲಯದ ಗರ್ಭಗೃಹ, ಸುಖನಾಸಿಗಳು ಪ್ರಾಚೀನವಾಗಿದ್ದು, ನವರಂಗ ಮತ್ತು ಮುಖಮಂಟಪಗಳು ನಂತರದ ರಚನೆಯನ್ನು ಹೊಂದಿವೆ. ಗರ್ಭಗೃಹ ಚಿಕ್ಕದಾಗಿ ಚೌಕಾಕಾರದಲ್ಲಿದ್ದು, ಸರಳ ರಚನೆಯಿಂದ ಕೂಡಿದೆ. ಅದರ ಮೇಲಿನ ಭುವನೇಶ್ವರಿಯೂ ಸರಳವಾಗಿದೆ. ಗರ್ಭಗೃಹದಲ್ಲಿ ಸ್ಥಾನಕ ರಂಗನಾಥನ ಶಿಲ್ಪವಿದ್ದು, ಸುಮಾರು ೪೧/₂ ಅಡಿಗಳಷ್ಟು ಎತ್ತರವಾಗಿದೆ. ಸ್ವಾಮಿಯು ಚತುರ್ಭಜಧಾರಿಯಾಗಿದ್ದು, ಮೇಲು ಕೈಗಳಲ್ಲಿ ಬಲಭಾಗದಲ್ಲಿ ಶಂಖ, ಎಡಭಾಗದಲ್ಲಿ ಚಕ್ರಗಳಿದ್ದು, ಕೆಳಬಲಕೈಯು ವರದ ಮತ್ತು ಕೆಳಎಡಕೈಯು ಕಟಿಹಸ್ತವಿರುವ ಮೂರ್ತಿಶಿಲ್ಪವಾಗಿದೆ. ಅಲ್ಲದೆ ಸ್ವಾಮಿಯು ನಡುಪಟ್ಟು, ಕಠಾರಿ (ಬಾಕು, ಸುರಿಗೆ)ಗಳಿಂದ ಅಲಂಕೃತವಾಗಿದೆ. ಪಾದದ ಬಲ ಮತ್ತು ಎಡಭಾಗದಲ್ಲಿ ಶ್ರೀ ಭೂದೇವಿಯರ ಸಣ್ಣ ಶಿಲ್ಪಗಳಿವೆ. ಗರ್ಭಗೃಹದ ಮುಂಭಾಗದಲ್ಲಿ ಎರಡು ಹಂತದ ಸುಖನಾಸಿಯನ್ನು ಹೊಂದಿದೆ.

ಇದರ ಮುಂದಿನ ಹಂತವು ಆಯತಾಕಾರವಾಗಿದ್ದು, ಅನೇಕ ಕಂಬಗಳಿಂದ ಕೂಡಿದ ನವರಂಗವಿದೆ. ಈ ನವರಂಗವನ್ನು ಕಾಲಘಟ್ಟದಲ್ಲಿ ವಿಸ್ತರಿಸಿದಂತೆ ಕಂಡುಬರುತ್ತದೆ. ಇಲ್ಲಿನ ಕಂಬಗಳಲ್ಲಿ ಮೊದಲಿನ ಮೂರು ಕಂಬಗಳು ಇನ್ನುಳಿದ ಕಂಬಗಳಿಗಿಂತ ಪುರಾತನವಾಗಿವೆ. ಉಳಿದಂತೆ ವಿಸ್ತರಣೆ ಮಾಡಲಾಗಿದೆ. ನವರಂಗದಲ್ಲಿ ಪ್ರತಿಸಾಲಿನ ೧೫ ಕಂಬಗಳಿಂದಾಗಿ ಮೂರು ಅಂಕಣಗಳಾಗಿ ವಿಭಜಿತಗೊಂಡಿದೆ. ನವರಂಗದ ದ್ವಾರದ ಇಕ್ಕೆಲದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ನವಂಗದ ಮೊದಲ ಮೂರು ಕಂಬಗಳು ಕೊನೆಗೊಳ್ಳುವ ಎಡ ಮತ್ತು ಬಲ

ಪಾರ್ಶ್ವಗಳಲ್ಲಿ ಒಂದೊಂದೂ ಸಣ್ಣ ದೇವರ ಕೋಣೆಯಿದೆ. ವೀರಾಸನದ ಗರುಡ ಮತ್ತು ಹನುಮಂತನ ಸಾಧಾರಣವಾದ ಉಬ್ಬುಶಿಲ್ಪಗಳಿವೆ. ನವರಂಗದ ಬಲಭಾಗದಲ್ಲಿ ಎರಡನೆ ಕಂಬದ ನೇರಕ್ಕೆ ಅಲಮೇಲಮ್ಮನ ಆಲಯಕ್ಕೆ ಹೋಗಲು ದ್ವಾರವಿದೆ. ನವರಂಗದ ಎಡಭಾಗದ ಗೂಡುಗಳಲ್ಲಿ ನಮ್ಮಾಳ್ವಾರ್, ಶಠಕೋಪ ಮತ್ತು ಶ್ರೀರಾಮಾನುಜರ ವಿಗ್ರಹಗಳನ್ನಿಡಲಾಗಿದೆ. ದ್ವಾರದ ಬಲಗಡೆಯ ಇನ್ನೊಂದು ಗೂಡಿನಲ್ಲಿ ವೇದಾಂತಾಚಾರ್ಯರ ವಿಗ್ರಹಗಳಿವೆ. ಅಲ್ಲದೆ ನವರಂಗದ ಕಂಬಗಳಲ್ಲಿ ಹನುಮಂತ ವಿಷ್ಣುವಿನ ಪರಿವಾರ ದೇವತೆಗಳ ಉಬ್ಬು ಶಿಲ್ಪಗಳಿವೆ.

ಈ ದೇವಾಲಯದ ಮುಖಮಂಟಪವು ಕಾಲಾನಂತರದಲ್ಲಿ ನಿರ್ಮಿಸಿರುವುದೆಂದು ತಿಳಿದುಬರುತ್ತದೆ. ನವರಂಗದ ಹೊರಗೋಡೆಯ ಅರೆಗಂಭಗಳನ್ನು ಬಳಸಿಕೊಂಡು, ಮುಂದೆ ನಾಲ್ಕು ಕಂಬಗಳನ್ನಿರಿಸಿ ಮುಖಮಂಟಪವನ್ನು ನಿರ್ಮಿಸಲಾಗಿದೆ. ಒಂದು ಕಾಲದಲ್ಲಿ ತೆರೆದ ಮಂಟಪವಿರಬಹುದೆಂದು ತೋರುತ್ತದೆ. ಬಹುಶಃ ನಂತರದಲ್ಲಿ ಅದನ್ನು ಪಾರ್ಶ್ವಗಳಿಂದ ಮುಚ್ಚಲಾಗಿದೆ. ಮುಖಮಂಟಪದ ಕಂಬಗಳು ಚೌಕಾಕಾರ, ಅಷ್ಟಕೋನ, ಚೌಕಾಕಾರ ಅಷ್ಟಕೋನಾಕಾರಗಳಿದ್ದು, ಮೇಲ್ಭಾಗದಲ್ಲಿ ಚೌಕಾಕಾರವಾಗಿವೆ. ಇಲ್ಲಿನ ಕಂಬಗಳಲ್ಲಿ ಹಂಸ, ಯಾಳಿ, ಆಂಜನೇಯ, ವೀರಾಸನದಲ್ಲಿರುವ ಗರುಡ, ವಾದ್ಯ ನುಡಿಸುತ್ತಿರುವ ಸ್ತ್ರೀಯರ ಉಬ್ಬು ಕೆತ್ತನೆ ಶಿಲ್ಪಗಳಿವೆ. ಮುಖಮಂಟಪದ ಮುಂಭಾಗದ ಮೂರು ಕಂಬಗಳ ಕೆಳಭಾಗವು ಚೌಕಾಕಾರವಾಗಿದೆ.

ಬಲಭಾಗದಲ್ಲಿ ಅಲಮೇಲಮ್ಮ ರಂಗನಾಯಕಿ ದೇವಾಲಯವಿದೆ. ಈ ದೇವಾಲಯದಲ್ಲಿ ಆಳ್ವಾರರ ಶಿಲ್ಪಗಳು ಇವೆ. ರಂಗನಾಥ ದೇವಾಲಯವು ಪಾದಬಂಧ ಅಧಿಷ್ಠಾನವನ್ನು ಹೊಂದಿದ್ದು ಜಗತಿ, ಪಟ್ಟಿ, ಮಧ್ಯ ಪಟ್ಟಿಗಳ, ಕಂಪಗಳನ್ನು ಹೊಂದಿದೆ. ನವರಂಗದ ಅಧಿಷ್ಠಾನವು ಜಗತಿ, ಕಂಪಗಳ, ಪಟ್ಟಿಕೆ ಹಾಗೂ ಉರ್ಧ್ವ ಕಂಪನಗಳನ್ನು ಪಡೆದಿದ್ದು, ಕೆತ್ತನೆಯಿಲ್ಲದೆ ಸರಳವಾಗಿವೆ. ದೇವಾಲಯವು ದ್ರಾವಿಡ ಶೈಲಿಯ ಶಿಖರವನ್ನು ಹೊಂದಿದೆ. ಪ್ರಸ್ತರದ ಮೇಲೆ ಕಪೋತದ ರಚನೆಯಿದ್ದು, ಮೇಲಿನ ಪದದಲ್ಲಿ ಕಪೋತಪಂಜರ, ಎರಡು ಕಡೆ ನಾಲ್ಕರಂತೆ ಕುಡ್ಯಸ್ತಂಭಗಳಿವೆ. ನಾಲ್ಕು ಭಾಗಗಳಲ್ಲಿ ವೈಷ್ಣವ ದೇವತೆಗಳ ಶಿಲ್ಪಗಳು, ನಾಲ್ಕು ಮೂಲೆಯಲ್ಲಿ ಸಿಂಹದ ರಚನೆಯಿದೆ. ವೃತ್ತಾಕಾರದ ಶಿಖರದಲ್ಲಿ ಕೀರ್ತಿಮುಖ, ಹೂ, ಎಲೆ, ಬಳ್ಳಿ ದೇವತೆಗಳ ರಚನೆಯಿದ್ದು ಮೇಲೆ ಸ್ತೂಪಿಯಿದೆ.

ಅಲಮೇಲಮ್ಮ ದೇವಾಲಯದ ಮೇಲಿನ ವಿಮಾನವು ದ್ರಾವಿಡ ಶೈಲಿಯಲ್ಲಿದೆ. ಪ್ರಸ್ತರದ ಮೇಲೆ ಪದವಿದ್ದು ಮಧ್ಯದಲ್ಲಿ ಕಪೋತ ಪಂಜರದಲ್ಲಿ ಧಾನ್ಯ ಭಂಗಿಯಲ್ಲಿರುವ ವೈಷ್ಣವ ದೇವತೆಗಳ ಶಿಲ್ಪಗಳಿವೆ. ಗ್ರೀವವು ಚೌಕಾಕಾರವಾಗಿದ್ದು ನಾಲ್ಕು ಭಾಗಗಳಲ್ಲಿ ಗ್ರೀವ ದೇವತೆಗಳಿವೆ. ಶಿಖರವು ಚೌಕಾಕಾರವಾಗಿದ್ದ ಕೀರ್ತಿಮುಖ, ಹೂ, ಎಲೆ, ಬಳ್ಳಿಗಳಿಂದ ಅಲಂಕರಿಸಿದೆ. ಮೇಲೆ ಸ್ತೂಪಿಯಿದೆ.

ದೇವಾಲಯದ ಮುಂಭಾಗದಲ್ಲಿ ಧ್ವಜಸ್ತಂಭ, ಮಹಾದ್ವಾರವಿದೆ. ದೇವಾಲಯದ ಸುತ್ತಲೂ ಪ್ರಾಕಾರವಿದೆ.

ಮಂಟಪವು ಬಲಿಷ್ಠವಾದ ಅಧಿಷ್ಠಾನವನ್ನು ಹೊಂದಿದ್ದು ರಚನೆಯಲ್ಲಿ ಉಪಾನ, ಕಪೋತ, ಪಟ್ಟಿ, ಕುಮುದ ಕಂಠ ಭಾಗಗಳಿವೆ. ಮೂರು ಅಡಿಗಳಷ್ಟು ಎತ್ತರವಾದ ಅಧಿಷ್ಠಾನದ ಮೇಲೆ ಪ್ರಸ್ತರದವರೆಗೆ ಅರ್ಧಕಂಬಗಳ ರಚನೆ, ನಡುವೆ ಕಪೋತ ಪಂಜರಗಳಿವೆ. ಪಂಜರದಲ್ಲಿ ದೇವತಾ ಮೂರ್ತಿಗಳಲ್ಲದೆ ಖಾಲಿಯಿದ್ದು, ಎರಡು ಅರ್ಧಕಂಬಗಳ ಮೇಲೆ ಗ್ರೀವ, ಶಿಖರ, ಸ್ತೂಪಿಯ ರಚನೆಯಿದೆ. ಪೂರ್ವ ಪಶ್ಚಿಮದ ಭಿತ್ತಿಯಲ್ಲಿ ತಲಾ ಮೂರರಂತೆ ಆರು ಕಪೋತ ಪಂಜರಗಳಿದ್ದು, ಪ್ರಸ್ತರದಲ್ಲಿ ಮೇಲೆ ಅಡ್ಡಲಾಗಿ ತೊಲೆಯನ್ನಿರಿಸಿ ಕಪೋತ ಪಟ್ಟಿಯ ಭಾಗಗಳನ್ನು ರೂಪಿಸಲಾಗಿದೆ. ಮಂಟಪಕ್ಕೆ ಉತ್ತರ ದಕ್ಷಿಣ ಭಾಗದಲ್ಲಿ ಪ್ರವೇಶದ್ವಾರಗಳಿದ್ದು, ಒಳಗೆ ನಾಲ್ಕು ಕಂಬಗಳಿವೆ. ಚೌಕಾಕಾರದ ಪೀಠ, ಬಹುಭುಜಾಕೃತಿ ಕಟ್ಟುಗಳ ನಡುವೆ ಚತುರ್ಭುಜಾಕಾರದ ರಚನೆಯನ್ನು ದಂಡವು ಹೊಂದಿದ್ದು, ಸರಳವಾದ ಚಾಚುಪೀಠದ ಮೇಲೆ ಕಮಲದ ರಚನೆಯುಳ್ಳ ಬೋದಿಗೆಯಿದೆ. ಕಂಬಗಳಲ್ಲಿ ನರಸಿಂಹ, ವೇಣುಗೋಪಾಲಸ್ವಾಮಿ, ಕಾಲ್ಪನಿಕ ಪ್ರಾಣಿಗಳು, ನರ್ತಕಿಯರ, ವಾದಕರ ಉಬ್ಬು ಶಿಲ್ಪಗಳನ್ನು ಹೊಂದಿದ್ದು, ಮಂಟಪದಲ್ಲಿ ಸುಂದರವಾದ ಭುವನೇಶ್ವರಿಯಿದೆ. ಚೌಕಾಕಾರದ ಶಿಲಾಫಲಕವನ್ನು ಅರ್ಧಅಡಿ ಆಳವಾಗಿ ಕೊರೆದು ಒಳಗೆ ಚೌಕಾಕಾರದ ರಚನೆ ಮಾಡಿ ಒಳಗೆ ಅರಳಿದ ಕಮಲ, ದಂಟನ್ನು ರಚಿಸಿದೆ.

ಕ್ರಿ.ಶ. ೧೬೬೭ ಸೆಪ್ಟೆಂಬರ್ ೧೨ರ ರಂಗಸ್ವಾಮಿ ದೇವಾಲಯಕ್ಕೆ ಸೇರಿದ ತಾಮ್ರ ಶಾಸನವು ಬಿಳಿಗಿರಿ ರಂಗನ ಬೆಟ್ಟವನ್ನು ಕುರಿತ ಮೊದಲ ಐತಿಹಾಸಿಕ ದಾಖಲೆಯಾಗಿದೆ.[೧೭] ಹದಿನಾಡು ತಿರುಮಲೆ ರಾಜನಾಯಕರ ಮಗ ಮುದ್ದುರಾಜ ದೇವಾಲಯಕ್ಕೆ ದತ್ತಿ ಬಿಟ್ಟ ವಿಷಯವನ್ನು ಈ ತಾಮ್ರಶಾಸನ ತಿಳಿಸುತ್ತದೆ. ಅಲ್ಲದೆ ಸ್ಥಳೀಯ ಪ್ರಕಾರ ಇಲ್ಲಿಯ ಮೂಲದೇವರನ್ನು ವಸಿಷ್ಠರು ಪ್ರತಿಷ್ಠಾಪಿಸಿದರು ಎನ್ನುವ ಪ್ರತೀತಿ ಇದೆ. ಮೈಸೂರು ಒಡೆಯರ ಅನೇಕ ಅರಸರು ಯಳಂದೂರಿನ ಜೊತೆ ನಿಕಟ ಸಂಬಂಧವನ್ನು ಹೊಂದಿದ್ದರು. ಇದರಿಂದ ಮೈಸೂರು ಅರಸು ಮನೆತನದವರು ಬಿಳಿಗಿರಿರಂಗನ ಬೆಟ್ಟದೊಡನೆ ನೇರ ಸಂಪರ್ಕ ಇಟ್ಟುಕೊಂಡಿರುವುದು ತಿಳಿದುಬರುತ್ತದೆ. ನಾಲ್ವಡಿ ಕೃಷ್ಣರಾಜ ಒಡೆಯರು ಕೇತೆದೇವರ ಗುಡಿಯ ಬಳಿ ವಿಶ್ರಾಂತಿ ಗೃಹವನ್ನು ಕಟ್ಟಿಸಿಕೊಂಡಿದ್ದರ ಬಗೆಗೆ ಹಾಗೂ ಬೇಟೆಗಾಗಿ ಮತ್ತು ದೇವರ ಆರಾಧನೆಗಾಗಿ ಅನೇಕ ಸಲ ಈ ವಂಶದ ಅರಸರು ಬೆಟ್ಟಕ್ಕೆ ಬಂದ ದಾಖಲೆಗಳಿವೆ.

**ಹಂಪನೂರ ರಂಗನಾಥಸ್ವಾಮಿ ದೇವಾಲಯ :**

ದಾವಣಗೆರೆ ಜಿಲ್ಲೆ ದಾವಣಗೆರೆ ತಾಲೂಕಿನ ಹಂಪನೂರಿನಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಈ ಗ್ರಾಮ ರಾಷ್ಟ್ರೀಯ ಹೆದ್ದಾರಿ ನಾಲ್ಕರಲ್ಲಿ ಭರಮಸಾಗರ ಎಮ್ಮೆಹಟ್ಟಿ ರಸ್ತೆಯ ಮಧ್ಯದಲ್ಲಿ

ದೊರೆಯುತ್ತದೆ. ಪೂರ್ವಾಭಿಮುಖವಾಗಿರುವ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ತೆರೆದ ಮುಖಮಂಟಪವನ್ನು ಹೊಂದಿದೆ.

ಗ್ರಾಮದ ತುಸುಹೊರಭಾಗದಲ್ಲಿ ಎತ್ತರವಾದ ದಿನ್ನೆಯ ಮೇಲೆ ನಿರ್ಮಾಣಗೊಂಡಿರುವ ಶ್ರೀರಂಗನಾಥ ದೇವಾಲಯ ಗ್ರಾಮದ ಪ್ರಮುಖ ದೇವಾಲಯವಾಗಿದೆ. ಬಹುಶಃ ಇದು ಚಿತ್ರದುರ್ಗ ಪಾಳೆಯಗಾರರ ಕಾಲಾವಧಿಯಲ್ಲಿ ನಿರ್ಮಾಣಗೊಂಡಂತೆ ಕಂಡುಬರುತ್ತದೆ. ದೇವಾಲಯದ ಗರ್ಭಗೃಹವು ಒಂದು ಅಂಕಣದಲ್ಲಿದ್ದು ಚೌಕಾಕಾರವಿದೆ ಮತ್ತು ಸರಳವಾಗಿದೆ. ಭಿತ್ತಿ ಹಾಗೂ ಛತ್ತುಗಳು ಸಹ ಯಾವುದೇ ಅಲಂಕರಣೆಯನ್ನು ಹೊಂದಿಲ್ಲ. ಗರ್ಭಗೃಹದಲ್ಲಿ ಮೂಲಮೂರ್ತಿಯು ಉದ್ಭವ ಗುಂಡುಕಲ್ಲು ಆಗಿದ್ದು ಅದನ್ನು ರಂಗನಾಥನೆಂದು ಪೂಜಿಸಲಾಗುತ್ತದೆ. ಅಲ್ಲದೆ ಅದರ ಹಿಂಭಾಗದಲ್ಲಿ ಮೇಲಬಲಕೈಯಲ್ಲಿ ಚಕ್ರ, ಮೇಲೆ ಎಡಕೈಯಲ್ಲಿ ಶಂಖ, ಕೆಳಬಲಕೈ ಅಭಯ ಮುದ್ರೆಯಲ್ಲಿದ್ದು, ಕೆಳ ಎಡಕೈ ಗದೆ ಹಿಡಿದಿರುವ ಸ್ಥಾನಕ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿಶಿಲ್ಪವು ಸುಮಾರು ಮೂರು ಅಡಿ ಎತ್ತರವಾಗಿದೆ. ಗರ್ಭಗೃಹದ ದ್ವಾರದ ಇಕ್ಕೆಲದಲ್ಲಿ ಎರಡು ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಲಲಾಟದಲ್ಲಿ ಪುಷ್ಪಾಕೃತಿಯ ರಚನೆಯಿದೆ. ಅಂತರಾಳವು ಮೂರು ಅಂಕಣಗಳಲ್ಲಿದ್ದು, ಸಭಾಮಂಟಪದಷ್ಟೇ ಅಗಲವಾಗಿರುವುದು ವಿಶೇಷವೆನಿಸುತ್ತದೆ. ಇದರ ಬಾಗಿಲ ಇಕ್ಕೆಲಗಳ ಭಿತ್ತಿಯಲ್ಲಿ ಪ್ರತಿಭಾಗದಲ್ಲಿ ಐದರಂತೆ ಒಟ್ಟು ೧೦ ದೀಪಗಳನ್ನಿಡಲು ಪುಟ್ಟದಾದ ಮಾಡುಗಳಿವೆ. ಅಂತರಾಳ ಬಾಗಿಲು ಕಮಾನಿನ ಅಲಂಕರಣೆಯನ್ನು ಹೊಂದಿದೆ. ಅದರ ಬಾಗಿಲ ಇಕ್ಕೆಲಗಳಲ್ಲಿ ಎರಡು ಪೂರ್ಣಕುಂಭಗಳ ಚಿತ್ರಗಳಿರುವುದು ವಿಶೇಷವಾಗಿದೆ.

ಸಭಾಮಂಟಪವು ಪ್ರತಿಸಾಲಿನಲ್ಲಿ ಮೂರರಂತೆ ಎರಡು ಸಾಲಿನಲ್ಲಿ ಒಟ್ಟು ಆರು ಅಂಕಣಗಳನ್ನು ಹೊಂದಿದೆ. ಮಧ್ಯದಲ್ಲಿ ಎರಡು ಮತ್ತು ಮುಂಭಾಗದಲ್ಲಿ ಎರಡು ಒಟ್ಟು ನಾಲ್ಕು ಕಂಬಗಳಿವೆ. ಕಂಬಗಳು ಪೀಠ, ಕಾಂಡಗಳನ್ನು ಹೊಂದಿದೆ. ಕಾಂಡದ ಕೆಳಗೆ ಮಧ್ಯ ಮತ್ತು ಮೇಲೆ ಮೂರು ಅಸಮ ಚೌಕಭಾಗಗಳಿದ್ದು, ಅವುಗಳ ಮಧ್ಯದಲ್ಲಿ ಎಂಟು ಮುಖಗಳ ಅಡ್ಡ ಪಟ್ಟಿಕೆಗಳು ಹದಿನಾರು ಮುಖಗಳ ಲಂಬ ಪಟ್ಟಿಕೆಗಳಿವೆ. ಬೋದುಗೆಯ ನಾಲ್ಕು ಮಗ್ಗುಲಲ್ಲಿ ಸುರುಳಿಗಳ ಅಲಂಕರಣೆಗಳಿವೆ. ಸಭಾಮಂಟಪದ ಭಿತ್ತಿಯಲ್ಲಿ ಸುತ್ತಲೂ ಕೈಪಿಡಿಗಳಿದ್ದು, ಭಿತ್ತಿಯಿಂದ ಹೊರಗೆ ಬಂದಿರುವುದು ಕಂಡುಬರುತ್ತದೆ. ಸಭಾಮಂಟಪವು ಒಂಭತ್ತು ಅಂಕಣಗಳಲ್ಲಿದ್ದಾಗ ಮಧ್ಯದ ಅಂಕಣದ ಛತ್ತಿನಲ್ಲಿ ಭುವನೇಶ್ವರಿಯನ್ನು ಮಾತ್ರ ನಿರ್ಮಿಸಲು ಸಾಧ್ಯವಾಗುತ್ತದೆ. ಆದರೆ ಪ್ರಸ್ತುತ ಈ ದೇವಾಲಯದಲ್ಲಿ ಕೇವಲ ಆರು ಅಂಕಣಗಳಿರುವುದರಿಂದ ಮುಂದಿನ ಸಾಲಿನ ಮಧ್ಯದ ಅಂಕಣದ ಛತ್ತಿನಲ್ಲಿ ಅರಳು ಕಲಾಕೃತಿಯ ಭುವನೇಶ್ವರಿಯಿದ್ದು, ಉಳಿದ ಐದು ಅಂಕಣಗಳ ಛತ್ತಿನಲ್ಲಿ ವಿವಿಧ ರೀತಿಯ ಪುಷ್ಪಾಕೃತಿಗಳ ಅಲಂಕರಣೆ ಕಂಡುಬಂದಿದೆ.

ತೆರೆದ ಮುಖಮಂಟಪವು ಸಭಾಮಂಟಪಕ್ಕಿಂತ ಎರಡೂ ಬದಿಗಳಲ್ಲಿ ಒಂದೊಂದು ಹೆಚ್ಚುವರಿ ಅಂಕಣಗಳನ್ನು ಹೊಂದಿದೆ. ಹೀಗಾಗಿ ಒಟ್ಟು ಸಾಲಾಗಿ ಐದು ಅಂಕಣಗಳಲ್ಲಿದೆ. ಜೊತೆಗೆ ಸಭಾ ಮಂಟಪ ಮತ್ತು ಗರ್ಭಗೃಹದ ನೆಲಮಟ್ಟಕ್ಕಿಂತ ಸುಮಾರು ಒಂದುವರೆ ಅಡಿ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ. ಈ ಎರಡು ಅಂಶಗಳು ದೇವಾಲಯದ ವಾಸ್ತು ವೈಶಿಷ್ಟ್ಯವನ್ನು ಬಿಂಬಿಸುತ್ತವೆ. ಮುಖಮಂಟಪವು ಮುಂಭಾಗದಲ್ಲಿ ಮಾತ್ರ ತೆರೆದಿದ್ದು, ಎರಡೂ ಬದಿಗೆ ಭಿತ್ತಿಯನ್ನು ಹೊಂದಿದೆ. ಇಲ್ಲಿಯ ಛತ್ತು ಸರಳವಾಗಿದೆ. ಸಭಾಮಂಟಪದ ಮುಂದಿನ ಕಂಬಗಳು ಕೆಳಗೆ ಮತ್ತು ಮೇಲೆ ಅಸಮವಾದ ಚೌಕಭಾಗಗಳನ್ನು ಹೊಂದಿದ್ದು ಏಕಶಿಲಾ ಸ್ತಂಭಗಳಾಗಿವೆ. ಎರಡು ಚೌಕಭಾಗಗಳ ಮಧ್ಯ ದೀರ್ಘವಾದ ನಾಲ್ಕು ಪಟ್ಟಿಕೆಗಳು ಹಾಗೂ ನಾಲ್ಕು ಮೂಲೆ ಪಟ್ಟಿಗಳಿದ್ದು, ಕಂಬಗಳು ಅಷ್ಟಕೋನಾಕಾರದಲ್ಲಿ ರಚಿತವಾಗಿವೆ. ಕಂಬಗಳ ಮೇಲಿನ ಬೋದುಗೆಗಳು ಸರಳವಾಗಿವೆ.

ಅಧಿಷ್ಠಾನವು ಮಂಚಬಂಧ ಶೈಲಿಯಲ್ಲಿದ್ದು ಉಪಾನ, ಗಳ, ಕಪೋತ ಭಾಗಗಳನ್ನು ಹೊಂದಿದೆ. ಭಿತ್ತಿಭಾಗವು ಬೃಹತ್ ಕಲ್ಲು ಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಹೀಗಾಗಿ ಭಿತ್ತಿಯಲ್ಲಿ ಕೈಪಿಡಿಕಂಬಗಳು ಹಾಗೂ ಬೋದುಗೆಗಳು ಗೋಚರಿಸುತ್ತವೆ. ಗರ್ಭಗೃಹ ಹಾಗೂ ಸಭಾಮಂಟಪದ ದಕ್ಷಿಣ ಗೋಡೆಗಳಲ್ಲಿ ಬೃಹತ್ ಹೆಡೆ ಬಿಚ್ಚಿದ ಸರ್ಪಗಳ ಉಬ್ಬುಶಿಲ್ಪಗಳಿವೆ. ದೇವಾಲಯದ ಮಾಡಿನಲ್ಲಿ ಅಲ್ಲಲ್ಲಿ ಇಟ್ಟಿಗೆ ಮತ್ತು ಗಾರೆಯ ಕಂಗೂರಾಕೃತಿಗಳನ್ನು, ಮೂಲೆಗಳಲ್ಲಿ ಸಿಂಹಶಿಲ್ಪಗಳನ್ನು ರಚಿಸಲಾಗಿದೆ. ಸರ್ಪದ ಕೆಳಭಾಗದಲ್ಲಿ ಆನೆಯ ಶಿಲ್ಪವಿದೆ. ಗರ್ಭಗೃಹದ ಮೇಲೆ ಇತ್ತೀಚಿನ ಶಿಖರವಿದೆ. ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವಿದ್ದು, ಅದರ ಪೀಠದಲ್ಲಿ ವೈಷ್ಣವ ಚಿಹ್ನೆಗಳಾದ ಶಂಖ, ಚಕ್ರ ಮತ್ತು ಸ್ತ್ರೀ ಪುರಷರ ಭಕ್ತ ಶಿಲ್ಪವಿದೆ. ಬಹುಶಃ ಪಾಳೆಯಗಾರರ ದಂಪತಿಗಳ ಉಬ್ಬುಶಿಲ್ಪ ಇರಬಹುದು. ಪಕ್ಕದಲ್ಲಿ ಆಂಜನೇಯ ಶಿಲ್ಪವಿದೆ. ದೇವಾಲಯದ ಸುತ್ತಲೂ ಆವರಣವಿದ್ದು ಕಲ್ಲಿನಿಂದ ಹೊಂದಿಸಲಾಗಿದೆ.

**ಜಿಗಳಿ ರಂಗನಾಥಸ್ವಾಮಿ ದೇವಾಲಯ :**

ದಾವಣಗೆರೆ ಜಿಲ್ಲೆ ಹರಿಹರ ತಾಲೂಕಿನ ಜಿಗಳಿ ಗ್ರಾಮದಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಈ ಗ್ರಾಮ ಹರಿಹರದಿಂದ ಸುಮಾರು ಹನ್ನೊಂದು ಕೀ.ಮೀಟರ ದೂರದಲ್ಲಿ ದಕ್ಷಿಣ ದಿಕ್ಕಿನಲ್ಲಿದೆ. ರಂಗನಾಥನ ಮೂಲ ಗರ್ಭಗುಡಿಯು ಉತ್ತರಾಭಿಮುಖವಾಗಿದ್ದು, ಪೂರ್ವದಲ್ಲಿ ಮತ್ತೊಂದು ದ್ವಾರವಿದೆ. ಅಲ್ಲದೆ ಮೂಲ ದೇವಾಲಯಕ್ಕೆ ಹೊಂದಿಕೊಂಡಂತೆ ಪಶ್ಚಿಮ ದಿಕ್ಕಿನಲ್ಲಿ ಮತ್ತೊಂದು ಗರ್ಭಗುಡಿಯಿದೆ. ಹೀಗಾಗಿ ಎರಡು ಗರ್ಭಗುಡಿಗಳನ್ನು ಹೊಂದಿದ ದೇವಾಲಯವಾಗಿದೆ. ದೇವಾಲಯವನ್ನು ಬಳಪದ ಶಿಲೆ ಮತ್ತು ಚಪ್ಪಡಿ ಕಲ್ಲುಗಳಿಂದ ನಿರ್ಮಿಸಲಾಗಿದೆ. ಎತ್ತರವಾದ ವೇದಿಕೆಯ ಮೇಲೆ ನಿರ್ಮಿಸಲಾಗಿರುವ ಈ ದೇವಾಲಯವು ಎರಡು ಗರ್ಭಗೃಹಗಳನ್ನು

ಹೊಂದಿದ್ದು, ಮುಂಭಾಗದಲ್ಲಿ ಅಂತರಾಳ ಮತ್ತು ನವರಂಗವಿದೆ. ಉತ್ತರ ಮತ್ತು ಪೂರ್ವ ದಿಕ್ಕಿನಲ್ಲಿ ಎರಡು ದ್ವಾರಗಳಿವೆ.

ಉತ್ತರದ ಮುಖ್ಯ ಗರ್ಭಗುಡಿ ಚೌಕಾಕಾರವಾಗಿದ್ದು, ಅದರಲ್ಲಿ ಸ್ಥಾನಕ ರಂಗನಾಥನ ಮೂರ್ತಿಶಿಲ್ಪವಿದೆ. ಚತುರ್ಭುಜನಾದ ರಂಗನಾಥನು ಮೇಲಬಲಕ್ಕೆ ಶಂಖ, ಮೇಲಎಡಕ್ಕೆ ಚಕ್ರ, ಕೆಳಬಲಕ್ಕೆ ಪದ್ಮ ಮತ್ತು ಕೆಳಎಡಕ್ಕೆ ಗದೆ ಹಿಡಿದ ಮೂರ್ತಿಶಿಲ್ಪವಾಗಿದೆ. ರಂಗನಾಥನ ಪಾದದ ಇಕ್ಕೆಲದಲ್ಲಿ ಬಲ ಮತ್ತು ಎಡ ಭಾಗದಲ್ಲಿ ಛಾಮರ ಧಾರಿಯರ ಶಿಲ್ಪಗಳಿವೆ. ಸುತ್ತಲೂ ಪ್ರಭಾವಳಿಯನ್ನು ಹೊಂದಿದ್ದು ಅಲಂಕಾರದಿಂದ ಕೂಡಿದೆ. ರಂಗನಾಥನ ಮೂರ್ತಿಶಿಲ್ಪವು ಗರುಡ ಶಿಲ್ಪವಿರುವ ಪೀಠದ ಮೇಲಿದೆ. ಗರ್ಭಗೃಹದ ದ್ವಾರದ ಲಲಾಟದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ. ಕೆಳಭಾಗದಲ್ಲಿ ಬಲ ಮತ್ತು ಎಡಭಾಗದಲ್ಲಿ ಫಲ, ಪುಷ್ಪಗಳನ್ನು ಹಿಡಿದು ನಿಂತಿರುವ ಚಾಮರಧಾರಿಯರ ಶಿಲ್ಪಗಳಿವೆ. ಈ ಚಾಮರಧಾರಣಿಯರನ್ನು ಸ್ತಂಭಗಳ ಮೇಲಿನ ಲತಾ ತೋರಣದ ಮಧ್ಯದಲ್ಲಿ ಕೆತ್ತಲಾಗಿದೆ. ದ್ವಾರವು ರತ್ನ, ಸ್ತಂಭ, ಪುಷ್ಪದಳಗಳ ಶಾಖೆಯಿಂದ ಕೂಡಿದ್ದು, ಮೊದಲಿನ ಶಾಖೆ ಲಲಾಟ ಬಿಂಬದವರೆಗೂ ಮುಂದುವರೆದಿದೆ. ಈ ಗರ್ಭಗುಡಿಯ ಮುಂದಿನ ಅಂತರಾಳವು ತೆರೆದ ರೀತಿಯಲ್ಲಿದೆ.

ಪಶ್ಚಿಮ ಭಾಗದ ಗರ್ಭಗುಡಿ ಚೌಕಾಕಾರವಾಗಿದ್ದು, ಅದರಲ್ಲಿ ಲಿಂಗವಿದೆ. ಮುಂಭಾಗದಲ್ಲಿ ನಂದಿಯ ಶಿಲ್ಪವಿದೆ. ಇದರ ದ್ವಾರದ ಪೇದ್ಯಾಭಾಗದಲ್ಲಿ ಕುಂಭಗಳ ಅಲಂಕಾರವಿದೆ. ದ್ವಾರದಲ್ಲಿ ಪುಷ್ಪ, ಲತೆಗಳಿಂದ ಕೂಡಿದ ಏಕ ಶಾಖೆ ಪಟ್ಟಿಯಿದೆ. ಲಲಾಟದ ಆಯತಾಕಾರದ ಪಟ್ಟಿಕೆಯಲ್ಲಿ ಗಜಲಕ್ಷ್ಮೀ ಶಿಲ್ಪವಿದ್ದು, ಗಜಲಕ್ಷ್ಮೀಯ ಎರಡು ಬದಿಗೂ ಅರೆಕಂಭಗಳ ರಚನೆ ಇದೆ. ಈ ಗರ್ಭಗುಡಿಯ ಮುಂದಿನ ಅಂತರಾಳವು ಆಯತಾಕಾರವಾಗಿದ್ದು, ಅದರಲ್ಲಿ ಗಣೇಶನ ಶಿಲ್ಪವಿದೆ.

ನವರಂಗದಲ್ಲಿ ನಾಲ್ಕು ಕಂಭಗಳಿದ್ದು, ಅವು ಚೌಕ, ಅಷ್ಟ ಮತ್ತು ಚೌಕಾಕಾರವಾಗಿವೆ. ನವರಂಗದ ವಾಯುವ್ಯ ಭಾಗದಲ್ಲಿನ ಕಂಬವೊಂದರ ಚೌಕಪಟ್ಟಿಕೆಯಲ್ಲಿ ಆನೆಯ ಮೇಲೆ ಕುಳತಿರುವ ಸ್ತ್ರೀ ಶಿಲ್ಪ ಹಾಗೂ ಆನೆಯ ಮೇಲೆ ಕುಳಿತ ಮಾವುತನ ಶಿಲ್ಪವಿದೆ. ಇಲ್ಲಿನ ಬೋದಿಗೆಗಳು ಅಲಂಕಾರಯುಕ್ತವಾಗಿಲ್ಲ. ನವರಂಗದ ಮುಚ್ಚಿಗೆಯಲ್ಲಿ ಪದ್ಮ, ಏಡಿ, ನಾಗಬಂಧಗಳನ್ನು ಕೆತ್ತಲಾಗಿದೆ. ನವರಂಗದ ಉತ್ತರ ಹಾಗೂ ಪೂರ್ವಭಾಗದ ಎರಡು ದ್ವಾರಗಳು ಸರಳವಾಗಿವೆ. ಪೂರ್ವಭಾಗದ ದ್ವಾರದ ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪ ಕೆತ್ತಲಾಗಿದೆ.

ದೇವಾಲಯಕ್ಕೆ ಅಂಟಿಕೊಂಡಂತೆ ೨೦ ಅಂಕಣಗಳ ಒಂದು ಮಂಟಪವಿದೆ. ಇದರಲ್ಲಿರುವ ಎರಡು ಅಂಕಣಗಳಿಗೆ ಪ್ರತ್ಯೇಕ ಗೋಡೆ ಕಟ್ಟಿ ದೇವಾಲಯಕ್ಕೆ ಸಂಬಂಧಿಸಿದಂತೆ ಸಾಮಾನುಗಳನ್ನು ಇಟ್ಟು ದಾಸ್ತಾನು ಕೋಣೆಯಾಗಿ ಪರಿವರ್ತಿಸಿದ್ದಾರೆ. ಈ ಮಂಟಪದಲ್ಲಿನ ಕಂಬಗಳು ಕೆಳಭಾಗದಲ್ಲಿ

ಚತುರ್ಮುಖ ಹೊಂದಿದ್ದು, ಮೇಲಿನ ಅರ್ಧವು ಅಷ್ಟಮುಖವಾಗಿದೆ. ಹೊರ ಮುಖದ ಕಂಬಗಳ ಸಾಲುಗಳನ್ನು ಗಾರೆಯ ಗೋಡೆಯನ್ನು ನಿರ್ಮಿಸಿ, ಜೋಡಿಸಿ ದೇವಾಲಯವನ್ನು ನಿರ್ಮಿಸಲಾಗಿದೆ. ದೇವಾಲಯ ಕಂಬಗಳಲ್ಲಿ ಅಲ್ಲಲ್ಲಿ ಕುದುರೆ ಸವಾರಿ ಮಾಡುವ ಯೋಧರ, ಆನೆ ಮೇಲೆ ಸವಾರಿ ಮಾಡುತ್ತಿರುವ ಯೋಧರ, ಕುಳಿತಿರುವ ಭಂಗಿಯಲ್ಲಿ ಜಟ್ಟಿಗಳು, ಮಲ್ಲಯುದ್ಧ ನಿರತ ಜಟಿಗಳ ಉಬ್ಬು ಚಿತ್ರಗಳಿವೆ. ಛಾವಣಿಯ ಹಾಸುಗಲ್ಲುಗಳಲ್ಲಿ ಒಂದೆಡೆ ಗಂಡಭೇರುಂಡ, ಇನ್ನೊಂದೆಡೆ ಆಮೆ, ಎರಡು ಮೀನುಗಳು, ಅರಳಿದ ನಾಲ್ಕು ಸುತ್ತಿನ ಕಮಲದಳಗಳು, ನಾಗಮಂಡಲದ ಉಬ್ಬು ಚಿತ್ರಣಗಳೂ ಇವೆ. ಒಂದು ಕಡೆ ಕುದುರೆಯ ಹಿಂದೆ ಮುಂದೆ ಖಡ್ಗಧಾರಿಯಾದ ಯೋಧರು ನಡೆದು ಹೋಗುತ್ತಿರುವ ಉಬ್ಬು ಚಿತ್ರವಿದೆ.

ದೇವಾಲಯದ ಛಾವಣಿಯ ಕಂಬದ ಮೇಲ್ಭಾಗದಲ್ಲಿರುವ ಶಾಸನವು ಜಗಳಿಯ ಗೌಡ ಮನೆತನದ ಮಲ್ಲಪ್ಪನ ಮಗ ಈ ಮಂಟಪವನ್ನು ಕಟಿಸಿರುವ ಉಲ್ಲೇಖವಿದೆ.[೧೮] ಆದರೆ ರಂಗನಾಥನ ಮೂರ್ತಿಶಿಲ್ಪವು ಕಲ್ಯಾಣ ಚಾಲುಕ್ಯರ ಶೈಲಿಯನ್ನು ಬಿಂಬಿಸುತ್ತದೆ. ದೇವಾಲಯದ ಹೊರಭಾಗದ ಅಧಿಷ್ಠಾನವು ಸರಳವಾಗಿದೆ. ಹೊರಭಾಗದ ಭಿತ್ತಿಯು ಸ್ಥಳೀಯ ಕಲ್ಲುಗಳಿಂದ ನಿರ್ಮಿತವಾಗಿದೆ. ಭಿತ್ತಿ ಭಾಗದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಭಿತ್ತಿಯ ಮೇಲಿನ ಕಪೋತವು ಪ್ರಸ್ತುತ ಕಂಡುಬರುವುದಿಲ್ಲ. ಉತ್ತರದ ಗರ್ಭಗುಡಿ ಮೇಲೆ ಇತ್ತೀಚೆಗೆ ಇಟ್ಟಿಗೆಯಿಂದ ನಿರ್ಮಿಸಿದ ಶಿಖರೋಪಾದಿಯ ಕಟ್ಟಡವಿದೆ.

**ದೇವರಹಳ್ಳಿ ರಂಗನಾಥಸ್ವಾಮಿ ದೇವಾಲಯ :**

ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲೂಕಿನ ದೇವರಹಳ್ಳಿಯಲ್ಲಿ ರಂಗನಾಥ ದೇವಾಲಯವಿದೆ. ಹರಿದ್ರಾವತಿ ನದಿ ದಂಡೆ ಸಮೀಪವಿರುವ ಈ ದೇವರಹಳ್ಳಿ ಗ್ರಾಮವು ಉಡುಗಿರಿ ಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದೆ. ಈ ಗ್ರಾಮದ ಬಳಿಯ ದಕ್ಷಿಣ ದಿಕ್ಕಿನ ಬೆಟ್ಟದ ಮೇಲೆ ಪೂರ್ವಾಭಿಮುಖವಾಗಿ ದೇವಾಲಯವಿದ್ದು, ವಿಜಯನಗರ ಕಾಲಾವಧಿಯಲ್ಲಿ ನಿರ್ಮಾಣಗೊಂಡಂತೆ ಕಂಡುಬರುತ್ತದೆ. ದೇವಾಲಯವು ಗರ್ಭಗುಡಿ, ಅಂತರಾಳ, ನವರಂಗ ಹಾಗೂ ತೆರೆದ ಮುಖ ಮಂಟಪವನ್ನು ಹೊಂದಿದೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಅದರಲ್ಲಿ ಹುಟ್ಟು ಗುಂಡು ಕಲ್ಲು ಇದೆ. ಅದರ ಹಿಂಭಾಗದಲ್ಲಿ ಕೇಶವನ ಮೂರ್ತಿಶಿಲ್ಪವಿದೆ. ಪ್ರಾರಂಭದಿಂದ ಹುಟ್ಟು ಗುಂಡು ಕಲ್ಲನ್ನು ರಂಗನಾಥನೆಂದು ಪೂಜಿಸಲಾಗುತ್ತಿದೆ. ನಂತರದಲ್ಲಿ ವಿಜಯನಗರ ಕಾಲದಲ್ಲಿ ಶ್ರೀಕೃಷ್ಣದೇವರಾಯನು ಕೇಶವನ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಿದನೆಂದು ಪ್ರತೀತಿ ಇದೆ. ಅಲ್ಲದೆ ಆ ಹುಟ್ಟುಗುಂಡು ಕಲ್ಲು ಹರಿ-ಹರರ ಸಂಕೇತವೆಂದು ಭಾವಿಸಲಾಗಿದೆ. ಆ ಹುಟ್ಟುಗುಂಡು ಕಲ್ಲಿನಲ್ಲಿ ಪೂರ್ವ ದಿಕ್ಕಿನಲ್ಲಿ ಶಂಖ,

ಚಕ್ರ ಚಿಹ್ನೆಗಳಿರುವುದರಿಂದ ಶ್ರೀ ಹರಿಯೆಂದೂ, ಪಶ್ಚಿಮ ಭಾಗದಲ್ಲಿ ಬಾಣ, ಜಟೆ, ಗಂಗೆ ಇರುವುದರಿಂದ ಹರರೂಪವೆಂದು ಭಕ್ತರು ಭಾವಿಸಿದ್ದಾರೆ. ಗರ್ಭಗೃಹದ ದ್ವಾರವು ಸರಳವಾಗಿದ್ದು, ಲಲಾಟದಲ್ಲಿ ಚೌಕಾಕಾರದ ಪಟ್ಟಿಕೆಯಲ್ಲಿ ಗರುಡನ ಶಿಲ್ಪವನ್ನು ಕೆತ್ತಲಾಗಿದೆ. ನವರಂಗದಲ್ಲಿ ನಾಲ್ಕು ಕಣಶಿಲೆಯ (ಗ್ರಾನೈಟ್) ಶಿಲೆಯ ಕಂಬಗಳಿವೆ. ಈ ಕಂಬಗಳು ಚೌಕ ಹಾಗೂ ಚತುರಾಶ್ರವಾಗಿದ್ದು, ಸರಳವಾಗಿವೆ. ನವರಂಗದ ಮುಂದೆ ತೆರೆದ ಮುಖ ಮಂಟಪವಿದ್ದು, ಅದರಲ್ಲಿ ಹತ್ತು ಚೌಕ, ಚತುರಾಶ್ರಕಾರದ ಕಂಭಗಳಿವೆ. ಈ ಕಂಬಗಳ ಚೌಕ ಭಾಗದಲ್ಲಿ ಆಂಜನೇಯ ಮತ್ತು ಕೆಲವು ಭಕ್ತರ ಶಿಲ್ಪಗಳಿವೆ. ಈ ಕಂಬಗಳ ಮೇಲಿನ ಬೋದಿಗೆಯು ಪುಷ್ಪಗಳ ಅಲಂಕರಣಗಳಿಂದ ಕೂಡಿದೆ. ಅವುಗಳ ನಾಲ್ಕು ದಿಕ್ಕಿನಲ್ಲೂ ಕಮಲದ ಮೊಗ್ಗು ಇಳಿಬಿದ್ದ ರೀತಿಯಲ್ಲಿದೆ. ವಿಜಯನಗರ ಶೈಲಿಯಲ್ಲಿರುವ ಈ ದೇವಾಲಯಕ್ಕೆ ವಿಜಯನಗರದ ಕೊನೆಯ ಅರಸರು ದಾನ ನೀಡಿದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ. ಅಲ್ಲದೆ ಸಂತೇಬೆನ್ನೂರು ಪಾಳೆಯಗಾರರು ಮತ್ತು ಕೆಳದಿ ನಾಯಕರು ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದಾಗಿ ತಿಳಿದು ಬರುತ್ತದೆ.[೧೯]

ಶ್ರೀ ರಂಗನಾಥಸ್ವಾಮಿ ಮೂಲ ಗರ್ಭಗೃಹ ಪೂರ್ವದಿಕ್ಕಿನಲ್ಲಿದ್ದರೆ, ಆತನ ವಿರುದ್ಧ ಪಶ್ಚಿಮ ದಿಕ್ಕಿನಲ್ಲಿ ಶ್ರೀ ಲಕ್ಷ್ಮೀದೇವಿ ಗುಡಿ ಇದೆ. ದೇವಾಲಯದ ಸುತ್ತಲೂ ಪ್ರಾಕಾರವಿದೆ. ದೇವಾಲಯ ಬೆಟ್ಟದ ಮೇಲೆ ಇರುವುದರಿಂದ ರಸ್ತೆಯ ಪಕ್ಕದಲ್ಲಿರುವ ಸೋಪಾನಗಳಿಂದ ಬೆಟ್ಟವನ್ನು ಹತ್ತಬೇಕಾಗುತ್ತದೆ. ರಸ್ತೆಯ ಪಕ್ಕದಲ್ಲಿ ಬೆಟ್ಟಕ್ಕೆ ಗೋಪುರವನ್ನು ನಿರ್ಮಿಸಲಾಗಿದೆ.

**ಮಾನಸಗಲ್ ರಂಗನಾಥಸ್ವಾಮಿ ದೇವಾಲಯ :**

ರಾಯಚೂರ ಜಿಲ್ಲೆ ದೇವದುರ್ಗ ತಾಲೂಕಿನ ಮಾನಸಗಲ್ ಗ್ರಾಮದಲ್ಲಿ ಶ್ರೀರಂಗನಾಥಸ್ವಾಮಿ ದೇವಾಲಯವಿದೆ. ದೇವದುರ್ಗ ಹಾಗೂ ಅರಕೇರಿಯ ಮಾರ್ಗದ ಮಧ್ಯದಲ್ಲಿ ಈ ಗ್ರಾಮವು ದೊರೆಯುತ್ತದೆ. ಪೂರ್ವಾಭಿಮುಖವಾಗಿರುವ ರಂಗನಾಥ ದೇವಾಲಯವು ತಲವಿನ್ಯಾಸದಲ್ಲಿ ದ್ವಿಕೂಟ ಗರ್ಭಗೃಹವನ್ನು ಹೊಂದಿದೆ. ದೇವಾಲಯವು ಸುಕನಾಸಿ, ನವರಂಗ, ತೆರೆದ ಮಂಟಪವನ್ನು ಹೊಂದಿದೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಉದ್ಭವ ಗುಂಡು ಕಲ್ಲನ್ನು ರಂಗನಾಥನೆಂದು ಪೂಜಿಸಲಾಗುತ್ತಿದೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದೆ. ದ್ವಾರದ ಇಕ್ಕೆಲದಲ್ಲಿ ಪೂರ್ಣಕುಂಭಗಳ ಅಲಂಕರಣೆಯನ್ನು ಹೊಂದಿದೆ. ಅಲ್ಲದೆ ಎರಡು ವೈಷ್ಣವ ದ್ವಾರಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ.

ಇನ್ನೊಂದು ಗರ್ಭಗೃಹವು ಮೂಲ ರಂಗನಾಥನ ಗರ್ಭಗೃಹದ ಎಡಭಾಗದಲ್ಲಿದೆ. ಇದು ಲಕ್ಷ್ಮೀ ಅಮ್ಮನವರ ಗರ್ಭಗುಡಿಯಾಗಿದೆ. ಇದರಲ್ಲಿ ಲಕ್ಷ್ಮೀ ಮೂರ್ತಿಶಿಲ್ಪವನ್ನು ಇರಿಸಲಾಗಿದೆ.

ಚತುರ್ಭಜಳಾದ ಲಕ್ಷ್ಮೀ ಶಿಲ್ಪವು ಮೇಲಬಲಕ್ಕೆ ಮತ್ತು ಎಡಕ್ಕೈಯಲ್ಲಿ ಕಮಲದ ಮೊಗ್ಗು ಮತ್ತು ಕೆಳಬಲಕ್ಕೆಯು ವರದ ಮುದ್ರೆ ಹಾಗೂ ಕೆಳಎಡಕ್ಕೈಯು ಅಭಯ ಹಸ್ತದ ಸಂಕೇತವಾಗಿದೆ. ಕೊರಳಹಾರ ಮತ್ತು ಇತರ ಆಭರಣಗಳನ್ನು ಶಿಲ್ಪವು ಹೊಂದಿದೆ.

ತೆರೆದ ಮುಖಮಂಟಪವು ವಿಶಾಲವಾಗಿದ್ದು, ಇದರಲ್ಲಿ ಒಟ್ಟು ಆರು ಕಂಬಗಳಿವೆ. ಕಂಬಗಳು ಕೆಳಭಾಗದಲ್ಲಿ ಪೀಠ ಭಾಗವನ್ನು ಹೊಂದಿದ್ದು, ಚೌಕಪಟ್ಟಿಕೆಗಳನ್ನು ಹೊಂದಿವೆ. ಒಂದೊಂದು ಕಂಬವು ಎಂಟು ಚೌಕಪಟ್ಟಿಕೆಗಳನ್ನು ಹೊಂದಿವೆ. ಮೇಲ್ಭಾಗದಲ್ಲಿ ಚೌಕ, ಗೋಲಾಕಾರ ಮತ್ತು ಬೋದಿಗೆಯನ್ನು ಹೊಂದಿವೆ. ಇದರ ಭಿತ್ತಿಯೂ ಸರಳವಾಗಿವೆ. ಭಿತ್ತಿಯ ಹೊರಭಾಗದ ಎಡಭಾಗದಲ್ಲಿ ಗರ್ಭಗೃಹಕ್ಕೆ ಪ್ರನಾಳವಿದೆ. ದೇವಾಲಯವು ಎರಡು ಶಿಖರಗಳನ್ನು ಹೊಂದಿದ್ದು, ನೂತನವಾಗಿ ನಿರ್ಮಿಸಲಾಗಿದೆ.

**ಜಾಲಹಳ್ಳಿ ರಂಗನಾಥಸ್ವಾಮಿ ದೇವಾಲಯ :**

ರಾಯಚೂರು ಜಿಲ್ಲೆ ದೇವದುರ್ಗ ತಾಲೂಕಿನ ಜಾಲಹಳ್ಳಿಯಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ದೇವಾಲಯವು ಗ್ರಾಮ ಮಧ್ಯದಲ್ಲಿದ್ದು ಪೂರ್ವಾಭಿಮುಖವಾಗಿದೆ. ಇದು ಏಕಕೂಟ ದೇವಾಲಯವಾಗಿದೆ. ಗರ್ಭಗೃಹವು ಚೌಕಾಕಾರವಾಗಿದ್ದು, ರಂಗನಾಥಸ್ವಾಮಿಯ ಸ್ಥಾನಕ ಶಿಲ್ಪವಿದೆ. ರಂಗನಾಥನು ಚತುರ್ಭುಜನಾಗಿದ್ದು, ಮೇಲಬಲಕ್ಕೆ ಶಂಖ, ಮೇಲಎಡಕ್ಕೆ ಚಕ್ರ ಮತ್ತು ಕೆಳಬಲಕ್ಕೆ ವರದ ಮತ್ತು ಕೆಳಎಡಕ್ಕೆ ಅಭಯ ಮುದ್ರೆಯಲ್ಲಿರುವ ಮೂರ್ತಿಶಿಲ್ಪವಾಗಿದೆ. ಗರ್ಭಗೃಹದ ಮೇಲ್ಛಾವಣೆಯಲ್ಲಿ ಗೋಲಾಕಾರದ ಒಂದು ಸುಂದರ ಕಮಲದ ಶಿಲ್ಪವನ್ನು ಕೆತ್ತಲಾಗಿದೆ. ಗರ್ಭಗೃಹದ ಬಾಗಿಲವಾಡವು ಸರಳವಾಗಿದ್ದು, ಇಕ್ಕೆಲದಲ್ಲಿ ಪೂರ್ಣಕುಂಭಗಳ ಅಲಂಕರಣೆಯಿದೆ. ಅಲ್ಲದೆ ಲಲಾಟದಲ್ಲಿ ಪದ್ಮದ ಚಿತ್ರವಿದೆ. ಅಂತರಾಳವು ಸರಳವಾಗಿದ್ದು ಯಾವುದೇ ಅಲಂಕರಣೆಯನ್ನು ಹೊಂದಿರುವುದು ಕಂಡುಬಂದಿಲ್ಲ. ಇದರ ಬಾಗಿಲ ವಾಡವು ಸರಳ ರಚನೆಯನ್ನು ಹೊಂದಿದ್ದು, ದ್ವಾರದ ಇಕ್ಕೆಲದಲ್ಲಿ ಎರಡು ವೈಷ್ಣವ ದ್ವಾರಪಾಲಕ ಶಿಲ್ಪಗಳಿವೆ. ಲಲಾಟದಲ್ಲಿ ಅರಳಿದ ಪದ್ಮದ ಚಿತ್ರವಿದೆ.

ನವರಂಗ ಮಂಟಪವು ವಿಶಾಲವಾಗಿದ್ದು, ಎಂಟು-ಎಂಟು ಕಂಬಗಳಿಂದ ನಿರ್ಮಾಣಗೊಂಡಿದೆ. ಕಂಬಗಳ ಪೀಠ ಚೌಕಾಕಾರವಾಗಿದ್ದು ಎಂಟು ಪಟ್ಟಿಕೆಗಳಿಂದ ಕೂಡಿದೆ. ಮೇಲ್ಭಾಗದಲ್ಲಿ ಗೋಲಾಕಾರದ ದಿಂಡನ್ನು ಹೊಂದಿದ್ದು, ಚೌಕ ಬೋದಿಗೆಗಳನ್ನು ಹೊಂದಿವೆ. ಕಂಬಗಳಲ್ಲಿ ಯಾವುದೇ ರೀತಿಯ ಶಿಲ್ಪಗಳು ಕಂಡುಬರುವುದಿಲ್ಲ. ಈ ಕಂಬಗಳೆಲ್ಲವು ಸರಳ ರಚನೆಯನ್ನು ಹೊಂದಿವೆ. ನವರಂಗದ ಕೆಳಭಾಗದಲ್ಲಿ ಪಾತಾಳಂಕಣವಿದ್ದು, ಎಂಟು ಕಂಬಗಳಿಂದ ಕೂಡಿದೆ. ಇಲ್ಲಿಯ ಕಂಬಗಳು ಸರಳವಾಗಿವೆ. ನವರಂಗ ಮತ್ತು ಪಾತಾಳಂಕಣದ ಪ್ರಸ್ತರ ಭಾಗವು ಕಂಗೂರಾಕೃತಿಗಳಿಂದ

ಅಲಂಕರಣೆಗೊಂಡಿವೆ. ದೇವಾಲಯದ ಶಿಖರವನ್ನು ನೂತನವಾಗಿ ನಿರ್ಮಿಸಲಾಗಿದೆ.

ನವರಂಗ ಮಂಟಪದ ಎಡಭಾಗದಲ್ಲಿ ಮತ್ತೊಂದು ಗರ್ಭಗೃಹದ ರೀತಿಯ ರಚನೆಯಿದ್ದು, ಅದರಲ್ಲಿ ಆಳ್ವಾರರ, ಭಕ್ತರ ಶಿಲ್ಪಗಳಿವೆ. ಈ ಗರ್ಭಗೃಹವು ಮೆಟ್ಟಿಲು ಮೆಟ್ಟಿಲುಗಳು ಕಿರಿದಾಗುತ್ತಾ ಹೋಗಿರುವ ಶಿಖರವನ್ನು ಹೊಂದಿದೆ. ದೇವಾಲಯದ ಮುಂಭಾಗದಲ್ಲಿ ಗರುಡ ಸ್ತಂಭ ತುಳಸಿ ಬೃಂದಾವನವಿದೆ. ಸುತ್ತಲೂ ಪ್ರಾಕಾರಗೋಡೆಯ ರಚನೆಯಿದೆ. ಪ್ರಾಕಾರವು ಮಹಾದ್ವಾರವನ್ನು ಹೊಂದಿದ್ದು, ಮೇಲ್ಭಾಗದಲ್ಲಿ ಗೋಪುರದ ರಚನೆ ಕಂಡುಬಂದಿಲ್ಲ.

**ಉಮ್ಮತ್ತೂರು ರಂಗನಾಥಸ್ವಾಮಿ ದೇವಾಲಯ :**

ಚಾಮರಾಜನಗರ ಜಿಲ್ಲೆ ಚಾಮರಾಜನಗರ ತಾಲೂಕಿನ ಉಮ್ಮತ್ತೂರು ಗ್ರಾಮದಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಇದು ವಿಜಯನಗರದ ಅರಸರ ಸಾಮಂತರಾಗಿದ್ದ ಉಮ್ಮತ್ತೂರು ಪಾಳೆಯಗಾರರ ರಾಜಧಾನಿಯಾಗಿತ್ತೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಉಮ್ಮತ್ತೂರು ಗ್ರಾಮದ ಮಧ್ಯಭಾಗದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಇದು ತ್ರಿಕೂಟಾಚಲವಾದ ದೇವಾಲಯವಾಗಿದ್ದು ವಿಶೇಷವಾಗಿದೆ. ಈ ದೇವಾಲಯವು ಮೂರು ಗರ್ಭಗೃಹಗಳು, ಒಂದು ಸುಕನಾಸಿ, ನವರಂಗ, ಮುಖಮಂಟಪವನ್ನು ಹೊಂದಿದೆ. ದೇವಾಲಯದ ಸುತ್ತಲೂ ಪ್ರಕಾರವನ್ನು ಹೊಂದಿದ್ದು, ಮುಂಭಾಗದಲ್ಲಿ ದ್ವಾರಮಂಟಪವನ್ನು ಹೊಂದಿದೆ ಮತ್ತು ಗರುಡ ಸ್ತಂಭವನ್ನು ಬಲಿಪೀಠವನ್ನು ನಿರ್ಮಿಸಲಾಗಿದೆ. ದೇವಾಲಯವನ್ನು ಕಣಶಿಲೆಯಿಂದ ನಿರ್ಮಿಸಲಾಗಿದೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಎರಡು ಅಡಿ ಎತ್ತರದ ಗರುಡ ಪೀಠದ ಮೇಲೆ ಶ್ರೀರಂಗನಾಥಸ್ವಾಮಿಯ ಶಯನ ಮೂರ್ತಿಶಿಲ್ಪವಿದೆ. ರಂಗನಾಥನು ಬಲಮೊಗ್ಗಲಾಗಿ ಸರ್ಪದ ಹಾಸಿಗೆಯ ಮೇಲೆ ಮಲಗಿದ್ದು, ಪೂರ್ವದಿಕ್ಕಿಗೆ ಮುಖ ಮಾಡಿ ಮಲಗಿದ ಶಿಲ್ಪವಾಗಿದೆ. ಸರ್ಪವು ಏಳು ಹೆಡೆಯನ್ನು ಹೊಂದಿದ್ದು ಶಯನ ರಂಗನಾಥನ ತಲೆಯ ಮೇಲೆ ಹರಡಿಕೊಂಡಿದೆ. ಸ್ವಾಮಿಯ ನಾಭಿಯಿಂದ ಚತುರ್ಮುಖ ಬ್ರಹ್ಮನ ಶಿಲ್ಪವಿದ್ದು, ಸ್ವಾಮಿಯ ಪಾದದ ಅಡಿಯಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಶಿಲ್ಪವಿದೆ. ಈ ಶಿಲ್ಪಗಳು ಸ್ವಾಮಿಯ ಕಾಲು ಒತ್ತುತ್ತಿರುವಂತೆ ಕೆತ್ತಲಾಗಿದೆ. ಗರ್ಭಗೃಹದ ಮೇಲ್ಭಾವಣಿಯಲ್ಲಿ ತೆರೆದ ಕಮಲದ ಭುವನೇಶ್ವರಿಯ ಚಿತ್ರವಿದೆ. ಬಾಗಿಲುವಾಡವು ಅಗಲವಾಗಿದ್ದು, ಸರಳವಾದ ರಚನೆಯನ್ನು ಹೊಂದಿದೆ ಮತ್ತು ಲಲಾಟದಲ್ಲಿ ಯಾವುದೇ ರೀತಿಯ ಶಿಲ್ಪಗಳು ಕಂಡುಬರುವುದಿಲ್ಲ. ಸುಕನಾಸಿಯು ಅಗಲವಾದ ರಚನೆಯನ್ನು ಹೊಂದಿದ್ದು ಸರಳವಾಗಿದೆ. ಈ ಸ್ಥಳದಲ್ಲಿ ಉತ್ಸವಮೂರ್ತಿಯನ್ನು ಇಡಲಾಗಿದೆ. ಸುಕನಾಸಿಯ ಗೋಡೆಗಂಬದಲ್ಲಿ ಶಾಸನದ ಕಲ್ಲು ಕಂಡುಬರುತ್ತದೆ.

ನವರಂಗವು ಮಧ್ಯದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳನ್ನು ಹೊಂದಿದೆ. ನವರಂಗ ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಒಂದೊಂದರಂತೆ ಎರಡು ಗರ್ಭಗೃಹಗಳಿವೆ. ದಕ್ಷಿಣ ದಿಕ್ಕಿನ ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ನವನೀತ ಕೃಷ್ಣ ಅಥವಾ ಬೆಣ್ಣೆಯ ಕೃಷ್ಣನ ಶಿಲ್ಪವಿದ್ದು, ಸುಂದರವಾದ ಅಲಂಕರಣೆಯನ್ನು ಹೊಂದಿದೆ. ದ್ವಿಭುಜವನ್ನು ಹೊಂದಿರುವ ಈ ಶಿಲ್ಪವು ಬಲಗೈಯಲ್ಲಿ ಬೆಣ್ಣೆಯನ್ನು ಹಿಡಿದಿದ್ದು, ಎಡಗೈಯನ್ನು ನೆಲಕ್ಕೆ ಊರಿದೆ. ಕೃಷ್ಣನು ಪೀಠ ಭಾಗದ ಮೇಲೆ ಉತ್ಕುಟಿಕಾಸನವನ್ನು ಹೊಂದಿದ್ದು, ಕುಳಿತ ಶಿಲ್ಪವಾಗಿದೆ. ಈ ಗರ್ಭಗೃಹವು ಕಮಲದ ಮೊಗ್ಗಿನ ಆಕೃತಿಯ ಭುವನೇಶ್ವರಿಯನ್ನು ಹೊಂದಿದೆ. ಬಾಗಿಲುವಾಡವು ಸರಳವಾಗಿದ್ದು, ಲಲಾಟಬಿಂಬದಲ್ಲಿ ಯಾವುದೇ ಉಬ್ಬು ಕೆತ್ತನೆಯ ಶಿಲ್ಪವು ಕಂಡುಬರುವುದಿಲ್ಲ.

ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ರಂಗನಾಯಕಿ ಅಮ್ಮನವರ ಶಿಲ್ಪವಿದ್ದು, ಮೂರು ಅಡಿ ಎತ್ತರವಾಗಿದೆ. ಸ್ಥಾನಕ ಭಂಗಿಯಲ್ಲಿರುವ ಈ ಶಿಲ್ಪವು ಚತುರ್ಭುಜಗಳನ್ನು ಹೊಂದಿದೆ. ಮುಂದಿನ ಬಲಕೈಯು ಅಭಯ ಮತ್ತು ಎಡಕೈಯು ವರದ ಮುದ್ರೆ ಹಸ್ತವಾಗಿದೆ. ಮೇಲುಬಲ ಮತ್ತು ಎಡಕೈಯಲ್ಲಿ ಕಮಲದ ಮೊಗ್ಗುಗಳನ್ನು ಹಿಡಿದಿರುವ ರಚನೆಯನ್ನು ಹೊಂದಿದೆ. ಶಿಲ್ಪವು ಸುಂದರವಾದ ರಚನೆಯನ್ನು ಹೊಂದಿದೆ. ಈ ಎರಡು ಗರ್ಭಗೃಹಗಳು ಸುಕನಾಸಿಯನ್ನು ಹೊಂದಿಲ್ಲ. ಇವು ನೇರವಾಗಿ ನವರಂಗಕ್ಕೆ ತೆರೆದುಕೊಳ್ಳುತ್ತವೆ. ನವರಂಗದ ವಾಯುವ್ಯದಲ್ಲಿ ವಿಶ್ವಕ್ಷೇಣ ಮೂರ್ತಿಶಿಲ್ಪವಿದೆ. ಆಸೀನ ಭಂಗಿಯಲ್ಲಿರುವ ಈ ಶಿಲ್ಪವು ಒಂದು ಕಾಲನ್ನು ಇಳಿಬಿಟ್ಟಿದೆ. ಚತುರ್ಭುಜಗಳನ್ನು ಹೊಂದಿದ್ದು ಶಂಖ, ಚಕ್ರ, ಅಭಯಹಸ್ತ ಮತ್ತು ಗದೆಯನ್ನು ಹಿಡಿದಿರುವ ಶಿಲ್ಪವಾಗಿದೆ. ನವರಂಗದ ಬಾಗಿಲುವಾಡದಲ್ಲಿ ಸುರಳಿಯಾಕಾರದ ಹೂಬಳ್ಳಿಗಳ ಅಲಂಕರಣೆಯ ಕೆತ್ತನೆ ಕಂಡುಬರುತ್ತಿದ್ದು, ಸುಂದರವಾದ ರಚನೆಯನ್ನು ಹೊಂದಿದೆ. ದ್ವಾರಬಂಧದ ಇಕ್ಕೆಲದಲ್ಲಿ ಎರಡು ವೈಷ್ಣವ ದ್ವಾರಪಾಲಕರ ಉಬ್ಬು ಕೆತ್ತನೆಯ ಶಿಲ್ಪಗಳಿವೆ. ಅಲ್ಲದೆ ಬಾಗಿಲುವಾಡದ ಎರಡು ಕಡೆ ಇರುವ ಗೋಡೆಗಂಬಗಳಲ್ಲಿಯು ಸಹ ದ್ವಾರಪಾಲಕರ ಉಬ್ಬು ಕೆತ್ತನೆಯ ಶಿಲ್ಪಗಳಿವೆ. ಲಲಾಟಬಿಂಬದಲ್ಲಿ ಅರಳಿದ ಕಮಲ ಆಕೃತಿಯ ಕೆತ್ತನೆ ಇದೆ.

ತೆರೆದ ಮುಖಮಂಟಪವು ನಾಲ್ಕು ಕಂಬಗಳ ಎರಡು ಸಾಲನ್ನು ಹೊಂದಿದೆ. ಒಟ್ಟು ಎಂಟು ಕಂಬಗಳನ್ನೊಳಗೊಂಡ ಆರು ಅಂಕಣಗಳನ್ನು ಹೊಂದಿದೆ. ಕಂಬಗಳು ವಿಜಯನಗರ ಶೈಲಿಯ ರಚನೆಯನ್ನು ಹೊಂದಿದ್ದು ಸರಳವಾಗಿವೆ. ಇವುಗಳ ಮೇಲೆ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಧಾರ್ಮಿಕ ಶಿಲ್ಪಗಳನ್ನು ಕೆತ್ತಲಾಗಿದೆ. ಆದರೆ ಒಂದು ಕಂಬವು ತಳಭಾಗದಲ್ಲಿ ಚತುರಶ್ರ–ಅಷ್ಟಾಶ್ರ ಮೇಲೆ ಹೋದಂತೆ ೧೬ ಮುಖಗಳನ್ನು ಹೊಂದಿದೆ. ಬಹುಶಃ ಇದು ಜೀರ್ಣೋದ್ಧಾರ ಸಂದರ್ಭದಲ್ಲಿ ಹೊಸದಾಗಿ ಸೇರಿಸಲಾಗಿರುವ ಕಂಬವಾಗಿರಬಹುದೆಂದು ತೋರುತ್ತದೆ. ನವರಂಗದ

ಮುಂದೆ ಎರಡು ಅಂಕಣದಲ್ಲಿ ಎತ್ತರವಾದ ವೇದಿಕೆ ಇದ್ದು ಪೂರ್ವ ದಿಕ್ಕಿಗೆ ಸೋಪಾನವಿದೆ. ಸೋಪಾನದ ಎರಡು ಕಡೆಯು ಏಕಶಿಲೆಯ ಎರಡು ಆನೆಗಳನ್ನು ನಿಲ್ಲಿಸಲಾಗಿದೆ. ಇದು ಗಜಶಾರ್ದೂಲ ಕೈಪಿಡಿಯ ಸೋಪಾನ ಮಾದರಿಯಾಗಿದೆ.

ಗರ್ಭಗೃಹ ಮತ್ತು ಸುಕನಾಸಿಯ ಅಧಿಷ್ಠಾನವು ಪ್ರತಿಭದ್ರ ಉಪಪೀಠವನ್ನು ಹೊಂದಿದೆ. ನವರಂಗದ ಉತ್ತರ ದಕ್ಷಿಣ ಭಾಗಕ್ಕೆ ಇರುವ ಗರ್ಭಗೃಹಗಳ ಅಧಿಷ್ಠಾನವು ಉಪಾನ, ಜಗತಿ, ವೃತ್ತ, ಕುಮುದ,ಗಳ ಮತ್ತು ಪಟ್ಟಿಗಳಿಂದ ಕೂಡಿದ್ದು ಸರಳವಾದ ಭಿತ್ತಿಯನ್ನು ಹೊಂದಿದ್ದು ಸರಳವಾದ ಪ್ರಸ್ತಾರವಿದೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಶಿಖರವಿದ್ದು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಶಿಖರದ ಮೇಲೆ ಮೂರು ಕಳಸಗಳಿವೆ. ಉಳಿದಂತೆ ಸುಕನಾಸಿ, ನವರಂಗ ಮತ್ತು ಮುಖಮಂಟಪದ ಭಿತ್ತಿಯ ಮೇಲೆ ಕೈಪಿಡಿ ಗೋಡೆಯನ್ನು ಜೀರ್ಣೋದ್ಧಾರದ ಸಂದರ್ಭದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಮುಖ್ಯ ಗರ್ಭಗೃಹದ ಜಲಪ್ರಣಾಳಿಯು ಉತ್ತರ ದಿಕ್ಕಿಗೆ ಇದೆ. ದೇವಾಲಯದ ಮುಂಭಾಗದಲ್ಲಿ ಈಶಾನ್ಯ ದಿಕ್ಕಿಗೆ ಸೇರಿದಂತೆ ತುಳಸಿ ಕಟ್ಟೆಯು ಇದೆ. ಮುಂಭಾಗದಲ್ಲಿ ಪೂರ್ವ ದಿಕ್ಕಿನಲ್ಲಿ ಮೂರು ಅಡಿ ಎತ್ತರದ ಬಲಿ ಪೀಠವಿದ್ದು, ಇದು ಜಗತಿ ತ್ರಿಪಟ್ಟ ಕುಮುದ ಹೊಂದಿದ್ದು ಅದರ ಮೇಲೆ ಬೋರಲು ಹಾಕಿದ ಕಮಲದ ಆಕೃತಿಯ ಚಿತ್ರವನ್ನು ಹೊಂದಿದ ಬಲಿಪೀಠ ವಿದೆ.

ದೇವಾಲಯದ ಸುತ್ತಲೂ ೮ ಅಡಿ ಎತ್ತರದ ಪ್ರಾಕಾರವನ್ನು ಹೊಂದಿದ್ದು ಇದು ಇತ್ತೀಚೆಗೆ ನಿರ್ಮಾಣವಾಗಿದೆ. ಪ್ರಾಕಾರದ ಪ್ರವೇಶ ದ್ವಾರವು ಪೂರ್ವಾಭಿಮುಖವಾಗಿದ್ದು ದ್ವಾರಮಂಟಪವನ್ನು ಹೊಂದಿದೆ. ಈ ಪ್ರವೇಶ ದ್ವಾರವು ನಾಲ್ಕು ಕಂಬಗಳ ಎರಡು ಸಾಲನ್ನು ಹೊಂದಿದ್ದು, ಮೂರು ಅಂಕಣಗಳಿಂದ ಕೂಡಿದೆ. ಮಧ್ಯದ ಅಂಕಣದಲ್ಲಿ ಬೃಹತ್ ಪ್ರವೇಶ ದ್ವಾರವಿದೆ. ಈ ದ್ವಾರಮಂಟಪದ ಮುಂಭಾಗದಲ್ಲಿ ಸುಮಾರು ೫೦ ಅಡಿ ಎತ್ತರದ ಗರುಡ ಸ್ತಂಭವಿದೆ. ಇದರ ತಳಭಾಗ ಚೌಕಾರವಾಗಿದ್ದು ನಾಲ್ಕು ಭಾಗಗಳಲ್ಲಿಯೂ ನಾಲ್ಕು ಸುಂದರ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ದೇವಾಲಯದ ಎದುರಿಗೆ ಅಂದರೆ ಪಶ್ಚಿಮಕ್ಕೆ ಭಕ್ತನ ಶಿಲ್ಪವಿದೆ. ಇದು ಉಮ್ಮತ್ತೂರಿನ ಉತ್ತರ ದಿಕ್ಕಿಗೆ ಪಾಳೆಯಗಾರರ ಅರಸನೊಬ್ಬನದಿರಬಹುದೆಂದು ಊಹಿಸಬಹುದು. ಉತ್ತರ ದಿಕ್ಕಿಗೆ ವಿಷ್ಣುವಿನ ಪೂರ್ವದಿಕ್ಕಿಗೆ ಗರುಡ, ದಕ್ಷಿಣ ದಿಕ್ಕಿಗೆ ಹನುಮಂತನ ಉಬ್ಬು ಶಿಲ್ಪಗಳಿವೆ. ಕಂಬವು ಮೇಲೆನಿಂದ ಕೆಳಗಿನವರೆಗೂ ೧೬ ಮುಖಗಳಿಂದ ಕೂಡಿದ್ದು, ಕಂಬದ ಕೊನೆಯಲ್ಲಿ ಕಮಲದ ಮೊಗ್ಗಿನಾಕಾರದ ಬೋದಿಗೆ ಹೊಂದಿದೆ. ಆದರೆ ಪ್ರಸ್ತುತ ಅದು ತ್ರುಟಿತಗೊಂಡಿದ್ದು, ಸ್ತಂಭದ ಪಕ್ಕದಲ್ಲಿಯೇ ಬಿದ್ದಿದೆ.

ದೇವಾಲಯದ ಸುಕನಾಸಿಯಲ್ಲಿರುವ ಗೋಡೆಗಂಬದಲ್ಲಿ ಕ್ರಿ.ಶ. ೧೫೩೧ರ ತೇದಿಯುಳ್ಳ ಶಾಸನವಿದ್ದು, ಇದರಲ್ಲಿ ವಿಜಯನಗರ ದೊರೆ ಅಚ್ಯುತರಾಯನಿಗೆ ಪುಣ್ಯವಾಗಲೆಂದು ಉಲ್ಲೇಖಿಸುತ್ತದೆ.

ಅಲ್ಲದೆ ತಿರುಮಕೂಡಲು ದಳವಾಯಿ ಗಂಗನಾಯಕರ ಕುಮಾರ ದಳವಾಯಿ ರಂಗನಾಯಕನು ಉಮ್ಮತ್ತೂರಿನ ಶ್ರೀರಂಗನಾಥದೇವರ ಒಂದು ಹೊತ್ತಿನ ನೈವೇದ್ಯಕ್ಕೆ ಒಂದು ಬೈಲನ್ನು ದಾನವಾಗಿ ಬಿಟ್ಟನೆಂದು ತಿಳಿದು ಬರುತ್ತದೆ.[೨೦]

ಈ ದೇವಾಲಯವನ್ನು ಧರ್ಮಸ್ಥಳದ ಶ್ರೀಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್, ಕರ್ನಾಟಕ ಸರ್ಕಾರ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮತ್ತು ಗ್ರಾಮದ ಶ್ರೀರಂಗನಾಥಸ್ವಾಮಿ ದೇವಾಲಯದ ಜೀರ್ಣೋದ್ಧಾರ ಸಮಿತಿ ಹಾಗೂ ಭಕ್ತಾದಿಗಳ ಸಹಕಾರದೊಂದಿಗೆ ಜೀರ್ಣೋದ್ಧಾರ ಮಾಡಲಾಗಿದ್ದು, ಪ್ರತಿ ದಿನ ಪೂಜಾ ಕಾರ್ಯಗಳು ಸೂಸುತ್ರವಾಗಿ ನಡೆದುಕೊಂಡು ಹೋಗುವಂತೆ ಪುರೋಹಿತರನ್ನು ನೇಮಿಸಲಾಗಿದೆ. ಪ್ರಸ್ತುತ ದೇವಾಲಯವು ಸುಸ್ಥಿತಿಯಲ್ಲಿದೆ.

**ಆನೆಗೊಂದಿ ರಂಗನಾಥಸ್ವಾಮಿ ದೇವಾಲಯ :**

ವಿಜಯನಗರ ಸಾಮ್ರಾಜ್ಯದ ಮೊದಲ ರಾಜಧಾನಿಯಾದ ಕೊಪ್ಪಳ ಜಿಲ್ಲೆ ಗಂಗಾವತಿ ತಾಲೂಕಿನ ಆನೆಗೊಂದಿಯಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಈ ರಂಗನಾಥ ದೇವಾಲಯವು ಗ್ರಾಮದ ಮಧ್ಯದಲ್ಲಿದ್ದು, ಪೂರ್ವಾಭಿಮುಖವಾಗಿದೆ. ಇದು ಗ್ರಾಮದೊಳಗಿರುವ ದೊಡ್ಡ ದೇವಾಲಯವಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮಹಾಮಂಟಪಗಳಿಂದ ಕೂಡಿದೆ. ಗರ್ಭಗೃಹವು ಚೌಕಾಕಾರವಾಗಿದ್ದು, ಅದರಲ್ಲಿ ಕಪ್ಪುಶಿಲೆಯ ರಂಗನಾಥನ ಶಯನ ಮೂರ್ತಿಶಿಲ್ಪವಿದೆ. ರಂಗನಾಥನು ಸರ್ಪದ ಹಾಸಿಗೆಯ ಮೇಲೆ ಮಲಗಿದ್ದು, ಸರ್ಪವು ಆತನ ತಲೆಯ ಮೇಲೆ ಹೆಡೆಬಿಚ್ಚಿ ಹರಡಿಕೊಂಡಿದೆ. ಅಂತರಾಳವು ಚೌಕಾಕಾರವಾಗಿದ್ದು ಸರಳ ರಚನೆಯನ್ನು ಹೊಂದಿದೆ. ಈ ಸ್ಥಳದಲ್ಲಿ ಉತ್ಸವ ಮೂರ್ತಿ ಮತ್ತು ಅನೇಕ ಆಳ್ವಾರರ ಶಿಲ್ಪಗಳಿವೆ. ಅಂತರಾಳ ದ್ವಾರಬಂಧವು ಸರಳವಾದ ರಚನೆಯನ್ನು ಹೊಂದಿದೆ. ದ್ವಾರದ ಬಲ ಮತ್ತು ಎಡಬದಿಗೆ ಆಂಜನೇಯ ಮತ್ತು ಗುರುಡ ಶಿಲ್ಪಗಳಿವೆ.

ಸಭಾಮಂಟಪಕ್ಕೆ ಉತ್ತರದಲ್ಲಿ ಮತ್ತೊಂದು ಪ್ರದೇಶ ದ್ವಾರವನ್ನು ಹೊಂದಿರುವುದು ಕಂಡುಬರುತ್ತದೆ. ಮಧ್ಯದಲ್ಲಿ ನಾಲ್ಕು ಮೂಲೆ ಕಂಬಗಳು ಹಾಗೂ ಎಂಟು ಅರ್ಧ ಕಂಬಗಳ ರಚನೆಯು ಕಂಡುಬರುತ್ತದೆ. ಸಭಾಮಂಟಪವು ಚೌಕಾಕಾರದ ರಚನೆಯನ್ನು ಹೊಂದಿದೆ. ಕಂಬಗಳು ಸರಳವಾಗಿದ್ದು, ಯಾವುದೇ ಉಬ್ಬುಶಿಲ್ಪದ ಅಲಂಕರಣೆಯನ್ನು ಹೊಂದಿರುವುದಿಲ್ಲ. ಈ ಕಂಬಗಳು ಕೆಳಗೆ ಚೌಕ, ಮಧ್ಯ ಹದಿನಾರು-ಎಂಟು-ಹದಿನಾರು ಭಾಗದ ಪಟ್ಟಿಕೆ, ವೃತ್ತಾಕಾರದ ಕುಂಭ, ಚೌಕಾಕಾರದ ಫಲಕ ಮತ್ತು ಬೋದಿಗೆಗಳಿಂದ ಕೂಡಿವೆ. ಇದೇ ಲಕ್ಷಣಗಳನ್ನು ಹೋಲುವ ಹನ್ನೆರಡು ಕಂಬಗಳು ಮಹಾಮಂಟಪದಲ್ಲಿವೆ. ಇದು ತೆರೆದ ಮಹಾಮಂಟಪವಾಗಿದೆ. ಇದಕ್ಕೆ ಗಜ ಶಾರ್ದೂಲದ ಸೋಪಾನ ರಚನೆಯನ್ನು ಕಾಣಬಹುದು. ದೇವಾಲಯವು ಯಾವುದೇ

ರೀತಿಯ ಶಿಖರವನ್ನು ಹೊಂದಿರುವುದಿಲ್ಲ. ಮತ್ತು ಅಧಿಷ್ಠಾನವು ಸರಳವಾದ ರಚನೆಯನ್ನು ಹೊಂದಿದೆ. ಹೊರಭಾಗದ ಭಿತ್ತಿಗಳು ಕೂಡ ಸರಳವಾದ ರಚನೆ ಹೊಂದಿದ್ದು ಯಾವುದೇ ವಿಶೇಷತೆಯೂ ಕಂಡು ಬರುವುದಿಲ್ಲ. ಇದು ವಿಜಯನಗರ ಕಾಲಾವಧಿಯಲ್ಲಿ ರಚನೆಯಾದ ದೇವಾಲಯವಾಗಿದೆ.

ದೇವಾಲಯದ ಸುತ್ತಲೂ ಇರುವ ವಿಶಾಲ ಪ್ರಕಾರದಲ್ಲಿ ವಿಶಿಷ್ಟ ಕಂಬಗಳಿಂದ ಕೂಡಿದ ಸಾಲುಮಂಟಪಗಳಿವೆ. ಕಂಬಗಳ ಕೆಳಗೆ ಸಿಂಹವಿದ್ದು ಮೇಲ್ಭಾಗದಲ್ಲಿ ಉಪಕಂಬಗಳಿವೆ. ಎಡಭಾಗದ ಮಂಟಪವನ್ನು ದೇವಾಲಯವಾಗಿ ಪರಿವರ್ತಿಸಿ ಅದರಲ್ಲಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಪ್ರಾಕಾರಕ್ಕೆ ಪೂರ್ವ ಹಾಗೂ ದಕ್ಷಿಣಕ್ಕೆ ಮಹಾದ್ವಾರಗಳಿದ್ದು, ಇವು ಹಂಪಿಯ ದೇವಾಲಯಗಳಲ್ಲಿರುವ ಪ್ರವೇಶ ಗೋಪುರಗಳನ್ನು ಹೋಲುತ್ತವೆ. ದೇವಾಲಯದ ಆವರಣದಲ್ಲಿ ಪ್ರಾರಂಭದಲ್ಲಿ ಕಲ್ಯಾಣ ಮಂಟಪ, ರಂಗಮಂಟಪ ಎಂಬ ಎರಡು ಮಂಟಪಗಳನ್ನು ನಿರ್ಮಿಸಲಾಗಿದೆ. ಇವುಗಳ ಬದಿಯಲ್ಲಿ ಸಾಲುಮಂಟಗಳಿವೆ. ಕಲ್ಯಾಣ ಮಂಟಪ ಮತ್ತು ರಂಗಮಂಟಪ ಕಂಬಗಳು ವಿವಿಧ ರೀತಿಯ ಶಿಲ್ಪಗಳ ಅಲಂಕಾರವನ್ನು ಹೊಂದಿವೆ. ಮತ್ತು ಸುಂದರವಾದ ರಚನೆಯನ್ನು ಹೊಂದಿವೆ. ದೇವಾಲಯದ ಮುಖ್ಯ ಪ್ರವೇಶ ದ್ವಾರಕ್ಕೆ ಶಂಖ, ಚಕ್ರ, ಗದೆ ಹಿಡಿದು ನಿಂತ ವೈಷ್ಣವ ದ್ವಾರಪಾಲಕರ ವಿಗ್ರಹಗಳಿವೆ.

**ಹೊರಕೆರೆದೇವರಪುರದ ಲಕ್ಷ್ಮೀರಂಗನಾಥಸ್ವಾಮಿ ದೇವಾಲಯ :**

ಚಿತ್ರದುರ್ಗ ಜಿಲ್ಲೆ ಹೊಳಲಕೆರೆ ತಾಲೂಕಿನ ಹೊರಕೆರೆದೇವರಪುರದಲ್ಲಿ ಶ್ರೀ ಲಕ್ಷ್ಮೀರಂಗನಾಥ ದೇವಾಲಯವಿದೆ. ಈ ದೇವಾಲಯವು ಚಿತ್ರದುರ್ಗ ಜಿಲ್ಲೆಯ ರಂಗನಾಥ ದೇವಾಲಯಗಳಲ್ಲಿಯೇ ದೊಡ್ಡದಾದ ದೇವಾಲಯವಾಗಿದೆ. ಹೊರಕೆರೆದೇವರಪುರ ಚಿತ್ರದುರ್ಗ ಹೊಳಲಕೆರೆ ಹೆದ್ದಾರಿಯಲ್ಲಿ ಚಿತ್ರಹಳ್ಳಿ ಕ್ರಾಸ್‌ನಿಂದ ಏಳು ಕಿ.ಮೀ. ದೂರದಲ್ಲಿದೆ. ವಿಶಾಲವಾದ ತಲವಿನ್ಯಾಸವನ್ನು ಹೊಂದಿದ್ದು, ಕಣಶಿಲೆ, ಇಟ್ಟಿಗೆ, ಗಾರೆಯಿಂದ ನಿರ್ಮಿತವಾದ ದೇವಾಲಯವಾಗಿದೆ. ಇದು ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ನಿರ್ಮಿತವಾಗಿದ್ದರು, ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಬೃಹತ್ ದೇವಾಲಯದ ಸ್ವರೂಪವನ್ನು ಹೋಲುತ್ತದೆ. ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ, ಅರ್ಧಮಂಟಪ, ಮಹಾರಂಗಮಂಟಪ, ಮುಖಮಂಟಪ, ಪ್ರವೇಶಮಂಟಪ ಹೊಂದಿದೆ. ಅಲ್ಲದೆ ಸುತ್ತಲೂ ಪ್ರಾಕಾರ, ಪ್ರಾಕಾರ ಮಂಟಪಗಳು, ಪರಿವಾರ ದೇವತೆಗಳ ಮಂಟಪಗಳು, ಮಹಾದ್ವಾರ ಮಂಟಪ, ಮಹಾದ್ವಾರ ಗೋಪುರ ಹೊಂದಿರುವ ಬೃಹತ್ ದೇವಾಲಯವಾಗಿದೆ. ಪ್ರಾಕಾರದಲ್ಲಿ ದೇವಾಲಯದ ಎದುರಿಗೆ ಮಂಟಪ, ಧ್ವಜಸ್ತಂಭ, ಬಲಿಪೀಠ ನಿರ್ಮಿಸಲಾಗಿದೆ. ದೇವಾಲಯ ಹೊರಭಾಗದಲ್ಲಿ ಉಯ್ಯಾಲೆ ಸ್ತಂಭವಿದೆ. ಈ ದೇವಾಲಯವು

ಹಂತ ಹಂತವಾಗಿ ರಚನೆಗೊಂಡಿರುವುದು ಕಂಡುಬರುತ್ತದೆ. ಮೂಲ ದೇವಾಲಯದ ನಿರ್ಮಾಣದ ಬಗ್ಗೆ ಸ್ಪಷ್ಟ ಮಾಹಿತಿ ದೊರೆಯದಿದದ್ದರು, ಗರ್ಭಗೃಹದ ದ್ವಾರದ ಎಡಗಡೆ ಕ್ರಿ.ಶ. ೧೪೬೪ ರ ಶಾಸನವು ಕಂಡುಬರುತ್ತದೆ. ಈ ಶಾಸನವು ಹೊರಕೆರೆಯ ತಿರುವೆಂಗಳನಾಥನಿಗೆ ದುಮ್ಮಿಯ ವೀರಪ್ಪನಾಯಕ ಇಲ್ಲಿನ ರಂಗಮಂಟಪವನ್ನು ಕಟ್ಟಿಸಿದ ಎಂದು ಉಲ್ಲೇಖಿಸುತ್ತದೆ. ಬಹುಶ: ಇದು ಮೂಲದಿಂದಲೂ ಚಿತ್ರದುರ್ಗದ ಪಾಳೆಯಗಾರರ ಕಾಲಾವಧಿಯಲ್ಲಿಯೇ ನಿರ್ಮಾಣಗೊಂಡಿರುವ ಸಾಧ್ಯತೆಗಳಿವೆ.

ದೇವಾಲಯದ ಗರ್ಭಗೃಹವು ಚೌಕಾಕಾರವಾಗಿದ್ದು ಸರಳವಾಗಿದೆ. ಭುವನೇಶ್ವರಿಯು ಸಮತಟ್ಟಾಗಿದ್ದು, ಯಾವುದೇ ಅಲಂಕರಣೆಯನ್ನು ಹೊಂದಿರುವುದಿಲ್ಲ. ದ್ವಾರಬಂಧವು ಸರಳವಾಗಿದ್ದು ಚೌಕಪಟ್ಟಿಕೆಗಳಿಂದ ಕೂಡಿದೆ. ಇಕ್ಕೆಲಗಳಲ್ಲಿ ಪೂರ್ಣಕುಂಭಗಳ ಅಲಂಕರಣೆಯನ್ನು ಹೊಂದಿದೆ. ದ್ವಾರಬಂಧದ ಲಲಾಟದಲ್ಲಿ ಅರಳು ಪುಷ್ಪಾಕೃತಿಯ ರಚನೆಯಿದೆ. ಅಂತರಾಳವು ಚೌಕಾಕಾರವಾಗಿದ್ದು, ಎರಡು ಮೂಲೆಗಂಬಗಳಿಂದ ಕೂಡಿದೆ. ದ್ವಾರಬಂಧಕ್ಕೆ ತಾಮ್ರದ ಕವಚ ಹೊದಿಸಿರುವುದರಿಂದ ಮೂಲ ರಚನೆಗಳು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಆದರೆ ದ್ವಾರದ ಇಕ್ಕೆಲದಲ್ಲಿ ಎರಡು ವೈಷ್ಣವ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಲಲಾಟದಲ್ಲಿ ಹಿತ್ತಾಳೆಯ ಕವಚದಲ್ಲಿ ಶಯನ ರಂಗನಾಥನ ಚಿತ್ರವನ್ನು ತೋರಿಸಲಾಗಿದೆ. ಅಂತರಾಳದಲ್ಲಿ ಉತ್ಸವಮೂರ್ತಿಯನ್ನು ಇತರ ಆಳ್ವಾರರ ಶಿಲ್ಪಗಳನ್ನು ಇಡಲಾಗಿದೆ.

ನವರಂಗವು ವಿಶಾಲವಾಗಿದ್ದು ಒಟ್ಟು ೧೪ ಕಂಬಗಳಿಂದ ನಿರ್ಮಿಸಲಾಗಿದೆ. ಇದರಲ್ಲಿ ಆರು ಅರ್ಧಕಂಬಗಳಿವೆ. ನಾಲ್ಕು ಮೂಲೆಗಂಬಗಳಿದ್ದು, ಮಧ್ಯದಲ್ಲಿ ನಾಲ್ಕು ಸ್ವತಂತ್ರ ಕಂಬಗಳ ರಚನೆಯನ್ನು ಹೊಂದಿದೆ. ಈ ಮಧ್ಯದ ಕಂಬಗಳು ಅಲಂಕರಣೆಯಿಂದ ಕೂಡಿವೆ. ಇವುಗಳಲ್ಲಿ ಪೀಠ, ಕಾಂಡ ಹಾಗೂ ಕಳಸಗಳನ್ನು ಹೊಂದಿವೆ. ಕಾಂಡಭಾಗದಲ್ಲಿ ಕೆಳಗೆ ಮತ್ತು ಮೇಲೆ ಎರಡು ಅಸಮವಾದ ಚೌಕ ಭಾಗಗಳಿವೆ.

ಕೆಳಚೌಕ ಭಾಗದ ಮೂಲೆಯನ್ನು ಎಲೆಯಾಕಾರದ ಕೆತ್ತನೆಯ ಅಲಂಕರಣೆಯಿಂದ ರಚಿಸಲಾಗಿದೆ. ಮೇಲಿನ ಚೌಕಭಾಗದಲ್ಲಿ ಮಾತ್ರ ಪುಷ್ಪಾಕೃತಿಯ ಚಿತ್ರವನ್ನು ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಬೋದಿಗೆಗಳ ಸರಳವಾಗಿವೆ. ನವರಂಗದ ಮಧ್ಯದ ಅಂಕಣದ ಛತ್ತಿನಲ್ಲಿ ಭುವನೇಶ್ವರಿಯ ರಚನೆ ಇದ್ದು, ಭುವನೇಶ್ವರಿ ಅರಳು ಕಮಲದ ಚಿತ್ರವಿದೆ. ಈ ನರಂಗ ಮಂಟಪಕ್ಕೆ ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಮೂಲ ಪ್ರವೇಶ ದ್ವಾರಗಳಿದ್ದು, ಉತ್ತರ ದ್ವಾರಬಾಗಿಲು ಮುಂದೆ ಉಗ್ರಾಣವನ್ನು ಕಟ್ಟಲಾಗಿದೆ. ದಕ್ಷಿಣ ಪ್ರವೇಶ ದ್ವಾರದ ಮುಂದೆ ಚಿಕ್ಕ ಪ್ರವೇಶಮಂಟಪವನ್ನು ನಿರ್ಮಿಸಲಾಗಿದೆ. ಸಭಾಮಂಟಪದ ದ್ವಾರಬಂಧವು ಹಲವು ಶಾಖೆಗಳಿಂದ ಕೂಡಿದ್ದು, ಹಿತ್ತಾಳೆಯ ಕವಚವನ್ನು

ಹೊದಿಸಲಾಗಿದೆ. ಹೀಗಾಗಿ ದ್ವಾರಬಂಧದ ಹಲವು ಶಾಖೆಗಳು ಸಷ್ಟವಾಗಿ ಕಂಡುಬರುವುದಿಲ್ಲ. ದ್ವಾರಬಂಧದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರುಗಳ ಉಬ್ಬು ಶಿಲ್ಪಗಳು, ಲಲಾಟದಲ್ಲಿ ಗಜಲಕ್ಷ್ಮೀಯ ಉಬ್ಬು ಶಿಲ್ಪ ಕಂಡುಬರುತ್ತದೆ. ಈ ಮಂಟಪದ ದ್ವಾರದ ಎಡ ಕಂಬದ ಮೇಲೆ ಹನ್ನೆರಡು ಸಾಲುಗಳ ಶಾಸನವಿದೆ.

ಸಭಾಮಂಟಪ ಮತ್ತು ಮಹಾರಂಗ ಮಂಟಪಗಳ ಮಧ್ಯದಲ್ಲಿ ಒಂದು ಅರ್ಧಮಂಟಪದ ರಚನೆ ಇದೆ. ಅದು ಮೂರು ಅಂಕಣಗಳಲ್ಲದೆ ಮಧ್ಯದ ಅಂಕಣ ಪ್ರವೇಶ ದ್ವಾರವಾಗಿದ್ದು ಇಕ್ಕೆಲಗಳ ಅಂಕಣಗಳಲ್ಲಿ ಎರಡು ಜಗಲಿ ಕಟ್ಟೆಗಳಿವೆ. ಎರಡು ಅರ್ಧಗಂಬಗಳು, ಮಧ್ಯ ಎರಡು ಕಂಬಗಳಿವೆ. ಇವು ರಚನೆಯಲ್ಲಿ ನವರಂಗ ಮಂಟಪದ ಕಂಬಗಳಂತಿವೆ. ಈ ಅರ್ಧಮಂಟಪದ ಛತ್ತು ಸಮತಟ್ಟಾಗಿದ್ದು, ಎರಡು ಮೂಲೆಕಂಬಗಳನ್ನು ಮತ್ತು ಎರಡು ಅರ್ಧಗಂಬಗಳನ್ನು ಹೊಂದಿದೆ. ಕಂಬಗಳ ಮೇಲೆ ಇಳಿಜಾರಾದ ಮುಂಜೂರು ಇದೆ.

ಮಹಾರಂಗಮಂಟಪವು ಅತ್ಯಂತ ವಿಶಾಲವಾಗಿದೆ. ಇದರ ಮುಖಭಾಗವನ್ನು ಹೊರತುಪಡಿಸಿ ಸುತ್ತಲೂ ಎರಡು ಕಡೆ ಗೋಡೆಯಿಂದ ಮುಚ್ಚಲಾಗಿದೆ. ಈ ಗೋಡೆಭಾಗವನ್ನು ನಯಗೊಳಿಸಿದ ಬೃಹತ್ತಾದ ಕಲ್ಲುಗಳಿಂದ ಕಟ್ಟಲಾಗಿದೆ. ಪ್ರವೇಶದ್ವಾರವನ್ನು ಹೊರತು ಪಡಿಸಿ ಸುತ್ತಲೂ ಕಕ್ಷಾಸನವಿದೆ. ಈ ಮಂಟಪವು ಒಟ್ಟು ಇಪ್ಪತ್ತೈದು ಕಂಬಗಳಿಂದ ನಿರ್ಮಾಣಗೊಂಡಿದೆ. ಇಲ್ಲಿ ಪ್ರತಿ ಸಾಲಿನಲ್ಲಿ ಐದು ಅಂಕಣಗಳಂತೆ ಐದು ಸಾಲುಗಳು ಕಂಡುಬರುತ್ತವೆ. ಮಧ್ಯದ ಅಂಕಣಗಳು ನಾಲ್ಕು ಮೂಲೆಯ ಅಂಕಣಗಳಿಂದ ಅಳತೆಯಲ್ಲಿ ದೊಡ್ಡದಾಗಿವೆ. ಇಲ್ಲಿ ಇಪ್ಪತ್ತು ಸ್ವತಂತ್ರ ಕಂಬಗಳಿದ್ದು, ಅವುಗಳಲ್ಲಿ ಮಧ್ಯದ ಹತ್ತು ಕಂಬಗಳು ಮಾತ್ರ ಆಕರ್ಷಕವಾದ ಚಿಕ್ಕ ಉಬ್ಬು ಶಿಲ್ಪಗಳಿಂದ ಕೂಡಿವೆ. ಈ ಕಂಬಗಳು ಅಳತೆ ಮತ್ತು ಗಾತ್ರದಲ್ಲಿ ಬೃಹತ್ ಪ್ರಮಾಣದಲ್ಲಿದ್ದು ರಚನೆಯಲ್ಲಿ ವಿಜಯನಗರ ಶೈಲಿಯನ್ನು ಹೋಲುತ್ತವೆ. ಈ ಕಂಬಗಳು ಪೀಠಸಹಿತ ಏಕಶಿಲೆ ಕಂಬಗಳಾಗಿದ್ದು, ಕೆಳಗೆ ಮಧ್ಯ ಮತ್ತು ಮೇಲೆ ಮೂರು ಅಸಮವಾದ ಚೌಕಭಾಗಗಳನ್ನು ಹೊಂದಿವೆ. ಅವುಗಳ ಮಧ್ಯ ಎಂಟು ಮತ್ತು ಹದಿನಾರು ಮುಖಗಳ ಲಂಬಪಟ್ಟಿಕೆಗಳ ರಚನೆಯಿದೆ. ಈ ಮೂರು ಚೌಕಭಾಗಗಳಲ್ಲಿ ಆಂಜನೇಯ, ಗರುಡ, ರಾಮಾನುಜಾಚಾರ್ಯ, ಕೃಷ್ಣ, ಲಕ್ಷ್ಮೀನರಸಿಂಹ, ವೈಷ್ಣವಯತಿ, ನಗ್ನಬೇಡತಿ, ಹಾವಾಡಿಗ, ಭಕ್ತ, ಬಾಳೆಹಣ್ಣು ತಿನ್ನುತ್ತಿರುವ ಮಂಗ, ಜಾಗಟೆ ಬಾರಿಸುವವ, ಸರ್ಪಹಿಡಿದು ಕುಳಿತಿರುವ ಯತಿ, ಕಾಳಿಂಗಮರ್ಧನ ಕೃಷ್ಣ, ಸೂರ್ಯ, ವಿಷ್ಣು, ಛಮರಧಾರಣಿ, ನೃತ್ಯಗಾರ, ಆರತಿ ಹಿಡಿದಿರುವ ಭಕ್ತೆ, ಕುದುರೆ, ಭೈರವ, ಮಲ್ಲಯುದ್ಧ, ಮೃದಂಗವಾದಕ ಗಣೇಶ, ಶ್ರೀದೇವಿ ಭೂದೇವಿ ಸಮೇತ ಶಯನ ರಂಗನಾಥಸ್ವಾಮಿ, ಹಂಸ, ನಂದಿ, ಸಂತ, ಗೊಲ್ಲ ಮುಂತಾದ ವಿವಿಧ ರೀತಿಯ ಚಿಕ್ಕ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಸಂಪೂರ್ಣವಾಗಿ ಛತ್ತು ಸರಳವಾಗಿದ್ದು ಯಾವುದೇ ಅಲಂಕರಣೆಯನ್ನು ಹೊಂದಿರುವುದಿಲ್ಲ.

ಮುಖಮಂಟಪವು ಭವ್ಯವಾಗಿದ್ದು, ಸಂಪೂರ್ಣ ತೆರೆದುಕೊಂಡಿದೆ. ಈ ಮಂಟಪದಲ್ಲಿ ಒಟ್ಟು ಹನ್ನೆರೆಡು ಕಂಬಗಳಿವೆ. ಇವು ಪ್ರತಿಸಾಲಿನಲ್ಲಿ ಮೂರರಂತೆ ಎರಡು ಸಾಲಿನಲ್ಲಿ ಒಟ್ಟು ಆರು ಅಂಕಣಗಳ ರಚನೆಯನ್ನು ಹೊಂದಿದೆ. ಮೊದಲ ಸಾಲಿನ ನಾಲ್ಕು ಕಂಬಗಳು ಮತ್ತು ಎರಡನೆಯ ಸಾಲಿನ ಮೂರು ಕಂಬಗಳು ಬೃಹತ್ ಗಾತ್ರವನ್ನು ಹೊಂದಿವೆ. ಈ ಕಂಬಗಳು ಕೆಳಗೆ, ಮಧ್ಯ ಮತ್ತು ಮೇಲೆ ಮೂರು ಅಸಮವಾದ ಚೌಕಭಾಗಗಳನ್ನು ಹೊಂದಿದೆ. ಇವು ಪೀಠದಿಂದ ಏಕಶಿಲಾಸ್ತಂಭಗಳಾಗಿವೆ. ಕೆಳಗಿನ ಮತ್ತು ಮೇಲಿನ ಚೌಕಭಾಗಗಳ ಮಧ್ಯದಲ್ಲಿ ಹದಿನಾರು ಮುಖಗಳ ದೀರ್ಘಲಂಬ ಪಟ್ಟಿಕೆಗಳಿವೆ. ಅದರ ಮಧ್ಯದಲ್ಲಿ ಎಂಟು ಮುಖಗಳ ಲಂಬಪಟ್ಟಿಕೆಗಳಿವೆ. ಕೆಳಚೌಕದ ನಾಲ್ಕು ಮೂಲೆಗಳಲ್ಲಿ ಎಲೆಯಾಕಾರದ ರಚನೆ ಹಾಗೂ ಮಧ್ಯದಲ್ಲಿ ಕೆಲವು ಚಿಕ್ಕ ಉಬ್ಬು ಶಿಲ್ಪಗಳ ಮತ್ತು ವಿವಿಧ ಪುಷ್ಪರೇಖಾಕೃತಿಯ ಚಿತ್ರಗಳನ್ನು ಕೆತ್ತಲಾಗಿದೆ. ಮೊದಲ ಸಾಲಿನ ಕಂಬಗಳಲ್ಲಿ ಆಂಜನೇಯ, ಗರುಡ ಮತ್ತು ದ್ವಾರಪಾಲಕರ ಶಿಲ್ಪಗಳಿವೆ. ಎರಡನೆಯ ಸಾಲಿನ ಕಂಬಗಳಲ್ಲಿ ರಾಜರಾಣಿಯರನ್ನು ಹೋಲುವ ಶಿಲ್ಪ, ಮಿಥುನ ಶಿಲ್ಪಗಳು, ಬಾಲಕೃಷ್ಣ, ಲಿಂಗಕ್ಕೆ ಮೂರು ಮುಖ ಒಂದೇ ದೇಹವಿರುವ ಹಸು ಹಾಲು ಸುರುಸುತ್ತಿರುವ ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಕಂಬಗಳ ಮೇಲ್ಭಾಗದಲ್ಲಿ ಪುಷ್ಪ ಬೋದುಗೆಗಳ ರಚನೆಯಿದೆ. ಮುಂದಿನ ಸಾಲಿನ ಮಧ್ಯದ ಛತ್ತಿನಲ್ಲಿ ಮೊಗಚಿಹಾಕಿದ ಅರಳು ಕಮಲದ ಭುವನೇಶ್ವರಿಯಿದ್ದು, ಸುಂದರವಾದ ಅಲಂಕರಣೆಯನ್ನು ಹೊಂದಿದೆ. ಮುಖಮಂಟಪದ ಎಡಭಾಗದ ಎರಡನೆ ಸಾಲಿನ ಅಂಕಣಕ್ಕೆ ಹೊಂದಿಕೊಂಡಂತೆ ಆಂಜನೇಯನ ಚಿಕ್ಕ ಗುಡಿಯಿದೆ. ದ್ವಾರಬಂಧವು ಸರಳವಾಗಿದ್ದು ಇಕ್ಕೆಲಗಳಲ್ಲಿ ಎರಡು ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮೀಯ ಉಬ್ಬು ಶಿಲ್ಪವಿದೆ.

ಮುಖಮಂಟಪದ ಎದುರಿಗೆ ಪ್ರವೇಶ ಮಂಟಪವಿದೆ. ಎರಡು ಹಂತದಲ್ಲಿರುವ ಈ ಮಂಟಪ ಒಟ್ಟು ೧೨ ಕಂಬಗಳನ್ನು ಹೊಂದಿದೆ. ಇವು ಪ್ರತಿಸಾಲಿನಲ್ಲಿ ಮೂರರಂತೆ ಇದ್ದು, ಎರಡು ಸಾಲಿನಲ್ಲಿ ಒಟ್ಟು ಆರು ಅಂಕಣಗಳನ್ನು ಹೊಂದಿದೆ. ಇವು ಪ್ರತಿ ಸಾಲಿನಲ್ಲಿ ಮೂರರಂತೆ ಇದ್ದು, ಎರಡು ಸಾಲಿನಲ್ಲಿ ಒಟ್ಟು ಆರು ಅಂಕಣಗಳನ್ನು ಹೊಂದಿದೆ. ಮಧ್ಯದ ಪ್ರವೇಶ ಹಾದಿಯನ್ನು ಹೊರತುಪಡಿಸಿ ಎರಡು ಬದಿಗೆ ಕಟ್ಟೆಗಳಿವೆ. ಈ ಪ್ರವೇಶ ಮಂಟಪದ ಮೇಲೆ ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಿದ ದೇವಕೋಷ್ಟಗಳಿವೆ. ಆದರೆ ದೇವಕೋಷ್ಠದಲ್ಲಿ ಯಾವ ದೇವತೆ ಶಿಲ್ಪಗಳು ಕಂಡುಬರುವುದಿಲ್ಲ. ಇಲ್ಲಿಯ ಕಂಬ ಮತ್ತು ಭಿತ್ತಿ ಭಾಗವು ಸರಳವಾದ ರಚನೆಯನ್ನು ಹೊಂದಿದೆ.

ಪ್ರವೇಶಮಂಟಪದ ನಂತರ ಗರುಡನ ಸಣ್ಣ ಗುಡಿಯಿದೆ. ಇದನ್ನು ಎರಡು ಅಂತಸ್ತಿನಲ್ಲಿ ನಿರ್ಮಿಸಲಾಗಿದೆ. ಕೆಳ ಅಂತಸ್ತು ತೆರೆದ ಮಂಟಪವಾಗಿದ್ದು ನಾಲ್ಕು ಮೂಲೆಗೆ ನಾಲ್ಕು ಪುಟ್ಟ ಕಂಬಗಳಿವೆ. ಈ ಕಂಬಗಳ ಮೇಲೆ ಪುಷ್ಪ ಬೋದುಗೆಗಳಿವೆ. ಮೇಲಿನ ಅಂತಸ್ತಿನಲ್ಲಿ ಸುತ್ತಲೂ

ಗೋಡೆಯಿಂದ ಕಟ್ಟಲ್ಪಟ್ಟ ಚಿಕ್ಕಗುಡಿಯಿದೆ. ಈ ಮಂಟಪವು ನಾಲ್ಕು ಮೂಲೆ ಕಂಬಗಳನ್ನು ಹೊಂದಿದ್ದು, ಮೇಲ್ಭಾಗದಲ್ಲಿ ಪುಷ್ಪಬೋದುಗೆಗಳಿಂದ ಕೂಡಿವೆ, ಮಂಟಪದ ಮೇಲೆ ಏಕತಲ ದ್ರಾವಿಡ ವಿಮಾನ ಮಾದರಿಯ ಚಿಕ್ಕ ಗೋಪುರದ ರಚನೆ ಇದೆ. ಅದರ ಮೇಲೆ ಸ್ತೂಪಿ, ಅದರ ಮೇಲೆ ಗುಮ್ಮಟಾಕಾರದ ಕಳಸವಿದೆ. ಶಿಖರದ ಮೇಲೆ ನಾಲ್ಕು ಮೂಲೆಗಳಲ್ಲಿ ಕೀರ್ತಿಮುಖಗಳ ರಚನೆಯಿದೆ. ಈ ಗುಡಿಯ ನಂತರ ಧ್ವಜಸ್ತಂಭವಿದೆ. ಇದನ್ನು ತಾಮ್ರದ ಕವಚದಿಂದ ಹೊದಿಸಲಾಗಿದೆ. ಅದರ ಮುಂದೆ ಬಲಿಪೀಠದ ರಚನೆಯಿದೆ. ಈ ಬಲಿಪೀಠವು ಮಂಚಬಂಧ ರೀತಿಯ ಅಧಿಷ್ಠಾನವನ್ನು ಹೊಂದಿದೆ. ಬಲಿಪೀಠದ ನಂತರ ಏಕಶಿಲೆಯ ಬೃಹತ್ ದೀಪಸ್ತಂಭವಿದೆ. ಈ ಸ್ತಂಭವು ಕೆಳಭಾಗದಲ್ಲಿ ನಾಲ್ಕು ಮುಖಗಳ ಚೌಕಭಾಗವನ್ನು ಹೊಂದಿದೆ. ನಂತರ ಹದಿನಾರು ಮುಖಗಳ ಚೌಕಭಾಗವನ್ನು ಹೊಂದಿವೆ. ನಂತರ ಹದಿನಾರು ಮುಖಗಳ ದೀರ್ಘ ಲಂಬ ಪಟ್ಟಿಕೆಗಳು, ಮಧ್ಯದಲ್ಲಿ ಎಂಟು ಮುಖಗಳ ಎರಡು ಅಡ್ಡ ಪಟ್ಟಿಕೆಗಳಿವೆ. ತುದಿಯಲ್ಲಿ ನಾಲ್ಕು ಮುಖಗಳ ಚೌಕಭಾಗವನ್ನು ಮೇಲ್ಭಾಗದಲ್ಲಿ ಕುಂಭ ಕಳಸವನ್ನು ಹೊಂದಿದೆ.

ಮಹಾದ್ವಾರ ಮಂಟಪವು ಒಂಬತ್ತು ಅಂಕಣಗಳನ್ನು ಹೊಂದಿದ್ದು, ಮಧ್ಯಮ ರೀತಿಯಲ್ಲಿದೆ. ಮಧ್ಯದ ಮೂರು ಅಂಕಣಗಳು ಪ್ರವೇಶದ್ವಾರಗಳಾಗಿದ್ದು, ಎರಡು ಬದಿಯ ಅಂಕಣಗಳು ಜಗಲಿ ಕಟ್ಟೆಯನ್ನು ಹೊಂದಿವೆ. ಈ ಕಟ್ಟೆಗಳು ಅಧಿಷ್ಠಾನ, ಉಪಾನಗಳ, ಜತಿಗಳನ್ನು ಹೊಂದಿವೆ. ಪ್ರವೇಶ ಮಹಾದ್ವಾರವು ಎತ್ತರವಾದ ಜಗಲಿ ಮತ್ತು ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿದ್ದು, ಆರು ಮೆಟ್ಟಿಲುಗಳನ್ನು ಏರಿ ಪ್ರವೇಶಮಂಟಪವನ್ನು ಪ್ರವೇಶಿಸಲಾಗುತ್ತದೆ. ದ್ವಾರಮಂಪಟ ಅಧಿಷ್ಠಾನ, ಉಪಾನ, ತ್ರಿಪಟ್ಟ ಕುಮುದ ಮತ್ತು ಜಗತಿಗಳನ್ನು ಹೊಂದಿದೆ. ಮಹಾದ್ವಾರದ ಪ್ರಧಾನ ಬಾಗಿಲು ಎರಡು ಚೌಕಟ್ಟುಗಳಿಂದ ಕೂಡಿದೆ. ಮೊದಲ ಚೌಕಟ್ಟಿನ ಮುಂಭಾಗದಲ್ಲಿ ಇಕ್ಕೆಲಗಳಲ್ಲಿ ಸಿಂಹಗಳ ಬಾಯಿಂದ ಹೊರಟ ಲತಾತೋರಣಗಳು ಕಂಡುಬರುತ್ತವೆ. ಇವು ಇಡಿ ಚೌಕಟ್ಟಿನ ತುಂಬ ವ್ಯಾಪಿಸಿವೆ. ಇದರ ಲಲಾಟಬಿಂಬದಲ್ಲಿ ಪುಷ್ಪಾಕೃತಿಯ ರಚನೆಯಿದೆ. ಈ ಚೌಕಟ್ಟಿನ ಒಳಮುಖ ಭಾಗದಲ್ಲಿ ಕೆಳಗೆ ಆಂಜನೇಯ ಮತ್ತು ಗರುಡನ ಶಿಲ್ಪಗಳಿವೆ. ಅದರ ಮೇಲೆ ಲತಾ ತೋರಣವಿದೆ. ಎರಡನೆ ಚೌಕಟ್ಟು ದ್ವಾರಬಂಧವಾಗಿದೆ. ಇದರ ಇಕ್ಕೆಲಗಳಲ್ಲಿ ಕುಂಭ ತೋರಣದ ಅಲಂಕರಣೆಯಿದೆ. ಅವುಗಳ ಮೇಲೆ ಸ್ತಂಭ ಶಾಖೆಗಳಿವೆ. ಲಲಾಟಬಿಂಬದಲ್ಲಿ ಲಕ್ಷ್ಮೀಯ ಶಿಲ್ಪವಿದೆ. ಮಹಾದ್ವಾರ ಮಂಟಪದ ಹೊರಭಿತ್ತಿಯಲ್ಲಿ ಒಳಕಂಬಗಳ ಮೇಲಿನ ಪುಷ್ಪಬೋದುಗೆಗಳು ಹೊರಗೆ ಗೋಚರಿಸುತ್ತವೆ. ಮಂಟಪದ ಒಳಭಾಗದಲ್ಲಿ ಇಕ್ಕೆಲಗಳ ಕಟ್ಟೆಗಳ ಮೇಲೆ ನಾಲ್ಕು ಕಂಬಗಳಿವೆ. ಇವು ಚೌಕ ಭಾಗವನ್ನು ಹೊಂದಿವೆ. ಇವುಗಳ ಮಧ್ಯ ಹದಿನಾರು ಮುಖಗಳ ಲಂಬಪಟ್ಟಿಕೆಗಳಿವೆ. ಈ ಕಂಬಗಳ ಚೌಕ ಪಟ್ಟಿಕೆಯಲ್ಲಿ ಕಾಳಿಂಗ ಮರ್ದನ ಕೃಷ್ಣ, ನರಸಿಂಹ, ಕುಳಿತಸಿಂಹ, ಆಂಜನೇಯ, ಕೃಷ್ಣನ ಗೋಪಿಕಾ ಸ್ತ್ರೀವಸ್ತ್ರಾಪಹರಣ, ವೃತ್ತಾಕಾರದಲ್ಲಿ ನಿಂತು ಪರಸ್ಪರ ಕೈಕಾಲುಗಳನ್ನು ಹಿಡಿದ

ಸ್ತ್ರೀಯರು, ಮಿಥುನ ಶಿಲ್ಪಗಳು, ಆನೆ, ಹಂಸ, ಬೇಡರಕಣ್ಣಪ್ಪ, ಐದು ತಲೆಗಳಿರುವ ಹಸು, ಗರುಡ, ವೀರಭದ್ರ, ವೃಷಭಾರೂಡ, ತಮಟೆವಾದಕರು, ವೃಷಭಾರೂಡ ಉಮಾಮಹೇಶ್ವರ, ನಂದಿ ಪುರುಷ ಮೃಗ, ಗಣೇಶ, ಭೈರವ, ಕೇಶವ, ಮೊಸರು ಕಡೆಯುತ್ತಿರುವ ಗೋಪಿಕಾಸ್ತ್ರೀಯರು ಮತ್ತು ಕೃಷ್ಣ, ವೀಣಾಧಾರಿ ಸ್ತ್ರೀ, ಶಂಖವಾದಕರು, ಯತಿ, ಖಡ್ಗದಾರಿ ಸ್ತ್ರೀ, ಶಹನಾಯವಾದಕರು, ರಾಮಾನುಜಾಚಾರ್ಯರು ಅರಸ ಮತ್ತು ಪತ್ನಿಯರು, ಲಕ್ಷ್ಮೀನಾರಾಯಣ, ಗೋಪಾಲಕೃಷ್ಣ, ನೃತ್ಯಗಾರ್ತಿ ಮೃದಂಗವಾದಕ, ಅಂಜಲಿಮುದ್ರೆಯಲ್ಲಿರುವ ಭಕ್ತಾಂಜನೇಯ, ಬಾಲಕೃಷ್ಣ, ಶೇಷಶಯನ, ಶ್ರೀದೇವಿ ಸಮೇತ ಶಯನ ರಂಗನಾಥನ ಮುಂತಾದ ಚಿಕ್ಕ ಉಬ್ಬು ಶಿಲ್ಪಗಳು ಕಂಡುಬರುತ್ತವೆ.

ಪ್ರವೇಶಮಹಾದ್ವಾರವು ಐದು ಅಂತಸ್ತುಗಳಲ್ಲಿದೆ. ಸ್ಥಳೀಯರು ಹಿಂದೂ, ಮುಸ್ಲಿಂ ಶೈಲಿಯಲ್ಲಿದೆ ಎಂದು ಅಭಿಪ್ರಾಯಿಸುತ್ತಾರೆ. ದ್ವಾರದ ಇಕ್ಕೆಲಗಳಲ್ಲಿ ಎರಡು ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ದೇವಾಲಯದ ಹೊರಭಾಗದಲ್ಲಿ ಗರ್ಭಗೃಹ ಮತ್ತು ಅಂತರಾಳಗಳ ಅಧಿಷ್ಠಾನ ಎತ್ತರವಾದ ಉಪಾನ, ದ್ವಿಪಟ್ಟ ಕುಮುದ ಮತ್ತು ಕಪೋತದಲ್ಲಿ ಸಾಲಾಗಿ ಚೈತ್ಯ ಆಕೃತಿಗಳ ಅಲಂಕರಣೆಯಿದೆ. ಅದರ ಮೇಲೆ ಏಕತಲದ ದ್ರಾವಿಡ ವಿಮಾನ ಮಾದರಿಯ ಶಿಖರವಿದೆ. ಮೇಲ್ಭಾಗದಲ್ಲಿ ವೃತ್ತಾಕಾರದ ಸ್ತೂಪಿಯ ರಚನೆ ಇದೆ. ಈ ಶಿಖರವನ್ನು ಇತ್ತೀಚಿಗೆ ಜೀರ್ಣೋದ್ಧಾರ ಮಾಡಲಾಗಿದೆ. ಮಹಾರಂಗಮಂಟಪದ ಭಿತ್ತಿಯು ಸರಳವಾಗಿದೆ. ಭಿತ್ತಿಯಲ್ಲಿ ಅರ್ಧಗಂಬಗಳು ಮತ್ತು ಬೋದುಗೆಗಳು ಗೋಚರಿಸುತ್ತವೆ. ಅಧಿಷ್ಠಾನವು ಮಂಚಬಂಧ ಶೈಲಿಯಲ್ಲಿದ್ದು, ಉಪಾನಗಳ ಮತ್ತು ಕಪೋತಗಳನ್ನು ಹೊಂದಿದ್ದು ಸರಳವಾಗಿದೆ. ದೇವಾಲಯದ ಸುತ್ತಲೂ ವಿಸ್ತಾರವಾದ ಮತ್ತು ಎತ್ತರವಾದ ಪ್ರಾಕಾರಗೋಡೆಯಿದೆ. ಈ ಪ್ರಾಕಾರದ ಒಳಗಡೆ ವಿಶಾಲವಾದ ತೆರೆದ ಪ್ರಾಂಗಣದ ರಚನೆ ಇದೆ. ಅದರಲ್ಲಿ ವಿಷ್ಣು, ಶಿವ, ನಂದಿ, ಲಕ್ಷ್ಮೀ, ಆದಿಶೇಷ, ನವಗ್ರಹಶಿಲ್ಪ, ಕಾಲಭೈರವ, ವಾಸುಕಿ ಮುಂತಾದ ಮೂರ್ತಿಶಿಲ್ಪಗಳ ಚಿಕ್ಕ ಗುಡಿಗಳು ಕಂಡುಬರುತ್ತವೆ. ದೇವಾಲಯದ ಹೊರಭಾಗದಲ್ಲಿ ಬೃಹತ್ ಸ್ತಂಭಗಳ ಉಯ್ಯಾಲೆ ಕಂಬವಿದೆ. ಇದು ಸುಮಾರು ೭ ಅಡಿ ಎತ್ತರವಾಗಿದೆ. ಈ ಸ್ತಂಭಗಳ ಮೇಲೆ ಎರಡು ಅಡ್ಡ ತೊಲೆಗಳಿದ್ದು, ಮಧ್ಯದಲ್ಲಿ ಉಯ್ಯಾಲೆಯ ಕಬ್ಬಿಣದ ಸರಪಳಿಯಿದೆ. ದೇವಾಲಯದ ಹೊರಗಡೆ ಬಲಭಾಗಕ್ಕೆ ಎರಡು ಚಿಕ್ಕ ಮಂಟಪಗಳನ್ನು ನಿರ್ಮಿಸಲಾಗಿದೆ.

**ಬೆಂಗಳೂರು ನಗರದ ರಂಗನಾಥಸ್ವಾಮಿ ದೇವಾಲಯ :**

ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ನಗರದಲ್ಲಿ ಅವೆನ್ಯೂ ರೋಡ ಹತ್ತಿರದಲ್ಲಿ ಪಶ್ಚಿಮಕ್ಕೆ ರಂಗನಾಥಸ್ವಾಮಿ ದೇವಾಲಯವಿದೆ. ಇದಕ್ಕೆ ಬೆಂಗಳೂರು ನಗರದ ಬಳ್ಳಾಪುರ ಪೇಟೆ, ಹಳೆಯ ದೊಡ್ಡ ಪೇಟೆಯ ಎಂತಲೂ ಕರೆಯುತ್ತಾರೆ. ಅಲ್ಲದೆ ಬಳ್ಳಾಪುರ ಪೇಟೆ ಹಳೆಯ ದೊಡ್ಡ ಪೇಟೆಯ ಒಂದು ಉಪಪೇಟೆಯೂ ಆಗಿತ್ತು. ದೇವಾಲಯದ ಸುತ್ತ ಮುತ್ತ ದೊಡ್ಡ ಕಟ್ಟಡಗಳು

ನಿರ್ಮಾಣವಾಗಿದ್ದು, ಬೇಗನೆ ದೇವಾಲಯವು ಗೋಚರಿಸುವುದಿಲ್ಲ. ಅನೇಕ ವರ್ತಕರು ಮತ್ತು ಪ್ರಮುಖರು ವಾಸಿಸುತ್ತ ದೊಡ್ಡಪೇಟೆಯಲ್ಲಿ ನಿರ್ಮಿಸಲಾಗಿದ್ದ ರಂಗನಾಥ ದೇವಾಲಯ ಕಲೆಯ ದೃಷ್ಟಿಯಿಂದ ಒಂದು ಉತ್ತಮ ಉದಾಹರಣೆ ಎನಿಸುವ ದೇವಾಲಯವಾಗಿದೆ. ಕ್ರಿ.ಶ. ೧೬೨೮ ರ ಕಾಲಾವಧಿಯ ವಿಜಯನಗರ ಅರಸರ ಹೆಸರನ್ನು ಉಲ್ಲೇಖಿಸುವ ಯಲಹಂಕ ನಾಡಪ್ರಭುಗಳ ಶಿಲಾಶಾಸನ ಇಲ್ಲಿನ ತೆರೆದ ಮುಖಮಂಟಪದ ಗೋಡೆಯಲ್ಲಿದೆ.[೨೧] ತೆಲಗು ಭಾಷೆಯ ಈ ಶಾಸನವು ದೇವಾಲಯಕ್ಕೆ ದಾನವನ್ನು ನೀಡಿದ ವಿಷಯ ತಿಳಿಸುತ್ತದೆ. ಅಲ್ಲದೆ ಈ ದೇವಾಲಯವು ಯಲಹಂಕನಾಡ ಪ್ರಭು ಕೆಂಪೇಗೌಡನ ಕಾಲದಲ್ಲಿ ಆತನಿಂದಲೇ ನಿರ್ಮಿಸಿದ ದೇವಾಲಯವಾಗಿದೆ. ಇವರು ಬೆಂಗಳೂರು, ಮಾಗಡಿ ಸುತ್ತಮುತ್ತ ಭಾಗಗಳಲ್ಲಿ ವಿಜಯನಗರದ ಸಾಮಂತ ದೊರೆಗಳಾಗಿ, ವಿಜಯನಗರದ ಪತನದ ನಂತರ ಸ್ವತಂತ್ರವಾಗಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ.

ದಕ್ಷಿಣಾಭಿಮುಖವಾಗಿರುವ ದೇವಾಲಯವು ಗರ್ಭಗೃಹ, ಅಂತರಾಳ, ಸುತ್ತಲೂ ಪ್ರದಕ್ಷಿಣಾಪಥ, ನವರಂಗ, ತೆರೆದ ಮುಖಮಂಟಪ, ಗರುಡಸ್ತಂಭ, ಬಲಿಪೀಠ ಹೊಂದಿದೆ. ಅಲ್ಲದೆ ಸುತ್ತಲೂ ವಿಸ್ತಾರವಾದ ಪ್ರಾಕಾರದಿಂದ ಕೂಡಿದ್ದು ಎರಡು ದ್ವಾರಗಳನ್ನು ಹೊಂದಿದೆ. ಮತ್ತು ಪ್ರಾಕಾರದ ಆವರಣದಲ್ಲಿ ನಾಗರಕಟ್ಟೆ ಇರುವುದು ಕಂಡುಬರುತ್ತದೆ. ದಕ್ಷಿಣಾಭಿಮುಖವಾಗಿರುವ ಗರ್ಭಗುಡಿ ಆಯತಾಕಾರದಲ್ಲಿದೆ. ಒಳಗೋಡೆಗೆ ಹೊಂದಿಕೊಂಡು ಉದ್ದನೆಯ ಪೀಠವಿದ್ದು ಇದರ ಮೇಲೆ ರಂಗನಾಥನ ಶಯನ ಮೂರ್ತಿಶಿಲ್ಪವಿದೆ. ಶಯನ ರಂಗನಾಥನು ಪೂರ್ವಾಭಿಮುಖಿಯಾಗಿ ಪವಡಿಸಿದ್ದಾನೆ. ಆತನ ಪಾದದ ಬಳಿ ಶ್ರೀದೇವಿ ಮತ್ತು ಭೂದೇವಿ ಮೂರ್ತಿಶಿಲ್ಪಗಳಿವೆ.

ಈ ದೇವಾಲಯದ ಒಳಗೋಡೆಯು ಹೊಸದಾಗಿ ನವೀಕರಿಸಲಾಗಿದ್ದು ಹಳೆ ಅಲಂಕಾರ ಅಥವಾ ಶಿಲ್ಪಗಳು ಸಾಕಷ್ಟು ಪ್ರಮಾಣದಲ್ಲಿ ಕಾಣೆಯಾಗಿರುವುದು ಕಂಡುಬರುತ್ತದೆ. ಗರ್ಭಗುಡಿಗೆ ಹೊಂದಿಕೊಂಡು ಇರುವ ಅಂತರಾಳದಲ್ಲಿ ವಿವಿಧ ಅಲಂಕಾರ ಪಟ್ಟಿಕೆಗಳು ದ್ವಾರಪಾಲಕರ ಶಿಲ್ಪಗಳಿವೆ. ಈ ದ್ವಾರಪಾಲಕರು ಉದ್ದನೆಯ ಕಿರೀಟ, ಅಗಲವಾದ ಕಿವಿಯೋಲೆ, ಭುಜಬಂಧ, ಕಡಗ, ಯಜ್ಞೋಪವೀತ, ಕೊರಳಲ್ಲಿ ವಿವಿಧ ಆಭರಣಗಳನ್ನು ಧರಿಸಿದ್ದು, ಕೈಯಲ್ಲಿ ವೈಷ್ಣವ ಸಂಕೇತದ ಶಂಖ ಮತ್ತು ಚಕ್ರಗಳನ್ನು ಹಿಡಿದು ಅಭಯ ಮುದ್ರೆಯಲ್ಲಿ ನಿಂತಿರುವರು.

ಅಂತರಾಳ ಮತ್ತು ಗರ್ಭಗೃಹಗಳನ್ನು ಸೇರಿಸಿಕೊಂಡು ಸುತ್ತಲೂ ಪ್ರದಕ್ಷಿಣಾ ಪತವನ್ನು ನಿರ್ಮಿಸಲಾಗಿದೆ. ಪ್ರದಕ್ಷಿಣಾ ಪಥಕ್ಕೆ ಪ್ರವೇಶಿಸಲು ಅಂತರಾಳದ ಇಕ್ಕೆಲಗಳಲ್ಲಿ ಕಿರಿದಾದ ದ್ವಾರಗಳಿವೆ. ಪ್ರದಕ್ಷಿಣಾ ಪಥವು ಇಕ್ಕಟಾಗಿದ್ದು ಅಂತರಾಳ ಮತ್ತು ಗರ್ಭಗುಡಿಯನ್ನು ಸುತ್ತುವರೆಯುತ್ತದೆ. ಪ್ರಸ್ತುತ ಇಕ್ಕಟ್ಟಾಗಿದ್ದರಿಂದ ಈಗ ಮುಚ್ಚಲಾಗಿದೆ. ಈ ಪ್ರದಕ್ಷಿಣಾಪಥದ ರಚನೆ ಶೈಲಿ ವಿಜಯನಗರದ ಹಂಪೆಯ ಪ್ರಮುಖ ದೇವಾಲಯಗಳಾದ ವಿರೂಪಾಕ್ಷ, ಕೃಷ್ಣ ದೇವಾಲಯಗಳಲ್ಲಿಯ ಪ್ರದಕ್ಷಿಣಾ ಪಥಗಳ ರಚನೆಯ ಮಾದರಿಯಾಗಿ ಕಾಣುತ್ತದೆ.

ಚೌಕಾಕಾರದ ನವರಂಗವಿದ್ದು ಈಗ ಸ್ವಲ್ಪ ಮಾರ್ಪಾಡು ಮಾಡಲಾಗಿದೆ. ಮಧ್ಯದ ನಾಲ್ಕು ಕಂಬಗಳು ಉಬ್ಬುಶಿಲ್ಪಗಳಿಂದ ಕೂಡಿವೆ. ಕಾಳಿಂಗಮರ್ಧನ, ಶೇಷಶಯನ ವಿಷ್ಣು, ನರಸಿಂಹ, ಆಂಜನೇಯ ಮುಂತಾದ ವೈಷ್ಣವ ಶಿಲ್ಪಗಳಿವೆ. ಅಲ್ಲದೆ ಅರಳಿದ ಕಮಲ, ಶಂಕ, ಚಕ್ರ, ಕುಳಿತಿರುವ ಸಿಂಹ, ಅಂಜಲಿ ಮುದ್ರೆಯಲ್ಲಿರುವ ಭಕ್ತರು ಮುಂತಾದ ಶಿಲ್ಪಗಳಿವೆ. ನವರಂಗದ ದ್ವಾರಬಂಧವು ಅಗಲವಾಗಿದ್ದು ಅದನ್ನು ವಿವಿಧ ಅಲಂಕಾರಿಕ ಪಟ್ಟಿಕೆಗಳಿಂದ ರಚಿಸಲಾಗಿದೆ. ದ್ವಾರಬಂಧದಲ್ಲಿ ಎತ್ತರವಾದ ದ್ವಾರಪಾಲಕರ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಚತುರ್ಭುಧಾರಿಯಾದ ಈ ದ್ವಾರಪಾಲಕರು ಶಂಖ, ಚಕ್ರ, ಗದೆಗಳನ್ನು ಹಿಡಿದು ಅಭಯ ಮುದ್ರೆಯಲ್ಲಿ ನಿಂತಿರುವರು. ಈ ಶಿಲ್ಪಗಳಲ್ಲಿಯ ಉದ್ದನೆಯ ಕರ್ಣ, ಕಿರೀಟಮುಕುಟ ಹಾಗೂ ಕಿವಿಯಲ್ಲಿಯ ಕುಂಡಲಿಗಳು ಹಾಗೂ ಇತರ ಆಭರಣಗಳೂ ವಿಜಯನಗರ ಶೈಲಿಯ ದ್ವಾರಪಾಲಕರ ಶಿಲ್ಪ ಶೈಲಿಯ ಅನುಕರಣೆಯೆಂದು ಗುರುತಿಸಬಹುದು. ಅಲ್ಲದೆ ನವರಂಗದ ದ್ವಾರದ ಇಕ್ಕೆಲಗಳಲ್ಲಿ ಎರಡೂವರೆ ಮೀಟರ್ ಎತ್ತರದ ಜಯ ಮತ್ತು ವಿಜಯರ ದೊಡ್ಡ ಗಾತ್ರದ ಶಿಲ್ಪಗಳಿವೆ. ಈ ಶಿಲ್ಪಗಳು ದ್ವಾರಪಾಲಕರಂತೆ ಕಾಣುತ್ತಿದ್ದು ಗಾತ್ರದಲ್ಲಿ ಎತ್ತರವಾಗಿದೆ. ಇವುಗಳಿಗೆ ಇತ್ತೀಚೆಗೆ ಕಪ್ಪುವರ್ಣವನ್ನು ಬಳಿಯಲಾಗಿದ್ದು ಶಿಲ್ಪಗಳ ಮೂಲ ಅಲಂಕಾರ ಆಭರಣ ಇತ್ಯಾದಿಗಳನ್ನು ಗುರುತಿಸುವುದು ಅಸಾಧ್ಯವಾಗಿದೆ.

ನವರಂಗಕ್ಕೆ ಹೊಂದಿಕೊಂಡಂತೆ ಆಯತಕಾರವಾಗಿ ತೆರೆದ ಮುಖಮಂಟಪವನ್ನು ನಿರ್ಮಿಸಲಾಗಿದೆ. ಇದು ಒಟ್ಟು ೧೮ ಕಂಬಗಳಿಂದ ನಿರ್ಮಿಸಿದ ಮುಖಮಂಟವಾಗಿದೆ. ಆದರೆ ಹಿಂಭಾಗದ ಸಾಲುಗಂಬಗಳಲ್ಲಿ ಕಂಬಗಳನ್ನು ಬಳಸಿಕೊಂಡು ಎರಡು ಕಿರುಗುಡಿಗಳನ್ನು ನಿರ್ಮಿಸಲಾಗಿದೆ. ಈ ಮುಖಮಂಟಪದ ಕಂಬಗಳು ಎರಡು ಪ್ರತ್ಯೇಕ ಶೈಲಿಯಲ್ಲಿವೆ. ಮುಂಭಾಗದ ಸಾಲಿನಲ್ಲಿ ಸವಾರರುಳ್ಳ ದೊಡ್ಡ ಗಾತ್ರದ ಅಶ್ವ ಶಿಲ್ಪಗಳ ಕಂಬಗಳಿವೆ. ಮತ್ತು ಮಂಟಪದ ಎರಡನೆಯ ಹಾಗೂ ಮೂರನೆಯ ಸಾಲಿನ ಕಂಬಗಳು ಸರಳವಾಗಿದ್ದು ಆಯತ ಮತ್ತು ವರ್ತುಲಾಕಾರದ ವಿನ್ಯಾಸದಲ್ಲಿವೆ.

ತೆರೆದ ಮುಖಮಂಟಪದ ಮೊದಲ ಸಾಲಿನ ಆರು ಕಂಬಗಳು ಸವಾರರುಳ್ಳ ಎತ್ತರದ ಕುದುರೆ ಶಿಲ್ಪಗಳ ಕಂಬಗಳಾಗಿವೆ. ಏಕಶಿಲೆಯಲ್ಲಿ ಮಾಡಲಾದ ಈ ಕಂಬಗಳನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಮುಂಭಾಗದ ಎತ್ತರದ ಕುದುರೆಶಿಲ್ಪಗಳು, ಅದರಂತೆ ಹಿಂಭಾಗದ ಚೌಕ–ಅಷ್ಟ–ಚೌಕ ವಿನ್ಯಾಸದ ಕಂಬಗಳು, ಕುದುರೆ ಶಿಲ್ಪಗಳಿರುವ ಕಂಬದ ಮುಂಭಾಗವು ಬಹು ಆಕರ್ಷಣೀಯವಾಗಿದ್ದು, ಇವು ಎತ್ತರದ ಕುದುರೆಗಳ ಶಿಲ್ಪಗಳಿಂದ ಕೂಡಿದೆ. ಕುದುರೆಗಳು ತಮ್ಮ ಹಿಂದಿನ ಎರಡು ಕಾಲುಗಳ ಮೇಲೆ ನಿಂತು ಮುಂದಿನ ಎರಡು ಕಾಲುಗಳನ್ನು ಎತ್ತಿ ನಿಂತಿವೆ.

ಮೇಲೆ ಕುಳಿತಿರುವ ಸವಾರರು ಉದ್ದನೆಯ ಈಟಿಯಿಂದ ಅಶ್ವದ ಕಾಲ ಬಳಿಯಿರುವ ಹುಲಿಯನ್ನು ತಿವಿಯುತ್ತಿದ್ದಾರೆ. ಅಶ್ವದ ಕಾಲ ಬಳಿಯ ಹುಲಿಯ ಮೇಲೆ ಇನ್ನೊಬ್ಬ ಸಿಪಾಯಿ ನೇರವಾಗಿ ತನ್ನ ಕಠಾರಿಯಿಂದ ಎರಗಿದ್ದಾನೆ. ಅಶ್ವಗಳ ಮೇಲೆ ಕುಳಿತಿರುವ ಸವಾರರ ಶಿಲ್ಪಗಳು ವಿಶೇಷವಾಗಿವೆ. ಇಲ್ಲಿಯ ಸವಾರರ ಶಿಲ್ಪಗಳಿಗೆ ಕಂಬದ ಎರಡು ಬದಿಗಳಲ್ಲೂ ನೋಡುಗರಿಗೆ ಸ್ಪಷ್ಟಕಾಣುವಂತೆ ಎರಡು ಕಡೆ ಅವರ ಮುಖಗಳನ್ನು ರಚಿಸಲಾಗಿದೆ. ಸವಾರರ ಒಂದೇ ಶಿಲ್ಪದಲ್ಲಿ ಎರಡು ಮುಖಗಳನ್ನು ಮಾಡಲಾಗಿದ್ದು ಇವು ನೋಡುಗರಿಗೆ ತಕ್ಷಣ ವಿಭಿನ್ನ ಮುಖಗಳೆಂದು ಗೋಚರಿಸುವುದಿಲ್ಲ. ಅಲ್ಲದೆ. ಈ ಸವಾರರ ಶಿಲ್ಪಗಳಿಗೆ ಎರಡು ಪ್ರತ್ಯೇಹ ದೇಹ ಮತ್ತು ಮುಖಗಳನ್ನು ಮಾಡಲಾಗಿದ್ದು ಒಂದೇ ಶಿಲ್ಪವೆಂಬಂತೆ ಕಾಣುತ್ತವೆ. ಈ ಸವಾರರ ಶಿಲ್ಪಗಳ ಇನ್ನೊಂದು ವಿಶೇಷವೆಂದರೆ ಒಂದೇ ಶಿಲ್ಪದಲ್ಲಿ ಎರಡು ದೇಹಗಳನ್ನು ರಚಿಸಲಾಗಿದ್ದು ಶಿಲ್ಪದ ಒಂದು ಪಾರ್ಶ್ವದಲ್ಲಿ ಉದ್ದನೆಯ ನಿಲುವಂಗಿ (ಗೌನ್) ಪೈಜಾಮ ಧರಿಸಿ ಗಡ್ಡದಾರಿ ಸವಾರನ ಶಿಲ್ಪವಿದ್ದರೆ, ಇದೇ ಸವಾರನ ಇನ್ನೊಂದು ಪಾರ್ಶ್ವದಲ್ಲಿ ದೋತಿ, ಅಂಗವಸ್ತ್ರ ಧರಿಸಿ ಕೊರಳಲ್ಲಿ ಕಿವಿಯಲ್ಲಿ ಕೈಗಳಲ್ಲಿ ವಿವಿಧ ಆಭರಣಗಳನ್ನು ಧರಿಸಿ ದೇಶಿಯ ಸಿಪಾಯಿಯಂತೆ ಇದೆ. ಒಂದೇ ಶಿಲ್ಪದಲ್ಲಿ ಎರಡು ವಿಭಿನ್ನ ಸಂಸ್ಕೃತಿಯ ಸವಾರರ ಶಿಲ್ಪಗಳನ್ನು ರಚಿಸಿರುವುದು ಒಂದು ವಿಶೇಷ ಹಾಗೂ ಉಲ್ಲೇಖನಿಯವಾಗಿದೆ. ಕುದರೆ ಶಿಲ್ಪಗಳ ಕೆಳಭಾಗದಲ್ಲಿನ ಹುಲಿಯನ್ನು ಕೊಲ್ಲುತ್ತಿರುವ ಇನ್ನೊಬ್ಬ ಸಿಪಾಯಿಯ ಶಿಲ್ಪ ಕೂಡ ಎರಡು ಬದಿಗಳಿಂದ ಕಾಣುವಂತೆ ಒಂದೇ ಶಿಲ್ಪದಲ್ಲಿ ಎರಡು ಬದಿಗಳಲ್ಲಿ ಹುಲಿಯನ್ನು ಕೊಲ್ಲುತ್ತಿರುವ ಸಿಪಾಯಿಯ ಮತ್ತು ಹುಲಿಯ ಶಿಲ್ಪಗಳನ್ನು ರಚಿಸಲಾಗಿದೆ. ಅಶ್ವವು ತನ್ನ ಮುಂದಿನ ಎರಡು ಕಾಲುಗಳನ್ನು ಎತ್ತಿದ್ದು ಪಾದಗಳಿಂದ ಕಂಬದ ಪೀಠದವರೆಗಿನ ಸ್ಥಳದಲ್ಲಿ ಸೇವಕ ಅಶ್ವದಳ ಪಾದಗಳನ್ನು ತನ್ನ ಕೈಗಳಲ್ಲಿ ಹಿಡಿದು ನಿಂತಿರುವಂತೆ ಶಿಲ್ಪಗಳನ್ನು ರಚಿಸಲಾಗಿದೆ. ಅಶ್ವಶಿಲ್ಪಗಳ ಮೇಲ್ಭಾಗದಲ್ಲಿ ತಲೆಯವರೆಗಿನ ಸ್ಥಳದಲ್ಲಿ ಪುಷ್ಪಬೋದಿಗೆಯಂತೆ ರಚಿಸಲಾಗಿದೆ. ಪುಷ್ಪ ಬೋದಿಗೆಗಳ ಹಿಂಭಾಗದ ಚೌಕಾಕಾರದ ಸ್ಥಳದಲ್ಲಿ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಇವು ಆಂಜನೇಯ, ವಿಷ್ಣು, ಹುಲಿಯನ್ನು ಸಂಹರಿಸುತ್ತಿರುವ ವೀರ, ಹಂಸ ಮುಂತಾದ ಶಿಲ್ಪಗಳಾಗಿವೆ. ಅಶ್ವಶಿಲ್ಪಗಳ ಕಂಬಗಳಾಗಿದ್ದು ಇವುಗಳ ಉಳಿದ ಮೂರು ಮುಖಗಳಲ್ಲಿ ಅಲಂಕಾರಕ್ಕಾಗಿ ಉಬ್ಬು ಶಿಲ್ಪಗಳನ್ನು ಮಾಡಲಾಗಿದೆ. ಉಬ್ಬು ಶಿಲ್ಪಗಳನ್ನು ಕಂಬದ ಮುಖ ಭಾಗದಲ್ಲಿ ಮಾಡಲಾಗಿದ್ದು ಅವು ವೈಷ್ಣವ ದೇವದೇವತೆಯರ ಶಿಲ್ಪಗಳಾಗಿವೆ. ಈ ಶಿಲ್ಪಗಳಲ್ಲಿ ವಿಷ್ಣುವಿನ ವಿವಿಧ ಅವತಾರಗಳ, ಕೃಷ್ಣಲೀಲೆಗಳು, ಗಂಧರ್ವರು, ರಾಮಾಯಣದ ಶಿಲ್ಪಗಳು, ನರಸಿಂಹನ ಶಿಲ್ಪಗಳು, ಯತಿಗಳು, ಹಂಸ ಇತ್ಯಾದಿ ಶಿಲ್ಪಗಳನ್ನು ಗುರುತಿಸಬಹುದು. ಈ ಶಿಲ್ಪಗಳಲ್ಲಿ ಚೆಂಚುಲಕ್ಷ್ಮೀ ಎಂದು ಗುರುತಿಸುವ ನರಸಿಂಹ ಆರಾಧನೆಯ ಎರಡು ಶಿಲ್ಪಗಳು ಕಂಡುಬರುತ್ತವೆ ಕಾಡಿನಲ್ಲಿ ಬೇಟೆಯಲ್ಲಿ ತೊಡಗಿರುವ ಚೆಂಚುಲಕ್ಷ್ಮೀ ಎನ್ನುವ ಗಿರಿಜನರ ಕನ್ಯೆಯ

ಸೌಂದರ್ಯಕ್ಕೆ ನರಸಿಂಹನು ಮಾರು ಹೋಗಿ ಆಕೆಯನ್ನು ವರಿಸುವ ಸನ್ನಿವೇಶದ ಶಿಲ್ಪಗಳನ್ನು ಈ ಕಂಬದಲ್ಲಿ ಕಾಣುತ್ತೇವೆ. ಅದರಂತೆ ಆಕಾಶದಲ್ಲಿ ಸಂಚರಿಸುವ ಗಂದರ್ವರ ಶಿಲ್ಪಗಳಿವೆ. ಮೊದಲ ಸಾಲಿನ ಬಲತುದಿಯ ಕಂಬದ ಮೇಲ್ಭಾಗದಲ್ಲಿ ದಂಪತಿ ದೇವತೆಗಳು ಕೈಯಲ್ಲಿ ಪದ್ಮಗಳನ್ನು ಹಿಡಿದು ನಿಂತಿರುವ ಶಿಲ್ಪಗಳಿವೆ. ಇವರ ಸುತ್ತಲೂ ಪ್ರಭಾವಳಿಯನ್ನು ರಚಿಸಲಾಗಿದ್ದು ಇವು ಸೂರ್ಯ ಮತ್ತು ಛಾಯಾ ದೇವತೆಗಳ ಶಿಲ್ಪಗಳೆಂದು ಗುರುತಿಸಬಹುದು.

ಈ ಕಂಬಗಳಲ್ಲಿಯ ಕುದುರೆ ಶಿಲ್ಪಗಳು ನಾಡಿನ ವಾಸ್ತುಶಿಲ್ಪದಲ್ಲಿ ಉಲ್ಲೇಖಾರ್ಹ ಉದಾಹರಣೆಗಳಾಗಿವೆ. ಎಂದು ಡಾ. ಎಸ್. ಕೆ. ಅರುಣಿ ಅವರು ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ ಶಿಲ್ಪಕಲೆ ಎಂಬ ಕೃತಿಯಲ್ಲಿ ಅಭಿಪ್ರಾಯಿಸಿದ್ದಾರೆ. ಮುಖ್ಯವಾಗಿ ಯಾಳ ಶಿಲ್ಪಗಳ ಕಂಬಗಳ ಸಾಲು ನಿರ್ಮಿಸುವ ಸಂಪ್ರದಾಯ ವಿಜಯನಗರದ ಕಾಲದಲ್ಲಿ ಪ್ರಾರಂಭವಾಗಿದ್ದು ಇದೇ ಸಂಪ್ರದಾಯ ವಿಜಯನಗರೋತ್ತರ ಪಾಳೆಯಗಾರರ ಕಾಲದಲ್ಲಿ ಮುಂದುವರೆದಿರುವುದು ಕಂಡುಬರುತ್ತದೆ. ಆದರೆ ಈ ಸಂಪ್ರದಾಯದಲ್ಲಿ ಬದಲಾವಣೆಯನ್ನು ನಾಡಪ್ರಭುಗಳ ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಕಂಡುಬರುತ್ತದೆ. ಎಂದು ಅಭಿಪ್ರಾಯಿಸಿದ್ದಾರೆ. ಯಾಳಿ ಶಿಲ್ಪಗಳ ಬದಲಾಗಿ ಕುದುರೆ ಶಿಲ್ಪಗಳನ್ನು ರಚಿಸಿರುವುದು. ನಾಡಪ್ರಭುಗಳಲ್ಲಿ ವಿಶೇಷ ಕರ್ನಾಟಕದಲ್ಲಿ ಕುದುರೆ ಶಿಲ್ಪಗಳ ಕಂಬಗಳು, ಇದುವರೆಗೂ ದೊರೆತಿರುವ ಏಕೈಕ ಉದಾಹರಣೆ ಹಂಪಿಯ ವಿಠಲ ದೇವಸ್ಥಾನದ ಬಜಾರಿನ ಒಂದು ಮಂಟಪದಲ್ಲಿ ಮಾತ್ರ. ಈ ಮಂಟಪವನ್ನು ಕುದುರೆಗೊಂಬೆ ಮಂಟಪ ಎಂದು ಕರೆಯುತ್ತಾರೆ. ಉಳಿದಂತೆ ಬೇರೆಡೆ ಎಲ್ಲಿಯೂ ಕುದುರೆ ಕಂಬಗಳು ದೊರೆತಿರುವ ಉದಾಹರಣೆಗಳಿಲ್ಲ. ನಾಡ ಪ್ರಭುಗಳ ಕಾಲದ ಶಾಸನವಿರುವ ರಂಗನಾಥ ದೇವಾಲಯದಲ್ಲಿ ಕುದುರೆ ಶಿಲ್ಪಗಳಿರುವ ಕಂಬಗಳು ಕರ್ನಾಟಕದಲ್ಲಿ ಇದುವರೆಗೂ ದೊರೆತ ಎರಡನೆಯ ಉದಾಹರಣೆಯಾಗಿದೆ. ಕುದುರೆ ಶಿಲ್ಪಗಳಿರುವ ಕಂಬಗಳು ತಮಿಳುನಾಡಿನ ಪಾಂಡ್ಯರ ಕಾಲದ ದೇವಾಲಯಗಳಲ್ಲಿ ಹೆಚ್ಚು ಜನಪ್ರಿಯವಾದ್ದವು ಆದರೆ ಕರ್ನಾಟಕ ನೆಲದಲ್ಲಿ ಈ ಶೈಲಿಯು ವಿರಳವಾಗಿ ಕಂಡುಬರುತ್ತದೆ. ದೇವಾಲಯದ ಮುಖಮಂಟಪದಲ್ಲಿ ಕುದುರೆ ಶಿಲ್ಪಗಳ ಕಂಬಗಳಿರುವ ಉದಾಹರಣೆ ಇದು ಏಕೈಕ. ಆ ಕಾರಣದಿಂದ ನಾಡಿನ ವಾಸ್ತುಶಿಲ್ಪಕ್ಕೆ ನಾಡಪ್ರಭುಗಳು ಪರಿಚಯಿಸಿ ಪ್ರೋತ್ಸಾಹಿಸಿದ ಕೀರ್ತಿ ನಾಡಪ್ರಭುಗಳಿಗೆ ಸಲ್ಲುತ್ತದೆ ಎಂದು ಅಭಿಪ್ರಾಯಿಸಿದ್ದಾರೆ.

ನಂತರದಲ್ಲಿ ತೆರೆದ ಮುಖಮಂಟಪದ ಉಳಿದ ಕಂಬಗಳು ಸರಳವಾಗಿದ್ದು ಇವು ಕೆಳ ಪೀಠಗಳ ಮೇಲೆ ಜೋಡಿಸಿದ ಆಯತ ಮತ್ತು ವೃತ್ತ ಕಾಂಡಗಳುಳ್ಳ ಕಂಬಗಳಾಗಿವೆ. ಈ ಕಂಬಗಳು ವರ್ತುಲಾಕಾರದ ಪೀಠ ಅವುಗಳ ಮೇಲೆ ಫಲಕ ಮತ್ತು ಪುಷ್ಪ ಬೋದಿಗೆಗಳಿಂದ ಕೂಡಿವೆ. ಈ ಕಂಬದ ಆಯತಾಕಾರದ ಭಾಗವು ಕೆಳಗಡೆ ಇದ್ದು ಇದರ ನಾಲ್ಕು ಮುಖಗಳಲ್ಲಿ

ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳು ವಿಷ್ಣುವಿನ ವಿವಿಧ ಅವತಾರಗಳು ಮತ್ತು ವೈಷ್ಣವ ದೇವತೆಗಳ ಶಿಲ್ಪಗಳಾಗಿವೆ. ಮತ್ಸ್ಯಾವತಾರ, ಕೂರ್ಮಾವತಾರ, ನರಸಿಂಹ, ಬಾಲಕೃಷ್ಣ ಇತ್ಯಾದಿ ಶಿಲ್ಪಗಳಿವೆ. ಮಧ್ಯದ ಒಂದು ಕಂಬದಲ್ಲಿ ಹಿರಣ್ಯಕಶ್ಯಪುವನ್ನು ಕೊಲ್ಲುತ್ತಿರುವ ನರಸಿಂಹನ ಕಥೆಯ ನಾಲ್ಕು ಶಿಲ್ಪಗಳನ್ನು ಕಂಬದ ನಾಲ್ಕು ದಿಕ್ಕಿನಲ್ಲಿ ಕೆತ್ತಲಾಗಿದೆ. ಸೀಳಿದ ಕಂಬದಿಂದ ನರಸಿಂಹ ಹೊರಬರುತ್ತಿರುವನು. ಪಕ್ಕದಲ್ಲಿ ಹಿರಣ್ಯಕಶ್ಯಪುವನ್ನು ಕೊಲ್ಲುತ್ತಿರುವನು. ಮೂರನೆ ಶಿಲ್ಪ ಉಗ್ರನರಸಿಂಹ ಮತ್ತು ಇನ್ನೊಂದರಲ್ಲಿ ಪ್ರಸನ್ನ ನರಸಿಂಹನ ಶಿಲ್ಪವೆ. ಪ್ರಸನ್ನ ನರಸಿಂಹನ ಶಿಲ್ಪದ ಸುತ್ತಲೂ ಕಮಾನಿನಾಕಾರದ ವಿನ್ಯಾಸವಿದೆ. ದೇವಾಲಯದ ಶಿಲ್ಪಗಳಲ್ಲಿ ಕಮಾನುಗಳ ಅಲಂಕಾರ ಈ ದೇವಾಲಯ ನಿರ್ಮಾಣದ ಕಾಲಾವಧಿಯಲ್ಲಿ ಪ್ರಾರಂಭವಾಗಿತ್ತು ಎಂಬುದಕ್ಕೆ ಇದು ಒಂದು ಉತ್ತಮ ಉದಾಹರಣೆ.

ದೇವಾಲಯದ ಭಿತ್ತಿ ಸರಳವಾಗಿದ್ದು, ಯಾವ ಅಲಂಕಾರಗಳು ಕಂಡುಬರುವುದಿಲ್ಲ. ಭಿತ್ತಿಯನ್ನು ದೊಡ್ಡ ಗಾತ್ರದ ಗ್ರಾನೈಟ್ ಶಿಲೆಗಳಿಂದ ಆಯತಾಕಾರವಾಗಿ ರಚಿಸಿ ಜೋಡಿಸಲಾಗಿದೆ. ದೇವಾಲಯದ ನವರಂಗದ ಹೊರ ಭಿತ್ತಿಯಲ್ಲಿ ಅಲ್ಲಲ್ಲಿ ಉದ್ದನೆಯ ಮೀನು, ಸರ್ಪದ ಉಬ್ಬು ಶಿಲ್ಪಗಳನ್ನು ಅಲ್ಲಲ್ಲಿ ಕೆತ್ತಲಾಗಿದೆ. ದೇವಾಲಯದ ಸುತ್ತಲು ಕುಂಬಿಗೋಡೆಯನ್ನು ಮಾಡಲಾಗಿದೆ. ಈ ಕುಂಬಿಗೋಡೆಯಲ್ಲಿ ದೇವಕೋಷ್ಠ, ಶಾಲ, ಕೂಟಗಳನ್ನು ರಚಿಸಲಾಗಿದೆ. ಆದರೆ ಈ ಕುಂಬಿ ಗೋಡೆಯನ್ನು ಇತ್ತೀಚೆಗೆ ಸಂಪೂರ್ಣವಾಗಿ ನವೀಕರಿಸಲಾಗಿದ್ದು, ಸೀಮೆಂಟಿನಲ್ಲಿ ಹೊಸದಾಗಿ ಕೋಷ್ಠಗಳನ್ನು ಮತ್ತು ಶಿಲ್ಪಗಳನ್ನು ರಚಿಸಲಾಗಿದೆ. ಪ್ರಸ್ತುತ ಕುಂಬಿಗೋಡೆಯಲ್ಲಿನ ದೇವಕೋಷ್ಠಗಳಲ್ಲಿ ವಿಷ್ಣುವಿನ ವಿವಿಧ ಅವತಾರಗಳ ಶಿಲ್ಪಗಳು ಮತ್ತು ದೇವ ದೇವತೆಗಳ ಶಿಲ್ಪವನ್ನು ಸಿಮೆಂಟಿನಲ್ಲಿ ರಚಿಸಿ ಇರಿಸಲಾಗಿದೆ.

ದೇವಾಲಯದ ಮುಖ್ಯ ಗರ್ಭಗುಡಿಯ ಮೇಲೆ ದ್ರಾವಿಡ ಶೈಲಿಯ ಶಿಖರವಿದೆ. ಈ ಶಿಖರವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಮೂಲ ಶಿಖರದ ಅವಶೇಷ ಈಗ ಕಾಣುವುದಿಲ್ಲ. ಕೂಟ, ಶಾಲ, ಅರ್ಧಗಂಗಳಿಂದ ಅಲಂಕಾರಗೊಳಿಸಲಾಗಿರುವ ಏಕತಲ ಶಿಖರವಾಗಿದೆ. ಮೇಲ್ಭಾಗದಲ್ಲಿ ವೃತ್ತಶಿಖರ, ಸ್ತೂಪ ಮತ್ತು ಕೊನೆಯಲ್ಲಿ ಕಳಸವಿದೆ.

ದೇವಾಲಯದ ಪ್ರಾಕಾರ ಅತ್ಯಂತ ವಿಶಾಲವಾಗಿದ್ದು ಪ್ರಾಕಾರದ ಗೋಡೆಯನ್ನು ಎತ್ತರವಾಗಿ ನಿರ್ಮಿಸಲಾಗಿದೆ. ಪ್ರಾಕಾರದ ಪೂರ್ವ ಮತ್ತು ದಕ್ಷಿಣ ಗೋಡೆಗಳಲ್ಲಿ ದ್ವಾರಗಳನ್ನು ಮಾಡಲಾಗಿದೆ. ಪೂರ್ವದ ದ್ವಾರವು ಒಂದು ಮುಖ್ಯ ದ್ವಾರವಾಗಿದ್ದು, ಇದನ್ನು ಈಗ ಮುಚ್ಚಲಾಗಿದೆ. ಪೂರ್ವ ದ್ವಾರದ ಬಾಗಿಲವಾಡವು ಐದು ಅಲಂಕಾರದ ಪಟ್ಟಿಕೆಗಳಿಂದ ಕೂಡಿದೆ. ಇದರ ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ದ್ವಾರದ ಇಕ್ಕೆಲಗಳಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಇದರ ಒಳ ಬಾಗಿಲವಾಡದಲ್ಲಿ

ಗಂಗಾ ಮತ್ತು ಯಮುನೆಯ ಉಬ್ಬು ಶಿಲ್ಪಗಳಿವೆ. ಪ್ರಾಕಾರದ ದಕ್ಷಿಣ ದ್ವಾರವು ಪ್ರಸ್ತುತ ದೇವಾಲಯದ ಮುಖ್ಯ ದ್ವಾರವಾಗಿ ಕಾರ್ಯ ನಿರ್ವಹಿಸುತ್ತದೆ. ಮೂಲದ್ವಾರವು ನಾಶವಾಗಿದ್ದು ಹೊಸದಾಗಿ ನಿರ್ಮಿಸಲಾಗಿದೆ.

ಪ್ರಾಕಾರದ ಒಳಾಂಗಣದಲ್ಲಿ ತೆರೆದ ಮುಖಮಂಟಪದ ಎದುರಿಗೆ ಧ್ವಜಸ್ತಂಭವಿದೆ. ಸ್ತಂಭವನ್ನು ಚೌಕಾಕಾರದ ಕಿರುಗಾತ್ರದ ಕಟ್ಟೆಯಂತಹ ಪೀಠದ ಮೇಲೆ ಜೋಡಿಸಲಾಗಿದೆ. ಧ್ವಜಸ್ತಂಭದ ಮುಂಭಾಗದಲ್ಲಿ ಒಂದು ಬಲಿಪೀಠವಿದೆ. ಬಲಿಪೀಠವು ವಿವಿಧ ಪಟ್ಟಿಕೆಗಳಿಂದ ರಚಿಸಿದ ಕಿರುಗಾತ್ರದ ಪೀಠವಾಗಿದೆ. ಈ ಬಲಿಪೀಠದ ಕೆಲಪಟ್ಟಿಕೆಯಲ್ಲಿ ಗಜಗಳ ಮುಖಗಳನ್ನು ಸುತ್ತಲೂ ಸಾಲಾಗಿ ರಚಿಸಲಾಗಿದೆ. ಈ ರೀತಿಯ ಗಜಸ್ತರಗಳ ವಿನ್ಯಾಸದ ರಚನೆ ವಿಶಿಷ್ಟವಾಗಿದ್ದು ಈ ರೀತಿಯ ವಿನ್ಯಾಸದ ಗಜಸ್ಥರ ಬಲಿಪೀಠಗಳು ದೊರೆತಿರುವುದು ವಿರಳ.

ದೇವಾಲಯದ ದಕ್ಷಿಣ ದ್ವಾರದ ಮುಂಭಾಗದಲ್ಲಿ ರಸ್ತೆಯ ಆಚೆ ಬದಿಯಲ್ಲಿ ಆಂಜನೇಯ ದೇವಾಲಯವಿದೆ. ಇದು ರಂಗನಾಥ ದೇವಾಲಯದ ಗರ್ಭಗುಡಿಯ ನೇರಕ್ಕೆ ಇದೆ. ಪ್ರಸ್ತುತ ಇದು ಒಂದು ಪ್ರತ್ಯೇಕ ದೇವಾಲಯವಾಗಿ ಕಾಣುತ್ತದೆ. ಈ ಗುಡಿಯ ಹೊರಗಡೆ ದ್ವಾರಪಾಲಕರ ಒಂದು ಹಳೆಯ ಶಿಲ್ಪವಿದೆ. ರಂಗನಾಥ ದೇವಾಲಯ ಹಾಗೂ ಆಂಜನೇಯ ದೇವಾಲಯ ಎರಡನ್ನು ಗಮನಿಸುವುದರ ಜೊತೆಗೆ ಎರಡು ದೇವಾಲಯಗಳ ದ್ವಾರದ ಅವಶೇಷಗಳನ್ನು ಗಮನಿಸಿದಾಗ ಈ ಆಂಜನೇಯ ದೇವಾಲಯ ಮೂಲತಃ ರಂಗನಾಥ ದೇವಾಲಯದ ಮುಂಭಾಗದ ವಾಹನ ಮಂಟಪವಾಗಿರುವ ಸಾಧ್ಯತೆಗಳಿವೆ. ಕಾಲಾನಂತರ ವಾಹನ ಮಂಟಪ ಪ್ರತ್ಯೇಕವಾಗಿ ಆಂಜನೇಯ ದೇವಾಲಯವಾಗಿ ಪರಿವರ್ತಿತವಾಗಿರುವ ಸಾಧ್ಯತೆ ಕಂಡುಬರುತ್ತದೆ. ಇಲ್ಲಿಯ ದ್ವಾರಪಾಲಕರ ಉಬ್ಬುಶಿಲ್ಪಗಳ ಬಾಗಿಲವಾಡದ ಅವಶೇಷಗಳನ್ನು ರಂಗನಾಥ ದೇವಾಲಯದ ದಕ್ಷಿಣ ಮೂಲ ದ್ವಾರಗೋಪುರದ ಅವಶೇಷಗಳೆಂದು ಗುರುತಿಸಬಹುದು.

**ತುಂಗವಟಿ ರಂಗನಾಥಸ್ವಾಮಿ ದೇವಾಲಯ :**

ತುಮಕೂರು ಜಿಲ್ಲೆ ಮಧುಗಿರಿ ತಾಲೂಕಿನ ತುಂಗವಟಿಯಲ್ಲಿ ರಂಗನಾಥ ದೇವಾಲಯವಿದೆ. ಇದು ಬೃಹತ್ ದೇವಾಲಯವಾಗಿದ್ದು ಸುಂದರವಾಗಿದೆ. ದೇವಾಲಯವಿರುವ ಗ್ರಾಮದಲ್ಲಿ ವಿಶಾಲವಾದ ಸ್ಥಳದಲ್ಲಿ ನಿರ್ಮಾಣವಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ವಿಶಾಲವಾದ ತೆರೆದ ಮುಖಮಂಟಪ, ಮತ್ತು ಪಾತಾಳಂಕಣವನ್ನು ಹೊಂದಿದೆ. ಮತ್ತು ಸುತ್ತಲೂ ಪ್ರಾಕಾರವನ್ನು ಹೊಂದಿದ್ದು, ಪೂರ್ವಕ್ಕೆ ಮಹಾದ್ವಾರವನ್ನು ಹೊಂದಿಬೆ. ಮಹಾದ್ವಾರದ ಮೇಲೆ ಗೋಪುರ ಭಾಗವನ್ನು ಹೊಂದಿದೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಎತ್ತರವಾದ ಚೌಕಾಕಾರದ ಪೀಠದ ಮೇಲೆ ಸ್ಥಾನಕ ರಂಗನಾಥನ ಮೂರ್ತಿಶಿಲ್ಪವಿದೆ. ರಂಗನಾಥನ ಪಾದದ ಇಕ್ಕೆಲದಲ್ಲಿ ಬಲ ಮತ್ತು ಎಡಭಾಗದಲ್ಲಿ ಸ್ವತಂತ್ರವಾದ ಶ್ರೀದೇವಿ ಮತ್ತು ಭೂದೇವಿಯರ ಸ್ಥಾನಕ ಚಿಕ್ಕ ಮೂರ್ತಿಶಿಲ್ಪಗಳಿವೆ. ಚತುರ್ಭುಜನಾದ ರಂಗನಾಥನು ಮೇಲ ಬಲಕೈಯಲ್ಲಿ ಚಕ್ರ, ಮೇಲ ಎಡಕೈಯಲ್ಲಿ ಶಂಖ, ಕೆಳ ಬಲಕೈ ವರದ ಮತ್ತು ಕೆಳ ಎಡಕ್ಕೆ ಕಟಿ ಹಸ್ತವಿರುವ ಮೂರ್ತಿಶಿಲ್ಪವಾಗಿದೆ. ಸುತ್ತಲು ಪ್ರಭಾವಳಿಯನ್ನು ಹೊಂದಿದ್ದು, ತಲೆಯ ಮೇಲೆ ಹಾವಿನ ಹೆಡೆ ಚಾಚಿಕೊಂಡಿದೆ. ಇದು ಸುಮಾರು ೩ ಅಡಿ ಎತ್ತರವಾಗಿದ್ದು ಕಪ್ಪು ಶಿಲೆಯಲ್ಲಿ ರಚಿಸಲಾಗಿದೆ. ಗರ್ಭಗೃಹದ ದ್ವಾರಬಂಧವು ಸರಳವಾಗಿದ್ದು, ಯಾವುದೇ ದ್ವಾರಪಾಲಕರ ಮತ್ತು ಲಲಾಟ ಶಿಲ್ಪಗಳನ್ನು ಹೊಂದಿರುವುದಿಲ್ಲ. ಅಲ್ಲದೆ ಗರ್ಭಗೃಹ ಮತ್ತು ಅಂತರಾಳವನ್ನು ನೂತನವಾಗಿ ಜಿರ್ಣೋದ್ಧಾರ ಮಾಡಲಾಗಿದ್ದು ಗೋಡೆ ಮತ್ತು ದ್ವಾರಬಂಧಗಳಿಗೆ ಟೈಲ್ಸ್ ಕಲ್ಲುಗಳನ್ನು ಜೋಡಿಸಲಾಗಿದೆ. ಅಂತರಾಳದಲ್ಲಿ ಉತ್ಸವ ಮೂರ್ತಿ, ಹಲವು ಆಳ್ವಾರರ ಒಟ್ಟು ಆರು ಶಿಲ್ಪಗಳು ಕಂಡುಬರುತ್ತವೆ. ಜೊತೆಗೆ ಸ್ಥಾನಕ ವಿಷ್ಣುವಿನ, ವೀರನ ಶಿಲ್ಪ, ಆಂಜನೇಯ ಮತ್ತು ಗರುಡನ ಮೂರ್ತಿಶಿಲ್ಪವನ್ನು ಇಡಲಾಗಿದೆ. ಅಂತರಾಳದ ದ್ವಾರಬಂಧವು ಸರಳವಾಗಿದ್ದು ಯಾವುದೇ ಅಲಂಕಾರವನ್ನು ಹೊಂದಿಲ್ಲ.

ನವರಂಗವು ಮುಖ್ಯವಾಗಿ ಮಧ್ಯದಲ್ಲಿ ನಾಲ್ಕು ಕಂಬಗಳನ್ನು ಹೊಂದಿದೆ. ಕಂಬಗಳು ಚೌಕ-ಅಷ್ಟ-ಚೌಕ ಪಟ್ಟಿಕೆಗಲಿಂದ ನಿರ್ಮಿತವಾಗಿವೆ. ಮೇಲ್ಭಾಗದಲ್ಲಿ ವೃತ್ತಾಕಾರದ ದಿಂಬು, ಚೌಕ ಬೋದಿಗೆಯನ್ನು ಹೊಂದಿವೆ. ಚೌಕ ಪಟ್ಟಿಕೆಯಲ್ಲಿ ಆಂಜನೇಯ ಗರುಡ, ವೇಣುಗೋಪಾಲ ಮುಂತಾದ ಚಿಕ್ಕ ಉಬ್ಬುಶಿಲ್ಪಗಳಿವೆ. ಭುವನೇಶ್ವರಿಯು ಸರಳವಾಗಿದ್ದು ಅರಳಿದ ಕಮಲದ ಚಿತ್ರವನ್ನು ಹೊಂದಿದೆ. ನವರಂಗದ ಮುಂಭಾಗದಲ್ಲಿ ಹದಿನಾರು ಕಂಬಗಳಿಂದ ಕೂಡಿದ ತೆರೆದ ಮುಖಮಂಟಪವನ್ನು ಹೊಂದಿದೆ. ಈ ಮುಖಮಂಟಪದಿಂದ ಹಿಡಿದು ನವರಂಗ, ಅಂತರಾಳ, ಗರ್ಭಗೃಹವು ಒಂದು ಎತ್ತರವಾದ ವೇದಿಕೆಯ ಮೇಲೆ ನಿರ್ಮಿಸಲಾಗಿದೆ. ತೆರೆದ ಮುಖಮಂಟಪದ ಕಂಬಗಳು ಸರಳವಾಗಿದ್ದು ಚೌಕ-ಅಷ್ಟ-ಚೌಕ-ಅಷ್ಟ ಭಾಗಗಳನ್ನು ಹೊಂದಿದ್ದು ಅಲಂಕಾರ ರಹಿತವಾಗಿವೆ. ಮಧ್ಯದ ನಾಲ್ಕು ಕಂಬಗಳ ಚೌಕ ಪಟ್ಟಿಕೆಗಳಲ್ಲಿ ವೇಣುಗೋಪಾಲ, ಆಂಜನೇಯ, ಕಾಳಿಂಗ ಮರ್ಧನ ಮುಂತಾದ ಚಿಕ್ಕ ಉಬ್ಬುಶಿಲ್ಪಗಳ ಅಲಂಕರಣೆಯು ಕಂಡುಬರುತ್ತವೆ. ಮುಂಭಾಗದಲ್ಲಿ ನಾಲ್ಕು ಕಂಬಗಳಿಂದ ಕೂಡಿದ ಪಾತಾಳಾಂಕಣವನ್ನು ಹೊಂದಿದೆ. ಪಾತಾಳಾಂಕಣದಿಂದ ತೆರೆದ ಮುಖಮಂಟಪದ ಪ್ರವೇಶಿಸಲು ಎರಡು ಸೋಪಾನಗಳ ರಚನೆಯು ಕಂಡುಬರುತ್ತದೆ. ಪಾತಾಳಾಂಕಣದ ಕಂಬಗಳು ಯಾವುದೇ ಅಲಂಕರಣೆಯನ್ನು ಹೊಂದಿರದೆ ಸರಳವಾಗಿವೆ. ತೆರೆದ ಮುಖಮಂಟಪದ ದ್ವಾರಬಂಧ ಬಲ ಮತ್ತು ಎಡಭಾಗದಲ್ಲಿ ಎರಡು ಎತ್ತರವಾದ ವೈಷ್ಣವ ದ್ವಾರಪಾಕರ ಶಿಲ್ಪಗಳಿವೆ. ಇವು ಸುಮಾರು ಐದು ಅಡಿ ಎತ್ತರವಾಗಿವೆ.

ದೇವಾಲಯದ ಸುತ್ತಲೂ ವಿಶಾಲವಾದ, ಎತ್ತರವಾದ ಪ್ರಾಕಾರಗೋಡೆಯನ್ನು ನಿರ್ಮಿಸಲಾಗಿದೆ. ಪ್ರಕಾರದ ಗೋಡೆಯನ್ನು ಕಣಶಿಲೆಯ ಕಲ್ಲು ಚಪ್ಪಡಿ ಹಲಗೆಗಳಿಂದ ನಿರ್ಮಿಸಲಾಗಿದೆ. ಪ್ರಾಕಾರದ ಸುತ್ತಲು ಮೇಲ್ಭಾಗದಲ್ಲಿ ಕಂಗೂರಾಕೃತಿಯ ರಚನೆಯನ್ನು ಕಂಡುಬರುತ್ತದೆ. ಪ್ರಾಕಾರದ ಸುತ್ತಲೂ ಹೊರಭಾಗದ ಭಿತ್ತಿಯಲ್ಲಿ ಗರುಡ, ಹೊಬಳ್ಳಿ, ಮರ, ಆನೆ, ಮಿಥುನಶಿಲ್ಪ, ವರಾಹ ಬೇಟೆಯ ವ್ಯಕ್ತಿ ಶಿಲ್ಪ, ಆನೆಯ ಮೆಲೆ ನೆಗೆಯುತ್ತಿರುವ ಹುಲಿ, ವ್ಯಾಳಿ, ಮೀನು, ಜೋಡಿ ಮೀನು, ಚಂದ್ರನನ್ನು ನುಂಗುತ್ತಿರುವ ಹಾವಿನ ಗ್ರಹಣ ಮುಂತಾದ ಚಿಕ್ಕ ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಪ್ರಾಕಾರದ ಮುಂಭಾಗದ ಪೂರ್ವದಿಕ್ಕಿನಲ್ಲಿ ದ್ವಾರದಲ್ಲಿ ಮಂಟಪದ ರಚನೆ ಕಂಡುಬರುತ್ತದೆ. ಇದು ನಾಲ್ಕು ನಾಲ್ಕು ಕಂಬಗಳಿಂದ ರಚನೆಗೊಂಡಿದ್ದು, ಪಾದಬಂಧ ಅಧಿಷ್ಠಾನವನ್ನು ಹೊಂದಿದೆ. ಕಂಬಗಳು ಚೌಕ-ಅಷ್ಟ-ಚೌಕ ಭಾಗಗಳನ್ನು ಹೊಂದಿದ್ದು ಸರಳವಾಗಿವೆ. ಮುಂಭಾಗದ ಮಧ್ಯದ ಎರಡು ಕಂಬಗಳ ಚೌಕ ಪಟ್ಟಿಕೆಯಲ್ಲಿ ಆಂಜನೇಯ, ವೇಣುಗೋಪಾಲ, ಗರುಡ, ಉಗ್ರನರಸಿಂಹ, ಗಂಡಭೇರುಂಡ, ಧ್ವಜ ಹಿಡಿದಿರುವ ವ್ಯಕ್ತಿಯ ಚಿಕ್ಕ ಉಬ್ಬು ಶಿಲ್ಪಗಳಿವೆ. ಹಿಂಭಾಗದ ಎರಡು ಕಂಬದ ಇಕ್ಕೆಲದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಮಂಟಪದ ಮೇಲ್ಭಾಗದಲ್ಲಿ ಮೂರು ತಲಗಳನ್ನು ಹೊಂದಿರುವ ಎತ್ತರವಾದ ಗೋಪುರದ ರಚನೆ ಕಂಡುಬರುತ್ತದೆ. ಇದು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿತವಾಗಿದೆ. ಇದು ಶಾಲಾಕಾರದ ಮಾದರಿ ಗೋಪುರವಾಗಿದೆ.

ಈ ದೇವಾಲಯದ ತೆರೆದ ಮುಖಮಂಟಪದ ಎಡಗಡೆ ಮೂರನೆಯ ಕಂಬದಲ್ಲಿ ಶಾಸನವಿದ್ದು, ಕ್ರಿ.ಶ. ೧೫೫೨ ಅಕ್ಟೋಬರ್ ೨೫ ಮಂಗಳವಾರಕ್ಕೆ ಸರಿ ಹೊಂದುತ್ತದೆ. ಮುಮ್ಮಡಿ ಚಿಕ್ಕಪ ಗೌಡರಿಗೆ ಪುಣ್ಯವಾಗಲೆಂದು ಬಿಜ್ಜವರದ ಕೆಂಚಯ್ಯನಾಯಕರು ಸುಂಕದಿಂದ ಬರುವ ಆಯವನ್ನು ರಂಗನಾಥ ದೇವಸ್ಥಾನಕ್ಕೆ ಧಾರಾಪೂರ್ವಕವಾಗಿ ಬಿಟ್ಟುಕೊಟ್ಟ ವಿವರ ಈ ಶಾಸನದಲ್ಲಿ ದಾಖಲಾಗಿದೆ.[೨]

**ಮಾಗಡಿ ರಂಗನಾಥ ದೇವಾಲಯ :**

ರಾಮನಗರ ಜಿಲ್ಲೆ ರಾಮನಗರ ತಾಲೂಕಿನ ಮಾಗಡಿಯಲ್ಲಿ ರಂಗನಾಥ ದೇವಾಲಯವಿದೆ. ಇದನ್ನು ಮಾಗಡಿಯ ಹೊರಭಾಗದಲ್ಲಿನ ಎತ್ತರವಾದ ಸ್ವರ್ಣಾದ್ರಿ ಪರ್ವತವೆಂದು ಕರೆಯುವ ಗುಡ್ಡದ ಮೇಲೆ ನಿರ್ಮಿಸಲಾಗಿದೆ. ದೇವಾಲಯದ ಪ್ರದೇಶವನ್ನು 'ತಿರುಮಲೆ' ಎಂದು ಕರೆಯುತ್ತಾರೆ. ಮಾಗಡಿಯ ತಿರುಮಲೆ ರಂಗನಾಥ ದೇವಾಲಯವು ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಮಹಾದ್ವಾರಗಳನ್ನು ಹೊಂದಿರುವ ದೊಡ್ಡ ದೇವಾಲಯ, ಹೀಗೆ ಬಹುವಿಸ್ತೀರ್ಣ ಹಾಗೂ ಸಂಕೀರ್ಣವಿರುವ ಈ ರಂಗನಾಥ ದೇವಾಲಯವು ಪಶ್ಚಿಮಾಭಿಮುಖವಾಗಿದೆ. ಇದಕ್ಕೆ ಇತ್ತೀಚೆಗೆ ಪೂರ್ವದಿಂದ ರಸ್ತೆಯ ಅನುಕೂಲ ಮಾಡುವುದರ ಜೊತೆಗೆ ಸುತ್ತಲಿನ ಪರಿಸರ ಅಭಿವೃದ್ಧಿಪಡಿಸಲಾಗಿದೆ. ಈ ದೇವಾಲಯ ಅನೇಕ ಉಪಗುಡಿ, ಮಂಟಪ ಮತ್ತು ಕೈಸಾಲೆಗಳಿಂದ ಕೂಡಿದ್ದು ತುಂಬಾ ಸಂಕೀರ್ಣವಾಗಿದೆ.

ಮೂಲ ದೇವಾಲಯ ಕೈಸಾಲೆಗಳಿಂದ ಕೂಡಿದ್ದು ತುಂಬಾ ಸಂಕೀರ್ಣವಾಗಿದೆ. ಮೂಲ ದೇವಾಲಯದ ರಚನೆಯ ಸ್ವರೂಪ ಗುರುತಿಸಲು ಅಸಾಧ್ಯವಾಗುವಷ್ಟು ಮಾರ್ಪಾಟು ಹೊಂದಿದೆ.

ಪಶ್ಚಿಮಾಭಿಮುಖಿಯಾಗಿರುವ ಮೂಲ ದೇವಾಲಯ ಗರ್ಭಗುಡಿ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠದ ಮೇಲಿರುವ ಲಿಂಗಾಕೃತಿಯನ್ನು ರಂಗನಾಥನೆಂದು ಪೂಜಿಸುತ್ತಾರೆ. ಜೊತೆಗೆ ಸ್ಥಾನಕ ವಿಷ್ಣುವಿನ ಮೂರ್ತಿಶಿಲ್ಪವಿದೆ. ಚತುರ್ಭುಜನಾದ ಸ್ವಾಮಿಯು ಮೇಲ ಹಿಂಭಾಗದಲ್ಲಿ ಬಲಕೈಯಲ್ಲಿ ಶಂಖ, ಮೇಲ ಎಡಕೈಯಲ್ಲಿ ಚಕ್ರ, ಕೆಳಬಲಕೈಯಲ್ಲಿ ಅಭಯ, ಮತ್ತು ಕೆಳಎಡಗೈಯು ಗದೆ ಹಿಡಿದಿರುವ ಶಿಲ್ಪವಾಗಿದೆ. ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಒಳಗೋಡೆ ದ್ವಾರಬಂಧ ಇತ್ಯಾದಿಗಳನ್ನು ನೂತನವಾಗಿ ರಚಿಸಲಾಗಿದೆ. ಗರ್ಭಗೃಹದಲ್ಲಿ ಕುಳಿತ ಋಷಿಯ ಮೂರ್ತಿಶಿಲ್ಪವಿದ್ದು ಅದನ್ನು ಮಾಂಡವ್ಯ ಋಷಿಯೆಂದು ಗುರುತಿಸುತ್ತಾರೆ. ನವರಂಗದಲ್ಲಿದ್ದ ಕಂಬಗಳು ನಾಡ ಪ್ರಭುಗಳ ಇತರೆಡೆ ಇರುವ ಸಾಂಪ್ರದಾಯಿಕ ಶೈಲಿಯಿದ್ದು ಚೌಕ–ಅಷ್ಟ–ಚೌಕ ಮಾದರಿಯಲ್ಲಿವೆ. ಅದರಂತೆ ಮುಖಮಂಟಪದ ಕಂಬಗಳು ಸರಳವಾಗಿದ್ದು ಗಾತ್ರದಲ್ಲಿ ಎತ್ತರವಾಗಿವೆ. ಮುಖಮಂಟಪದ ದ್ವಾರದ ಮುಂಭಾಗದಲ್ಲಿ ಗಾರೆಯಲ್ಲಿ ಮಾಡಿದ ಎತ್ತರದ ಆನೆ ಮತ್ತು ಸವಾರರ ಶಿಲ್ಪಗಳಿವೆ. ಮೂಲ ತೆರೆದ ಮಂಟಪವನ್ನು ಗೋಡೆಯನ್ನು ನಿರ್ಮಿಸಿ ಮುಚ್ಚಲಾಗಿದೆ.

ಮುಖ್ಯ ದೇವಾಲಯದ ಗರ್ಭಗುಡಿಗೆ ಹೊಂದಿಕೊಂಡಂತೆ ಅದರ ಎಡಭಾಗದಲ್ಲಿ ಬಂಡೆಯಲ್ಲಿ ರಂಗನಾಥನ ಶಯನ ಮೂರ್ತಿಶಿಲ್ಪವಿದೆ. ಇದನ್ನು ಬೆಳೆಯೋ ರಂಗನಾಥ ಎಂದು ಕರೆಯುತ್ತಾರೆ. ಇದನ್ನು ಚಿಕ್ಕ ಗುಡಿಯಂತೆ ಮಾರ್ಪಡಿಸಲಾಗಿದೆ. ಇದನ್ನು ಪೂರ್ವಾಭಿಮುಖಿಯಾಗಿ ನಿರ್ಮಿಸಲಾಗಿದೆ. ಚಿಕ್ಕ ಗರ್ಭಗುಡಿ ಹಾಗೂ ಅಂತರಾಳ ಹಾಗೂ ತೆರೆದ ಪಾತಾಳಾಂಕಣದಿಂದ ಕೂಡಿದ ಮುಖಮಂಟಪಗಳಿಂದ ಕೂಡಿದೆ. ದ್ವಾರಬಂಧಗಳು ಸರಳವಾಗಿವೆ. ಈ ಮಂಟಪ ಆಯತಾಕಾರವಾಗಿ ವಿಸ್ತಾರವಾಗಿದ್ದು ೧೫ ಕಂಬಗಳಿಂದ ಕೂಡಿದೆ. ಇಲ್ಲಿಯ ಎಡಗಡೆಯ ಕಂಬಗಳನ್ನು ಬಳಸಿಕೊಂಡು ರಂಗನಾಥನ ಗುಡಿಯ ಮಂಟಪವನ್ನು ನಿರ್ಮಿಸಲಾಗಿದೆ. ಮುಖ್ಯ ದೇವಾಲಯದ ಬಲಗಡೆ ಮುಖಮಂಟಪದ ಅಂಚಿನಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಿರುವ ಸೀತಾಲಕ್ಷ್ಮೀ ಅಮ್ಮನವರ ದೇವಾಲಯವಿದೆ. ಇದು ಮೂಲತಃ ಚಿಕ್ಕ ಗರ್ಭಗುಡಿ, ಅದಕ್ಕೆ ಮುಂಭಾಗದಲ್ಲಿ ತೆರೆದ ಮುಖಮಂಟಪವನ್ನು ನಿರ್ಮಿಸಲಾಗಿದೆ. ಇದು ವೇದಿಕೆಯಂತೆ ಕಂಡುಬರುತ್ತದೆ. ಇಲ್ಲಿ ನಾಲ್ಕು ಕಂಬಗಳನ್ನು ಜೋಡಿಸಲಾಗಿದೆ.

ಮುಖ್ಯ ದೇವಾಲಯ ಹಾಗೂ ಉಪ ದೇವಾಲಯಗಳು ಒಳಗೊಂಡು ಸುತ್ತಲು ಎತ್ತರವಾದ ಪ್ರಾಕಾರ ರಚಿಸಲಾಗಿದೆ. ಪ್ರಾಕಾರದ ಒಳಭಾಗದಲ್ಲಿ ಅನೇಕ ಕಂಬಗಳಿಂದ ಕೂಡಿದ ಕೈಸಾಲೆ

ಇದೆ. ಈ ಕೈಸಾಲೆ ಮೂಲತಃ ಭಕ್ತರು ತಂಗಲು ಅಥವಾ ಉತ್ಸವ ವೇಳೆಯಲ್ಲಿ ವಿವಿದೋದ್ದೇಶಗಳಿಗೆ ಬಳಕೆಯಾಗುತ್ತಿತ್ತು. ಪ್ರಸ್ತುತ ಕೈಸಾಲೆಯಲ್ಲಿ ಉಪ ಗುಡಿಗಳನ್ನು ನಿರ್ಮಿಸಲಾಗಿದೆ. ಈ ಉಪಗುಡಿಗಳು ಪೂರ್ವದ ಕೈಸಾಲೆಯಲ್ಲಿ ಹೆಚ್ಚಾಗಿ ಕಾಣುತ್ತೇವೆ. ಉಳಿದಂತೆ ಉತ್ತರ ಮತ್ತು ದಕ್ಷಿಣ ದಿಕ್ಕಿನ ಕೈಸಾಲೆಗಳನ್ನು ಉಗ್ರಾಣಗಳಂತೆ ಬಳಕೆ ಮಾಡಲಾಗುತ್ತಿದೆ.

ಪ್ರಾಕಾರಕ್ಕೆ ಮೊದಲೆ ತಿಳಿಸಿದಂತೆ ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಎತ್ತರದ ಗೋಪುರಗಳಿವೆ. ಇವುಗಳಲ್ಲಿ ಪಶ್ಚಿಮದ ಗೋಪುರವು ಅಧಿಷ್ಠಾನ ಭಿತ್ತಿ, ದ್ವಾರಬಂಧ, ಹಾಗೂ ಐದು ಅಂತಸ್ತಿನ ಗೋಪುರದಿಂದ ಕೂಡಿ ಇದು ಮೂಲ ಸ್ವರೂಪದಲ್ಲಿ ಕಂಡುಬರುತ್ತದೆ. ಬಾಗಿಲುವಾಡದ ಇಕ್ಕೆಲದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ ಮತ್ತು ಬಾಗಿಲುವಾಡದ ಮೇಲೆ ಗಂಗೆ-ಯಮುನೆಯರ ಶಿಲ್ಪಗಳು ಹಾಗೂ ಲಲಾಟ ಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪಗಳಿವೆ. ದ್ವಾರದ ಇಕ್ಕೆಲಗಳಲ್ಲಿ ಮುಂಚಾಚಿದ ಜಗಲಿಗಳಿವೆ. ಗೋಪುರದ ದ್ವಾರದ ಭಿತ್ತಿ ಸರಳವಾಗಿದ್ದು ಕಲ್ಲಿನಿಂದ ಕಟ್ಟಲಾಗಿದೆ. ಗೋಪುರದ ಮೇಲ್ಭಾಗವನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಇದು ಶಾಲಾ, ಕೂಟ, ಅರೆಗಂಬ ಹಾಗೂ ವೇದಿಕೆಗಳಿಂದ ನಿರ್ಮಿಸಲಾಗಿದೆ. ಗೋಪುರದ ಮೇಲ್ಭಾಗದಲ್ಲಿ ಆಯತಕಾರದ ಚಿಕ್ಕ ಅಳತೆಯ ಸ್ತೂಪಿ ಇರುವುದು. ಸ್ತೂಪಿಯ ಎರಡೂ ಬದಿಗಳಲ್ಲಿ ಗಾರೆಯಲ್ಲಿ ಮಾಡಿದ ಕೀರ್ತಿಮುಖ ಶಿಲ್ಪಗಳು ಕಾಣುತ್ತೇವೆ. ಪೂರ್ವದ ಗೋಪುರವು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ. ಈ ಗೋಪುರ ದ್ವಾರದ ಹೊರಭಾಗದಲ್ಲಿ ಪ್ರಾಕಾರಕ್ಕೆ ಹೊಂದಿಕೊಂಡಂತೆ ಆಯತಾಕಾರದ ಜಗಲಿ ಕಟ್ಟಲಾಗಿದೆ. ಗೋಪುರದ ಮುಂಭಾಗದಲ್ಲಿ ಚೌಕಾಕಾರದ ಒಂದು ದೊಡ್ಡ ಪುಷ್ಕರಣಿ ಇರುವುದು. ಇದು ಅನೇಕ ಮೆಟ್ಟಿಲುಗಳಿಂದ ಕೂಡಿದೆ. ಪುಷ್ಕರಣಿಗೆ ಪ್ರವೇಶಿಸಲು ಇದರ ದಕ್ಷಿಣದಲ್ಲಿ ಕಂಬಗಳಿಂದ ಕೂಡಿದ ಮಂಟಪದ ದ್ವಾರವಿದೆ. ಪುಷ್ಕರಣಿಯ ಪಕ್ಕದಲ್ಲಿ ರಂಗನಾಥ ದೇವಾಲಯಕ್ಕೆ ಪೂರ್ವದಲ್ಲಿ ಯಾಳಿ ಶಿಲ್ಪಗಳಿಂದ ಕೂಡಿದ ಜಗಲಿಯಾಕಾರದ ದ್ವಾರವನ್ನು ನಿರ್ಮಿಸಲಾಗಿದೆ. ಎರಡು ಸಾಲಿನ ಯಾಳಿ ಶಿಲ್ಪ ಕಂಬಗಳು ಈ ಮಂಟಪ ದ್ವಾರದಲ್ಲಿ ಕಂಡುಬರುತ್ತವೆ. ಈ ಕಂಬಗಳ ಚೌಕ ಪಟ್ಟಿಕೆಯಲ್ಲಿ ಲಜ್ಜಾಗೌರಿ, ನಾಥಮುನಿ, ಬೆಣ್ಣೆಕೃಷ್ಣ, ಹಂಸ, ಚಾಮರಧಾರಿ ಸ್ತ್ರೀಯರು, ಯೋಗನರಸಿಂಹ ಗಣೇಶ ಇತ್ಯಾದಿ ಉಬ್ಬುಶಿಲ್ಪ ಚಿಕ್ಕ ಗಾತ್ರದಲ್ಲಿ ಕಂಡುಬರುತ್ತವೆ.

ಈ ದೇವಾಲಯದ ಮುಖಮಂಟಪದ ಜಗತಿ ತಳಪಾದಿ ಕಲ್ಲಿನಲ್ಲಿ ಕ್ರಿ.ಶ. ೧೫೨೮ರ ಶಾಸನವು ಕೃಷ್ಣದೇವರಾಯನ ದಳವಾಯಿಯೊಬ್ಬನು ಅರಸನಿಗೆ ಪುಣ್ಯವಾಗಲಿಯೆಂದು ಮಾಗುಡಿಯ ಸ್ಥಲದ ಕರ್ಲಮಂಗಳದ ಕಾಲುವಳಿ ಮಾಯಪ್ಪನಹಳ್ಳಿಯನ್ನು ರಂಗನಾಥನ ಸೇವೆಗಾಗಿ ದಾನ ನೀಡಿದಂತೆ ತಿಳಿದುಬರುತ್ತದೆ.[೨೨] ಮತ್ತೊಂದು ಮಾಗಡಿ ತಿರುಮಲೆ ರಂಗನಾಥ ದೇವಾಲಯದ ಗರುಡ

## ಅಡಿಟಿಪ್ಪಣಿಗಳು

೧. ಮನೋಜ್ ಜಿ., ೨೦೧೫, ದೇವಾಲಯ ವಾಸ್ತು ವಿಜ್ಞಾನ, ಪು. ೧೦.

೨. ಅಪರ್ಣ ಕೂ. ಸ., ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ, ಪು. ೫.

೩. ಗೋಪಾಲ್ ಬಾ. ರಾ., ೧೯೯೩, ವಾಸ್ತು, ಪು. ೨೧.

೪. ಪ್ರಭಾಕರ್ ಎಂ. ಎಸ್., ೨೦೧೧, ದೇವಾಲಯ ವಾಸ್ತು, ಪು. ೪೭..

೫. ಅಪರ್ಣ ಕೂ. ಸ., ಪೂರ್ವೋಕ್ತ, ಪು. ૩೦.

೬ ಅದೇ, ಪು. ೪೩.

೭ ಅದೇ, ಪು. ೪೬.

೮. ಅದೇ, ಪು. ೭೬.

೯. ಅದೇ, ಪು. ೯೮.

೧೦. ರಾಮಚಂದ್ರರಾವ್ ಎಸ್. ಕೆ., ೧೯೯೦, ಭಾರತದ ದೇವಾಲಯಗಳ ನೆಲೆ-ಹಿನ್ನಲೆ, ಪು. ೯೪.

೧೧. ಅದೇ, ಪು. ೯೪.

೧೨. ಅದೇ, ಪು. ೯೧.

೧೩. ಗೀತಾಂಜಲಿ ಬಿ. ಆರ್., ೨೦೧೨, ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು, ಪು. ೧೭೯.

೧೪. ಇತಿಹಾಸದರ್ಶನ, ಸಂಪುಟ-೨೨, ೨೦೦೭, ಪು. ೪೪.

೧೫. ಎ.ಕ.-೬, ಸಂಖ್ಯೆ-೨೨, ಹಿರಿಯೂರ, ಪು. ೩೦೭.

೧೬. ಬಳ್ಳಾರಿ ಜಿಲ್ಲೆಯ ಶಾಸನಗಳು, ಸಂಖ್ಯೆ-೨೫೮, ಪು. ೮೩.

೧೭. ಎ.ಕ.-೪, ಸಂಖ್ಯೆ-೧೯೬, ಪು. ૩೮೭.

೧೮. ಇತಿಹಾಸದರ್ಶನ, ಸಂಪುಟ-೧೨, ೧೯೯೭, ಪು. ೪೮-೪೯.

೧೯. ಸಂತೆಬೆನ್ನೂರ ಸುಮತೀಂದ್ರ ನಾಡಿಗ., ೨೦೧೦, ದಾವಣಗೆರೆ ಜಿಲ್ಲೆ ಇತಿಹಾಸದ ಕೆಲವು ಹೆಜ್ಜೆಗಳು, ಪು. ೧೧೦-೧೧೧.

೨೦. ಪರಶಿವಮೂರ್ತಿ ಡಿ.ವಿ., ೨೦೧೦, ಕೃಷ್ಣದೇವರಾಯನ ಶಾಸನಗಳು, ಪು. ೫೩೦-೫೩೨.

೨೧. ಪುಟ್ಟಸ್ವಾಮಿ ಬಿ.ಎಸ್., (ಸಂ.), ೨೦೧೧, ಯಲಹಂಕ ನಾಡಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು, ಪು. ೫-೬.

೨೨. ಗಂಗಾನಾಯಕ ಕೆ.ಎನ್., ೨೦೧೨, ಪಾಳೆಯಗಾರರ ಶಾಸನಗಳು, ಸಂಪುಟ-೧, ಪು. ೧೯೭.

೨೩. ಪರಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪು. ೫೧೬.

೨೪. ಅದೇ, ಪು. ૩೬೫.

ಕರ್ನಾಟಕದಲ್ಲಿರುವ ರಂಗನಾಥ ದೇವಾಲಯಗಳ ಶೇಕಡವಾರು ಪೈ ನಕ್ಷೆ




ಉದ್ಭವ ಮೂರ್ತಿಶಿಲ್ಪ ದೇವಾಲಯಗಳು
ಬಿಲ್ಲು ಬಾಣ ಹಿಡಿದಿರುವ ಮೂರ್ತಿಶಿಲ್ಪ ದೇವಾಲಯಗಳು
ಸ್ಥಾನಕ ಮೂರ್ತಿಶಿಲ್ಪ ದೇವಾಲಯಗಳು (ಅಭಯ, ವರದ, ಪದ್ಮ, ಗದೆ)
ಶಯನ ರಂಗನಾಥ ಮೂರ್ತಿಶಿಲ್ಪ ದೇವಾಲಯಗಳು

## ದೇವಾಲಯಗಳು



ರೌಡಕುಂದ (ರಾಯಚೂರು ಜಿಲ್ಲೆ, ಸಿಂಧನೂರು ತಾಲೂಕು)



ತಮ್ಮಿನಾಳ (ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲೂಕು)



ಕೊಣಚಗಲ್ (ಚಿತ್ರದುರ್ಗ ಜಿಲ್ಲೆ, ಜಗಳೂರು ತಾಲೂಕು)



ಗವಿರಂಗಾಪುರ (ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲೂಕು)

ಬನ್ನೂರು (ಮೈಸೂರು ಜಿಲ್ಲೆ, ಟಿ.ನರಸೀಪುರ ತಾಲೂಕು)



ಗುಂಡ್ಲಹಳ್ಳಿ (ತುಮಕೂರು ಜಿಲ್ಲೆ, ಮಧುಗಿರಿ ತಾಲೂಕು)

ಮಾವಿನಕೆರೆ (ಹಾಸನ ಜಿಲ್ಲೆ, ಹೊಳೆನರಸೀಪುರ ತಾಲೂಕು)



ಬಂಡೆಗಳಿಂದ ಆವೃತ್ತವಾದ ಗವಿಯ ರಚನೆ, ಗುಂಡ್ಲಹಳ್ಳಿ



ಬಂಡೆಗಳಿಂದ ಆವೃತ್ತವಾದ ಗವಿಯ ರಚನೆ, ಮಾವಿನಕೆರೆ



ತುಂಗವಟಿ, (ತುಮಕೂರು ಜಿಲ್ಲೆ, ಮಧುಗಿರಿ ತಾಲೂಕು)



ನೀರ್ಥಡಿ ( ದಾವಣಗೆರೆ ಜಿಲ್ಲೆ, ತಾಲೂಕು)



ಅಂಬಲಗೆರೆ (ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲೂಕು)



ಉಮ್ಮತ್ತೂರು (ಚಾಮರಾಜನಗರ ಜಿಲ್ಲೆ, ತಾಲೂಕು)



ಬಿಳಿಗಿರಿರಂಗನಬೆಟ್ಟ (ಚಾಮರಾಜನಗರ ಜಿಲ್ಲೆ, ತಾಲೂಕು)



ಬಾದಾಮಿ, (ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲೂಕು)



ಶ್ಯಾಂದೇನಹಳ್ಳಿ (ತುಮಕೂರು ಜಿಲ್ಲೆ, ತಾಲೂಕು)



ದೇವರಬೆಟ್ಟ (ತುಮಕೂರು ಜಿಲ್ಲೆ, ಪಾವಗಡ ತಾಲೂಕು)



ದಾನವಾಡಿ (ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲೂಕು)

# ಅಧ್ಯಾಯ–ಐದು

# ರಂಗನಾಥ ಮೂರ್ತಿಶಿಲ್ಪಗಳು

'ಶಿಲ್ಪಂಜಗಜ್ಜೀವನಂ' ಎಂಬ ಉಕ್ತಿಯಂತೆ ಜಗಜ್ಜೀವನವೆಲ್ಲ ಶಿಲ್ಪವೆ. ನಾವು ನೋಡುವ ಈ ಜಗತ್ತು ಭಗವಂತನ ಶಿಲ್ಪವಾಗಿದೆ.[೧] ಶಿಲ್ಪ ಎಂಬ ಪದ ವ್ಯಾಪಕವಾದ ಅರ್ಥ ವಿಸ್ತಾರವನ್ನು ಪಡೆದಿದೆ. ಪ್ರಾರಂಭದಲ್ಲಿ ಆದಿ ಮಾನವನು ನಿಸರ್ಗವನ್ನು ಮತ್ತು ಅದರ ಶಕ್ತಿಯನ್ನು ನಿರಾಕಾರದಲ್ಲಿ ಪೂಜಿಸುತ್ತಿದ್ದ. ನಂತರ ತನ್ನಲ್ಲಿರುವ ಕಲೆಯನ್ನು ಬಳಸಿ ಅದಕ್ಕೊಂದು ಆಕಾರವನ್ನು ನೀಡಿ, ದೈವೀ ಸ್ವರೂಪದ ಭಾವಾರ್ಥ ಕಲ್ಪಿಸಿ ಅದನ್ನು ಪೂಜಿಸತೊಡಗಿದ. ಹೀಗೆ ಶಿಲ್ಪಕಲೆಯು ರೂಪ ತಳೆಯಿತು ಎನ್ನಬಹುದು. 'ಶಿಲ್ಪವು' ಅತ್ಯಂತ ಪ್ರಾಚೀನವಾದ ಶಬ್ದವಾಗಿದ್ದು, ಕೌಶಲ್ಯದೊಂದಿಗೆ ಮಿಳಿತವಾದ ಕರ್ಮವೆಂದು ಅರ್ಥೈಸಲಾಗಿದೆ. ಸಂಸ್ಕೃತದ ಶಿಲ್ಪವೆಂಬ ಶಬ್ದ 'ಶೀಲಸಮಧೌ' ಎನ್ನುವ ಧಾತುವಿನಿಂದ ಒದಗಿಬಂದಿದ್ದು, ಮನಸ್ಸಿನ ಏಕಾಗ್ರತೆ, ಏಕತಾನತೆಗಳಿಂದ ಹೊರಬಂದುದೆಲ್ಲ ಶಿಲ್ಪವೆಂದು ಹೇಳಲಾಗುತ್ತದೆ. ಶಿಲ್ಪೋಪನಿಷತ್ತೆಂಬ ಗ್ರಂಥವು ಉಲ್ಲೇಖಿಸುವಂತೆ ಜಗತ್ತನೆಲ್ಲ ಸೃಷ್ಟಿಮಾಡಿದ ಬ್ರಹ್ಮನು ತನ್ನ ಮನಸ್ಸಿನಿಂದ ಮಾಡಿದುದೆಲ್ಲ ಶಿಲ್ಪವೇ ಎಂದು ಉಲ್ಲೇಖಿಸುತ್ತದೆ.[೨] ಇಂಥ ಶಿಲ್ಪಗಳಲ್ಲಿ ದೇವಶಿಲ್ಪ ಮತ್ತು ಮಾನವ ಶಿಲ್ಪ ಎಂದು ಎರಡು ಬಗೆಗಳಿರುವುದು ವೇದಗಳಿಂದ ತಿಳಿದುಬರುತ್ತದೆ. ಪ್ರಸ್ತುತದಲ್ಲಿ ಶಿಲ್ಪವೆಂಬುದನ್ನು ಮೂರ್ತಿಶಿಲ್ಪಕ್ಕೆ ಸೀಮಿತಗೊಳಿಸಲಾಗಿದೆ. ಇದಕ್ಕೆ ಬಿಂಬ, ಪ್ರತಿಮೆ, ವಿಗ್ರಹ ಎಂಬ ಪರ್ಯಾಯ ಪದಗಳನ್ನು ಬಳಸಲಾಗುತ್ತಿದೆ.

ಅಮೂರ್ತವಾದ ಭಗವಂತನ ಸಾಕ್ಷಾತ್ಕಾರಕ್ಕೆ ಮೂರ್ತಿ ಒಂದು ಸಾಧನವಾಗಿದೆ. ಭಾರತದಲ್ಲಿ ಅತೀ ಪ್ರಾಚೀನ ಕಾಲದಿಂದಲೂ ಮೂರ್ತಿ ಪೂಜೆ ಅಸ್ತಿತ್ವದಲ್ಲಿದ್ದು, ಭಾರತೀಯ ಪರಂಪರೆಯಲ್ಲಿ ಮೂರ್ತಿಶಿಲ್ಪಗಳಿಗೆ ಮಹತ್ತರ ಸ್ಥಾನವಿದೆ. ಅಷ್ಟೇ ಅಲ್ಲದೆ ಭಾರತೀಯ ಸಂಸ್ಕೃತಿಯು ಅಮೂರ್ತ ಮತ್ತು ಮೂರ್ತ ಅಥವಾ ನಿರ್ಗುಣ ಮತ್ತು ಸಗುಣ ಉಪಾಸನೆಗಳಿಗೆ ಸಮಾನವಾದ ಅವಕಾಶಗಳನ್ನು

ಕಲ್ಪಿಸಿಕೊಟ್ಟದೆ. ಈ ಹಿನ್ನಲೆಯಲ್ಲಿ ಭಾರತದಾದ್ಯಂತ ಎರಡೂ ಪ್ರಾಕಾರದ ಮೂರ್ತಿಶಿಲ್ಪಗಳು ಅಪಾರವಾಗಿ ವಿಕಾಸಗೊಂಡು ಬೆಳೆದು ಬಂದಿರುವುದನ್ನು ಕಾಣುತ್ತೇವೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯವು ಶಿಷ್ಟ ಮತ್ತು ಪರಿಶಿಷ್ಟ(ಜನಪದ) ನೆಲೆಯಲ್ಲಿ ನೆಲೆಗೊಂಡಿದ್ದು, ಎರಡು ಬಗೆಯ ಶಿಲ್ಪಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಮುಖ್ಯವಾಗಿ ಮೂರ್ತಿಶಿಲ್ಪಗಳಲ್ಲಿ ಮೂರ್ತ ಮತ್ತು ಅಮೂರ್ತ ರೂಪಗಳೆರಡು ಕಂಡುಬರುತ್ತವೆ. ಇದಕ್ಕೆ ರಂಗನಾಥನ ಮೂರ್ತಿಶಿಲ್ಪಗಳು ಹೊರತಾಗಿಲ್ಲ. ಪ್ರಸ್ತುತ ರಂಗನಾಥ, ರಂಗನಾಥ ಸಂಪ್ರದಾಯದಲ್ಲಿ ಬರುವ ದೈವ. ಮಾನವ ಸಂಸ್ಕೃತಿಯ ವಿಕಾಸದ ಹಂತಗಳಾದ ಆಹಾರ ಸಂಗ್ರಹಣೆ ಮತ್ತು ಬೇಟೆ, ಪಶುಪಾಲನೆ, ಕೃಷಿ ಮುಂತಾದ ಅನಾದಿ ಕಾಲದಿಂದಲೂ ಈ ಸಂಪ್ರದಾಯವು ಅಸ್ತಿತ್ವದಲ್ಲಿದ್ದು, ಈ ನಾಲ್ಕು ಹಂತಗಳನ್ನು ದಾಟಿ ಬಂದುದಾಗಿದೆ. ಮೂಲದಲ್ಲಿ ಪರಿಶಿಷ್ಟ ಪರಂಪರೆಯ ಎಲ್ಲ ಲಕ್ಷಣಗಳನ್ನು ಒಳಗೊಂಡು ನೆಲೆಗೊಂಡಿದ್ದ ಈ ಸಂಪ್ರದಾಯವು ಕೊನೆಯ ಹಂತದಲ್ಲಿ ಶಿಷ್ಟ ಸಂಪ್ರದಾಯದ ನೆಲೆಯಲ್ಲಿ ನೆಲೆಗೊಂಡಿತು. ಹೀಗಾಗಿ ಪ್ರಾರಂಭದ ನಾಲ್ಕು ಹಂತದ ರಂಗನಾಥನ ಮೂರ್ತಿ ಶಿಲ್ಪಗಳು ನಿರಾಕಾರ. ಇವುಗಳಿಗೆ ಯಾವುದೇ ರೀತಿಯ ಆಕಾರವಿರಲಿಲ್ಲ, ರೂಪವಿರಲಿಲ್ಲ. ಇವು ಹುಟ್ಟುಬಂಡೆ, ಗುಂಡುಕಲ್ಲು, ಉದ್ಭವ ಕಲ್ಲಿನ ಆಕಾರವನ್ನು ಅನುಸರಿಸಿದವುಗಳಾಗಿದ್ದು, ಒಂದು ಕಲ್ಪಿತ ರೂಪವನ್ನು ಆರೋಪಿಸಿರುತ್ತಾರೆ. ಈ ಮೂರ್ತಿಶಿಲ್ಪಗಳು ಬರಿಯ ಪ್ರತಿಕೃತಿಯಲ್ಲ. ಇವು 'ರಂಗ' ನೆಂಬ ದೈವದ ಅಪೂರ್ವವಾದ ಶಕ್ತಿಯನ್ನು, ಕಾಲ್ಪನಿಕವಾದ ತಾತ್ಪರ್ಯವನ್ನು ತುಂಬಿ ಸಿದ್ಧಪಡಿಸಿದ ಸಾಮಗ್ರಿಗಳಾಗಿವೆ. ಇವು ಪ್ರಾಕೃತಿಕವಾದ ಕಲ್ಲುಬಂಡೆಗಳಿಂದ, ಮರಗಳಿಂದ, ಸಾಲಿಗ್ರಾಮ ಶಿಲೆಗಳಿಂದ, ಉದ್ಭವ ಕಲ್ಲು, ಗುಂಡುಕಲ್ಲು, ಸ್ತಂಭದ ರೂಪದಲ್ಲಿ ಇಂತಹ ಅಪೂರ್ವ ವಸ್ತುಗಳಲ್ಲಿ ರಂಗನ ಇರುವಿಕೆಯನ್ನು ಕಂಡು ನೆಲೆಗೊಂಡಂತವುಗಳಾಗಿವೆ. ಇವುಗಳ ಕುರಿತು ಜನಸಮುದಾಯ ಅಪಾರವಾದ ಭಯ, ಭಕ್ತಿ, ನಂಬಿಕೆಗಳನ್ನು ತುಂಬಿಕೊಂಡು ನಿರಂತರವಾಗಿ ಪೂಜಿಸುತ್ತಾ ಬಂದಿರುವುದರ ಜೊತೆಗೆ ಪ್ರಸ್ತುತವು ಮುಂದುವರೆದುಕೊಂಡು ಬರುತ್ತಿರುವುದು ಕಂಡುಬರುತ್ತದೆ.

ಐದನೆಯ ಹಂತದಲ್ಲಿ ಪರಿಶಿಷ್ಟ ರಂಗ ಶಿಷ್ಟನಾಗುವ ಪ್ರಕ್ರಿಯೆಗೆ ಒಳಗಾಗಿದ್ದಾನೆ. ಇಲ್ಲಿ ಮೂರು ಬಗೆಯ ಮೂರ್ತಿ ಪ್ರಾಕಾರಗಳನ್ನು ತನ್ನದಾಗಿಸಿಕೊಂಡಿದ್ದಾನೆ. ಪ್ರಾರಂಭದ ನಾಲ್ಕು ಪ್ರಕಾರದ ಕಲ್ಪಿತ ಮೂರ್ತಿಗಳೊಂದಿಗೆ ಸೇರಿಕೊಂಡೆ, ಈ ಹೊಸ ಬಗೆಯ ಮೂರು ಮೂರ್ತಿಶಿಲ್ಪಗಳೂ ಕರ್ನಾಟಕದಲ್ಲಿ ನೆಲೆಗೊಂಡಿವೆ. ಪ್ರಸ್ತುತ ಶಿಷ್ಟ ಪರಂಪರೆಯ ಮೂರ್ತಿಶಿಲ್ಪಗಳಿಗೆ ಇರುವ ಆದ್ಯತೆ, ಪೂಜೆ, ಸಂಪ್ರದಾಯಗಳನ್ನು ಇವುಗಳ ಜೊತೆಯಲ್ಲಿಯೇ ಈ ಪರಿಶಿಷ್ಟ ಪರಂಪರೆಯ ಮೂರ್ತಿಶಿಲ್ಪಗಳು ಪಡೆದುಕೊಂಡು ಉಳಿದುಕೊಂಡು ಬಂದಿರುವುದು ಗಮನಾರ್ಹ.

ಈ ಸಂಪ್ರದಾಯದ ಮೂಲ ಕುರಿತು ಪ್ರಸ್ತುತ ಮಹಾಪ್ರಬಂಧದ ಅಧ್ಯಯನದ ಎರಡನೆಯ ಅಧ್ಯಾಯದಲ್ಲಿ ವಿವರವಾಗಿ ವಿವರಿಸಲಾಗಿದ್ದು, ಪ್ರಸ್ತುತ ಅಧ್ಯಾಯದಲ್ಲಿ ಕೇವಲ ಮೂರ್ತಿಶಿಲ್ಪಗಳ ಬೆಳವಣಿಗೆ ಕುರಿತು ವಿವರಿಸಲಾಗಿದೆ.

ಕರ್ನಾಟಕದ ಇತಿಹಾಸದಲ್ಲಿ ಶಾತವಾಹನರಿಂದ ಹಿಡಿದು ಹೊಯ್ಸಳ ಕಾಲದವರೆಗೂ ಅನೇಕ ವೈಷ್ಣವ ಮೂರ್ತಿಶಿಲ್ಪಗಳು ಬೆಳೆದು ಬಂದಿವೆ. ಅದರಲ್ಲೂ ಬಾದಾಮಿ ಚಾಲುಕ್ಯರ ಕಾಲಾವಧಿಯಲ್ಲಿ ಮೊದಲಗೊಂಡು ಕಲ್ಯಾಣ ಚಾಲುಕ್ಯರು, ನಂತರ ವಿಜಯನಗರ ಕಾಲಾವಧಿವರೆಗೆ ವಿಷ್ಣುವಿನ ಶಯನ ಭಂಗಿಯ ಅನೇಕ ಮೂರ್ತಿಶಿಲ್ಪಗಳು ನಮಗೆ ದೊರಕುತ್ತವೆ. ಅಲ್ಲದೆ ದೇವಾಲಯಗಳಲ್ಲಿಯೂ ಈ ಶಿಲ್ಪಗಳು ಗರ್ಭಗೃಹದಲ್ಲಿ ನೆಲೆಗೊಂಡಿರುವುದು ಕಂಡುಬರುತ್ತದೆ. ಮುಖ್ಯವಾಗಿ ದೇವಾಲಯದಲ್ಲಿರುವ ಮೂರ್ತಿಶಿಲ್ಪಗಳನ್ನು ಚಲ, ಅಚಲ ವೆಂದು ಎರಡು ಪ್ರಕಾರಗಳಲ್ಲಿ ಕರೆಯುವ ಪದ್ಧತಿ ಪ್ರಚಲಿತದಲ್ಲಿದೆ. ಇವುಗಳಲ್ಲಿ 'ಅಚಲ' ಪ್ರತಿಮೆಗಳಿಗೆ ಮೂಲವಿಗ್ರಹವೆಂದು ಹೆಸರು. ದಕ್ಷಿಣ ದೇಶಗಳಲ್ಲಿ ಇವುಗಳನ್ನು 'ಧ್ರುವಬೇರ' ಎಂದು ಕರೆಯುವರು. ಇವುಗಳನ್ನು ಶಿಲೆಯಿಂದ ಮಾಡುವುರಲ್ಲದೆ ದೇವಾಲಯದ ಗರ್ಭಗುಡಿಯಲ್ಲಿ ಸ್ಥಿರವಾಗಿ ಪ್ರತಿಷ್ಠೆ ಮಾಡುವರು. ಇವುಗಳನ್ನು ಸ್ಥಾನದಿಂದ ಸ್ಥಾನಕ್ಕೆ ಕದಲಿಸಲು ಸಾಧ್ಯವಿಲ್ಲ. ಈ ತೆರನಾದ ಧ್ರುವಭೇರ ಪ್ರತಿಮೆಗಳನ್ನು ಪುನಃ ಸ್ಥಾನಕ, ಆಸನ, ಶಯನ ಎಂದು ವಿಂಗಡಿಸಲಾಗಿದೆ. ಮುಖ್ಯವಾಗಿ ಶಯನ ಶಿಲ್ಪಗಳು ವಿಷ್ಣುವಿಗೆ ಮಾತ್ರ ಸೀಮಿತವಾಗಿವೆ. ಈ ಶಿಲ್ಪಗಳಿಗೆ ಅನಂತಶಯನ, ಅನಂತಪದ್ಮನಾಭ, ಪದ್ಮನಾಭ ಶಿಲ್ಪಗಳೆಂದು ಕರೆಯುವುದು ಪ್ರಚಲಿತದಲ್ಲಿದೆ. ನಂತರದಲ್ಲಿ ಈ ಶಿಲ್ಪಗಳಿಗೆ ರಂಗನಾಥನೆಂದು ಕರೆಯುವ ಪದ್ಧತಿಯು ಕ್ರಿ.ಶ. ೯ನೇ ಶತಮಾನದಿಂದ ಆರಂಭವಾಗಿದ್ದು, ಮಧ್ಯಕಾಲೀನ ಸಂದರ್ಭದಲ್ಲಿ ಈ ಶಿಲ್ಪಗಳಿಗೆ ರಂಗನಾಥನೆಂದು ಯಥೇಚ್ಚವಾಗಿ ಕರೆಯುವುದು ಕಂಡುಬರುತ್ತದೆ.

ಕಾರಣ ಈ ಕಾಲಾವಧಿಯಲ್ಲಿ 'ರಂಗ'ನ ಜೊತೆ 'ನಾಥ' ಎಂಬ ಶಿಷ್ಟ ಸಂಪ್ರದಾಯದ ಶಬ್ದವನ್ನು ಸೇರಿಸಿ ಒಳಗುಮಾಡಿಗೊಂಡು, ರಂಗನಾಥನಾಗಿ ಮರುನಾಮಕರಣ ಮಾಡಲಾಗುವ ಪ್ರಕ್ರಿಯೆಗೆ ಸ್ಪಷ್ಟ ರೂಪಸಿಕ್ಕಿತು. ಪ್ರಾರಂಭದಲ್ಲಿ 'ರಂಗ' ಅಮೂರ್ತ ರೂಪದಲ್ಲಿ ನೆಲೆನಿಂತು ರಂಗಕ್ಕೆ ದೈವ, ಬ್ರಹ್ಮಾಂಡದ ಒಡೆಯನೆಂಬ ಅರ್ಥವನ್ನು ಹೊಂದಿದ್ದರೂ, ನಂತರದಲ್ಲಿ ಶಿಷ್ಟ ಪರಂಪರೆಯಲ್ಲಿ ಶಯನ ರೂಪದ ಮೂರ್ತಿಶಿಲ್ಪವನ್ನು ಪಡೆದನು. ಈ ನೆಲೆಯಲ್ಲಿ ವೈಷ್ಣವ ಧರ್ಮದ ಪ್ರಭಾವ ಮುಖ್ಯವಾಗಿ ಕಂಡುಬರುತ್ತದೆ. ಇದಕ್ಕೆ ಕಾರಣ ತಮಿಳುನಾಡಿನ ಆಳ್ವಾರರೇ ಇರಬಹುದೆಂದು ಅಭಿಪ್ರಾಯಿಸಬಹುದು. ಇವರು ಕ್ರಿ.ಶ. ೯ನೇ ಶತಮಾನದಲ್ಲಿ ಇದ್ದವರೆಂದು ವಿದ್ವಾಂಸರು ನಂಬಲಾಗಿದೆ. ಇವರು ವಿಷ್ಣುವಿನ ಆರಾಧಕರಾಗಿದ್ದು, ವಿಷ್ಣುವನ್ನು ವಿವಿಧ ಹೆಸರುಗಳಿಂದ ಸ್ತುತಿಸುತ್ತಿದ್ದರು. ಇವರ ದೃಷ್ಟಿಯಲ್ಲಿ ಪರವಾಸುದೇವನು ಎಷ್ಟು ಸತ್ಯವೋ ಅಚಲ ರೂಪವೂ ಅಷ್ಟೇ ಸತ್ಯವಾಗಿತ್ತು. ಅಷ್ಟೇ ಅಲ್ಲದೆ ಕಲ್ಲು, ಮರ, ಕಂಚು ಮೊದಲಾದ ಪ್ರತಿಮೆಗಳಲ್ಲಿ ಅಚಲ

ರೂಪಿಯಾಗಿ ತನ್ನ ಭಕ್ತರಿಗೆ ದರ್ಶನ ನೀಡುತ್ತಾ, ಅವರಿಂದ ಪೂಜಿಸಲ್ಪಡುತ್ತಿದ್ದಾನೆಂದು ಸಾರಿದರು. ಅಲ್ಲದೆ ಗರ್ಭಗೃಹದಲ್ಲಿ ಅಚಲ ಮೂರ್ತಿಯ ಪೂಜೆಗೆ ಪ್ರೋತ್ಸಾಹ ನೀಡಿದರು. ಆದರೆ ತಮಿಳುನಾಡಿನ ಶ್ರೀರಂಗಂ ರಂಗನಾಥ ದೇವಾಲಯದ ಪ್ರಾಚೀನ ಇತಿಹಾಸ ನೋಡಿದಾಗ ಇದು ಕಾವೇರಿ ನದಿಯಿಂದ ಉಂಟಾದ ದ್ವೀಪದಿಂದ, ರಂಗದಿಂದ ಕೂಡಿದ ನೆಲೆಯಾಗಿದ್ದು, ಅಂತ್ಯರಂಗವೆಂದು ಕರೆಯಿಸಿಕೊಂಡಿದೆ. ಇದರ ಸ್ಥಳಪುರಾಣದಲ್ಲಿ ಮೂಲ ಮೂರ್ತಿಯು ಸಾಲಿಗ್ರಾಮ ಶಿಲೆಯಲ್ಲಿತ್ತೆಂದು ತಿಳಿದುಬರುತ್ತದೆ. ಅಲ್ಲದೆ ನಂತರದಲ್ಲಿ ಸಾಲಿಗ್ರಾಮದ ಶಿಲೆಯಲ್ಲಿಯೇ ಶಯನ ಮೂರ್ತಿಯನ್ನು ರಚಿಸಲಾಯಿತೆಂದು ಪ್ರತೀತಿ ಇದೆ.[೩] ಬಹುಶಃ ಇದು ಆಳ್ವಾರರ ಕಾಲದಲ್ಲಿ ನಡೆದಿರಬಹುದಾಗಿದೆ. ಕಾರಣ ೧೨ ಜನ ಆಳ್ವಾರ್‌ರುಗಳಲ್ಲಿ ಕೊನೆಯ ಕುಲಶೇಖರ್ ಆಳ್ವಾರ,[೪] ತಿರುಮಂಗೈ ಆಳ್ವಾರ್,[೫] ತೊಂಡರಡೆಪ್ಪೊಡಿ ಆಳ್ವಾರ್,[೬] ತಿರುಪಾಣಾಳ್ವಾರರು[೭] ವಿಷ್ಣುವನ್ನು 'ರಂಗನಾಥ' ನೆಂಬ ಹೆಸರಿನಿಂದ ಆರಾಧಿಸಿರುವುದು ಅವರ ಪದ್ಯಗಳಲ್ಲಿ ಕಂಡುಬರುತ್ತದೆ.

ಮೂಲತಃ ಕಾವೇರಿ ದ್ವೀಪದಲ್ಲಿಯೆ, ರಂಗದಲ್ಲಿಯೆ ರಂಗನಾಥ ನೆಲೆಗೊಂಡಿದ್ದು, ಈ ಕಾರಣದಿಂದಲೇ ರಂಗದ ಒಡೆಯ, ರಂಗನಾಥನೆಂಬ ಹೆಸರು ಪ್ರಚಲಿತಕ್ಕೆ, ಪ್ರಸಿದ್ಧಿಗೆ ಬಂದು ಈ ಹೆಸರಿನಲ್ಲಿಯೆ ಕರೆದಿರುವುದು ಕಾಣುತ್ತದೆ. ಇಲ್ಲಿ ರಂಗನು ಅನಾದಿ ಕಾಲದಿಂದಲು ಬಂದವನಾಗಿದ್ದು, ಈತನಿಗೆ 'ನಾಥ' ವೆಂಬ ಶಬ್ದವನ್ನು ತಮಿಳುನಾಡಿನ ವೈಷ್ಣವ ಧರ್ಮ ಸೇರಿಸಿ ಎರಡನ್ನು ಒಂದು ಮಾಡುವ ಪ್ರಯತ್ನವನ್ನು ಮಾಡಿರುವುದು ಕಂಡುಬರುತ್ತದೆ. ಶ್ರೀರಂಗಂ ಸ್ಥಳಪುರಾಣದ ಪ್ರಕಾರ ಪ್ರಾರಂಭದಲ್ಲಿ ನಿರಾಕಾರದ ಸಾಲಿಗ್ರಾಮವೇ ಮೂಲ ಮೂರ್ತಿಯಾಗಿದೆ. ಆದರೆ ಆಳ್ವಾರರ ಕಾಲದಲ್ಲಿ ಅಚಲ ಮೂರ್ತಿಶಿಲ್ಪದ ಆರಾಧನೆಗೆ ಹೆಚ್ಚಿನ ಪ್ರೋತ್ಸಾಹ ದೊರೆತಿರುವುದರಿಂದ, ಮೂಲಬ್ರಹ್ಮಾಂಡ ನಾಯಕ, ಒಡೆಯನಾದ ಅನಂತಶಯನನ್ನೇ ರಂಗನಾಥನಾಗಿ, ರಂಗನಾಥನ ಮೂರ್ತಿಯಾಗಿ ಬಗೆದು ಆರಾಧಿಸಿರಬಹುದೆಂದು ಅಭಿಪ್ರಾಯಿಸಬಹುದು. ಇದಕ್ಕೆ ಕರ್ನಾಟಕವು ಹೊರತಾಗಿಲ್ಲ. ಕರ್ನಾಟಕದ ಮೂಲ ಬುಡಕಟ್ಟು ಜನಾಂಗಗಳಲ್ಲಿ ಒಬ್ಬರಾದ ಸೋಲಿಗರು. ಇವರ ಆರಾಧ್ಯ ದೈವ ಬಿಳಿಗಿರಿರಂಗನ ಕುರಿತು ಪ್ರಚಲಿತವಿರುವ ಕಥೆಯೊಂದು ಮೂರ್ತಿಶಿಲ್ಪಗಳ ಕುರಿತು ಕೆಲವು ಮಹತ್ವವಾದ ಮಾಹಿತಿಯನ್ನು ನೀಡುವಂತದ್ದಾಗಿದೆ. ಉದಾಹರಣೆಗೆ ಪ್ರಚಲಿತದಲ್ಲಿರುವ ಕಥೆಯ ಪ್ರಕಾರ ಬಿಳಿಗಿರಿರಂಗನು ಸೂಳೆಯರ ಮನೆಗೆ ಹೋಗುವುದನ್ನು ಆತನ ಪತ್ನಿಯರು ವಿರೋಧಿಸಿದರೂ, ಆತನು ಹೋಗುವುದನ್ನು ಬಿಟ್ಟಿರಲಿಲ್ಲ ನಂತರ ರಂಗನ ಪತ್ನಿಯರು ಹನುಮಂತನಲ್ಲಿ ಈ ವಿಚಾರ ಹೇಳಿಕೊಂಡಾಗ, ಹನುಮಂತನು ರಂಗನಾಥನನ್ನು ಕರೆತರಲು ಹೋಗುತ್ತಾನೆ. ಹನುಮಂತ ಬರುವ ವಿಚಾರ ತಿಳಿದ ರಂಗನಾಥನು ದೊಡ್ಡ ಗುಡಾಣ(ದೊಡ್ಡಮಡಕೆ) ಒಂದರಲ್ಲಿ ಬಚ್ಚಿಟ್ಟುಕೊಂಡನು. ಈ ಸುಳಿವು ತಿಳಿದ ಹನುಮಂತ ಗುಡಾಣದ (ದೊಡ್ಡಮಡಕೆ) ಸಮೇತ ರಂಗಸ್ವಾಮಿಯನ್ನು ಹೊತ್ತುಕೊಂಡು ಬಂದು ಪತ್ನಿಯ ಎದುರಿನಲ್ಲಿ ಕೆಡುವುತ್ತಾನೆ. ಇದರಿಂದಾಗಿ ರಂಗನಾಥನಿಗೆ ಸೊಂಟಕ್ಕೆ ಪೆಟ್ಟು ಬಿದ್ದಿತು ಎಂದು

ಹೇಳುವ ಕಥೆಯ[೮] ಉದ್ದೇಶ ಬಹುಶಃ 'ರಂಗ' ನಿಗೆ ಸ್ಥಾಪಿತವರ್ಗದ ಅಥವಾ ಶಿಷ್ಟ ಸಂಪ್ರದಾಯದ ಅನಂತಶಯನ ಮೂರ್ತಿಯ ಶಯನ ಶಿಲ್ಪಗಳನ್ನು ತೋರಿಸುವ, ಆ ಹಿನ್ನಲೆಯಲ್ಲಿ ಅವನನ್ನು ನೋಡುವ, ಚಿತ್ರಿಸುವ ಬಗೆಗೆ ಪ್ರಯತ್ನಗಳು ನಡೆದಿರುವುದು ಕಂಡುಬರುತ್ತದೆ. ಮುಖ್ಯವಾಗಿ ಅನಂತಶಯನ ಶಿಲ್ಪಗಳು ಪ್ರಾಚೀನವಾಗಿದ್ದು, ಈ ಶಿಲ್ಪಕ್ಕೆ ರಂಗನಾಥ ಎಂದು ಕರೆಯುವ ಪದ್ಧತಿಯು ಮಧ್ಯಕಾಲಘಟ್ಟದಲ್ಲಿ ಪ್ರಭಾವಿಯಾಗಿ ಪ್ರಚಲಿತದಲ್ಲಿರುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಪ್ರಾಚೀನವಾಗಿರುವ ಮತ್ತು ಮುಖ್ಯವಾಗಿರುವ ಶ್ರೀರಂಗಪಟ್ಟಣ ರಂಗನಾಥಸ್ವಾಮಿ ದೇವಾಲಯವು ಕೂಡ ಕಾವೇರಿ ನದಿಯ ನಿರ್ಮಿತ ದ್ವೀಪದಿಂದಲೆ, ರಂಗದಿಂದಲೆ ಆದಿರಂಗವೆಂದು ಕರೆಯಿಸಿಕೊಂಡು ಪ್ರಸಿದ್ಧಿ ಪಡೆದಿದೆ. ಶ್ರೀರಂಗಪಟ್ಟಣವು ಪ್ರಾರಂಭದಲ್ಲಿ ದಟ್ಟಕಾಡಿನಿಂದ ಆವೃತವಾದ ಸ್ಥಳವಾಗಿತ್ತೆಂದು ತಿಳಿದು ಬರುತ್ತದೆ. ಬಹುಶಃ ಮೂಲದಲ್ಲಿ ಇಲ್ಲಿಯೂ ಸಾಲಿಗ್ರಾಮ ಶಿಲೆ ಅಥವಾ ನಿರಾಕಾರ ಮೂರ್ತಿಯು ಸ್ಥಾಪಿತವಾಗಿದ್ದು, ಅನಾದಿ ಜನಸಮುದಾಯದಿಂದ ಆರಾಧನೆಗೆ ಒಳಪಟ್ಟಿರಬಹುದು. ಹೀಗಾಗಿ ರಂಗ ನೆಲೆಯಾಗಿರುವ ಈ ಸ್ಥಳ ನಂತರದ ಕಾಲದಲ್ಲಿ ರಂಗನಾಥನೆಂದು ಶಿಷ್ಟಗೊಂಡು ಪ್ರಚಲಿತಕ್ಕೆ ಬಂದಿರಬಹುದೆಂದು ಅಭಿಪ್ರಾಯಿಸಬಹುದು.

ಈ ಎಲ್ಲ ಕ್ರಿಯೆಗಳಿಗೂ ಮೂಲ ಕಾರಣ ವೈಷ್ಣವಧರ್ಮ ಎಂದು ಭಾವಿಸಬಹುದಾಗಿದೆ. ಕಾರಣ ಆಳ್ವಾರರ ಪರಂಪರೆ ನಂತರ ಮಧ್ಯಕಾಲೀನ ಸಂದರ್ಭದಲ್ಲಿ ಆಚಾರ್ಯ ಪರಂಪರೆಯು ನೆಲೆಗೊಂಡು ಮುಂದುವರೆಯಿತು. ಇವರ ಮುಖ್ಯ ಉದ್ದೇಶ ಭಕ್ತಿ ಪ್ರಧಾನವಾದ ಶ್ರೀವೈಷ್ಣವ ಧರ್ಮವನ್ನು ಪ್ರಚಾರ ಮಾಡುವುದಾಗಿತ್ತು. ಅವರಲ್ಲಿ ಪ್ರಮುಖರಾದವರು ಶ್ರೀ ರಾಮಾನುಜಾಚಾರ್ಯರು. ಇವರು ಪ್ರಾರಂಭದಲ್ಲಿ ತಮಿಳುನಾಡಿನ ಶ್ರೀರಂಗಂ ನಲ್ಲಿ ನೆಲೆಸಿದ್ದು, ಶ್ರೀರಂಗನಾಥನ ಪರಮ ಭಕ್ತರಾಗಿದ್ದರು. ಕ್ರಿ.ಶ. ೧೨ನೇ ಶತಮಾನದಲ್ಲಿ ತಮಿಳುನಾಡಿನಿಂದ ಕರ್ನಾಟಕಕ್ಕೆ ಆಗಮಿಸಿ ಶ್ರೀವೈಷ್ಣವ ಧರ್ಮದ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದರು. ಇವರ ಪ್ರಭಾವಕ್ಕೆ ಒಳಗಾಗಿ ಹೊಯ್ಸಳರ ಬಿಟ್ಟಿದೇವನು ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿ ವಿಷ್ಣುವರ್ಧನೆಂಬ ಹೆಸರು ಪಡೆದನೆಂದು ಪ್ರತೀತಿ. ಅಲ್ಲದೆ ಈ ಸಂದರ್ಭದಲ್ಲಿ ಹೊಯ್ಸಳ ನಾಡಿನಲ್ಲಿ ಶ್ರೀವೈಷ್ಣವ ಧರ್ಮ ಒಂದು ನೆಲೆಯನ್ನು ಪಡೆದುಕೊಂಡು ಹೆಚ್ಚು ಪ್ರಚಲಿತಕ್ಕೆ ಬಂದಿತು.[೯] ಇವರ ಪ್ರಭಾವದಿಂದಾಗಿ ಹೊಯ್ಸಳ ನಾಡಿನ ಕಾವೇರಿ ತೀರದಲ್ಲಿ ಶ್ರೀರಂಗಪಟ್ಟಣ ಮತ್ತು ಶಿವನಸಮುದ್ರಗಳಲ್ಲಿಯ ರಂಗನಾಥ ದೇವಾಲಯಗಳು ಪ್ರಸಿದ್ಧಿಗೆ ಬಂದಿರಬಹುದು. ಜೊತೆಗೆ ಈ ದೇವಾಲಯಗಳಲ್ಲಿ ಶಯನ ರೂಪದಲ್ಲಿ ರಂಗನಾಥನನ್ನು ಆರಾಧಿಸುವುದು ಪ್ರಚಲಿತಕ್ಕೆ ಬಂದಿರುವುದು ಕಾಣುತ್ತದೆ.

ರಾಮಾನುಜಾಚಾರ್ಯರು ಕೈಗೊಂಡ ಒಂದು ಮಹತ್ವದ ಕಾರ್ಯ ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮದ ಪ್ರಸಾರ. ಜೊತೆಗೆ ಸಹಸ್ರಾರು ಜನರಿಗೆ ಶ್ರೀವೈಷ್ಣವ ದೀಕ್ಷೆಯನ್ನು ಅನುಗ್ರಹಿಸಿ, ಅಸ್ಪೃಶ್ಯರನ್ನು 'ತಿರುಕ್ಕುಲರ್' ಎಂದು ಕರೆದರು. ಅಲ್ಲದೆ ಇವರು ದೇವಾಲಯದ ಪ್ರವೇಶಕ್ಕೆ

ಅರ್ಹರೆಂದು ಸಿದ್ಧಪಡಿಸಿದರು. ಜೊತೆಗೆ ಅವರನ್ನು ಮೇಲುಕೋಟೆಯ ಚೆಲುವನಾರಾಯಣನ ವೈರಮುಡಿ ಉತ್ಸವ ಕಾಲದಲ್ಲಿ ಮೂರು ದಿನಗಳಲ್ಲಿ ದೇವರ ಸೇವೆಗೆ ಬಿಡುವಂತೆ ಮೊಟ್ಟ ಮೊದಲ ಬಾರಿಗೆ ಈ ಸಂಪ್ರದಾಯವನ್ನು ಪ್ರಾರಂಭಿಸಿದರು.[೧೦] ಅನೇಕ ಜೈನರು, ಶೈವ ಪಂಥಿಯರು, ಬ್ರಾಹ್ಮಣೇತರ ಅನೇಕ ಜನಸಮುದಾಯಗಳು ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿದರು. ಇವರು ಅನ್ಯ ಮತಸ್ಥರಿಗೆ 'ಪಂಚ ಸಂಸ್ಕಾರದ ದೀಕ್ಷೆ'ಗಳನ್ನು ಕೊಟ್ಟರು.[೧೧] ಮುಖ್ಯವಾಗಿ ರಾಮಾನುಜರು ಶ್ರೀವೈಷ್ಣವ ಧರ್ಮವನ್ನು ಪ್ರಭಾವಿಯಾಗಿ ಪ್ರಚಾರಗೊಳಿಸುವ ಉದ್ದೇಶವನ್ನು ಹೊಂದಿದ್ದರು. ಜೊತೆಗೆ ಶ್ರೀವೈಷ್ಣವ ಮತವನ್ನು ಸ್ಥಾಪಿಸುವ ಪ್ರಕ್ರಿಯೆಯಲ್ಲಿ ತೊಡಗಿದರೆಂದು ಕಾಣುತ್ತದೆ. ಹೀಗಾಗಿ ಅನಾದಿ ಕಾಲದಿಂದಲೂ ಯಾವ ಧರ್ಮ, ಮತ, ಪಂಥಗಳಿಗೆ ಅಂಟಿಕೊಳ್ಳದೇ ಹರಿದು ಬಂದ ಪರಿಶಿಷ್ಟ ರಂಗ ಸಂಪ್ರದಾಯವನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿರಬಹುದು. ಹಾಗೇ ಶಿಷ್ಟ ಪರಂಪರೆಯಲ್ಲಿ ಸ್ಥಾನಕೊಟ್ಟು, ಅವು ಶ್ರೀವೈಷ್ಣವ ಧರ್ಮದ ಅಡಿಯಲ್ಲಿ ಬೆಳೆದು ಬರುವಂತೆ ಮಾಡಿರಬೇಕು. ಹೀಗಾಗಿ ತನ್ನ ಮೂಲರೂಪದ ಎಲ್ಲ ಲಕ್ಷಣಗಳನ್ನು ಒಳಗೊಂಡ ನಿರಾಕಾರ ರಂಗನ ಶಿಲ್ಪಗಳ ಜೊತೆಗೆ ಶಿಷ್ಟ ರಂಗನಾಥನ ಶಿಲ್ಪವು ಪ್ರಸ್ತುತ ಆರಾಧನೆಗೊಳ್ಳುತ್ತಿರುವುದು ಜೀವಂತ ನಿದರ್ಶನವಾಗಿದೆ.

ಪ್ರಸ್ತುತ ಶಿಷ್ಟ ಪರಂಪರೆಯ ರಂಗನಾಥ ಸಂಪ್ರದಾಯದಲ್ಲಿ ಎರಡು ಪ್ರಕಾರದ ಮೂರ್ತಿಶಿಲ್ಪಗಳು ಬೆಳೆದು ಬಂದಿರುವುದು ಕಂಡುಬರುತ್ತದೆ. ಜೊತೆಗೆ ಸ್ಥಾನಕ ಶಿಲ್ಪದಲ್ಲಿ ಕೆಳಗೆ ಉಲ್ಲೇಖಿಸಿದ ಮೂರು ಪ್ರಕಾರದ ಲಕ್ಷಣಗಳನ್ನು ಒಳಗೊಂಡ ಶಿಲ್ಪಗಳು ಕಂಡುಬರುತ್ತವೆ. ಅವು ಈ ಕೆಳಗಿನಂತಿವೆ.

**೧. ಶಯನ ೨. ಸ್ಥಾನಿಕ**

೧. ಚತುರ್ಭುಜಧಾರಿ– ಶಂಖ, ಚಕ್ರ, ಬಿಲ್ಲು, ಬಾಣ.

೨. ಚತುರ್ಭುಜಧಾರಿ– ಶ್ರೀದೇವಿ ಭೂದೇವಿ ಸಮೇತ ಶಂಖ, ಚಕ್ರ, ಪದ್ಮ, ಗದೆ.

೩. ಚತುರ್ಭುಜಧಾರಿ– ಶ್ರೀದೇವಿ ಭೂದೇವಿ ಸಮೇತ ಶಂಖ, ಚಕ್ರ, ವರದ, ಅಭಯ ಮುದ್ರೆ.

**ಶಯನ ಮೂರ್ತಿ :**

ಶಿಷ್ಟ ರಂಗನಾಥ ಸಂಪ್ರದಾಯದಲ್ಲಿ ಶಯನ ರಂಗನಾಥ ಶಿಲ್ಪಗಳಿಗೆ ಮೊದಲ ಆದ್ಯತೆ ದೊರೆತಿದೆ. ಕರ್ನಾಟಕದಲ್ಲಿ ಮುಖ್ಯವಾಗಿ ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯ, ಶಿವನಸಮುದ್ರದ ರಂಗನಾಥಸ್ವಾಮಿ ದೇವಾಲಯ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯ ರಂಗಸ್ಥಳದ ರಂಗನಾಥಸ್ವಾಮಿ ದೇವಾಲಯಗಳು ಗುರುತಿಸಿಕೊಂಡಿವೆ.

ಹಾಗಾದರೆ ಈ ಶಯನ ರಂಗನಾಥನ ಮೂರ್ತಿಶಿಲ್ಪಗಳ ಲಕ್ಷಣಗಳೇನು, ಯಾವ ಪ್ರತಿಮಾ ಲಕ್ಷಣಗಳನ್ನು ಹೊಂದಿರುವ ಮೂರ್ತಿಶಿಲ್ಪಗಳಿಗೆ ರಂಗನಾಥ ಶಿಲ್ಪಗಳೆಂದು ಕರೆಯಲಾಗುವುದು.

ಈ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕಂಡುಕೊಳ್ಳಲು ಪ್ರಯತ್ನಿಸಿದಾಗ, ವೈಷ್ಣವ ಆಗಮಗಳಾದ ಪಾಂಚರಾತ್ರ ಮತ್ತು ವೈಖಾನಸ ಆಗಮಗಳಲ್ಲಿ ರಂಗನಾಥ ಮೂರ್ತಿಶಿಲ್ಪದ ಲಕ್ಷಣಗಳ ಕುರಿತು ಯಾವ ವಿವರಣೆಯು ದೊರೆಯುವುದಿಲ್ಲ. ಜೊತೆಗೆ ಮೂರ್ತಿಶಿಲ್ಪಗಳ ಪ್ರತಿಮಾ ಲಕ್ಷಣಗಳ ಕುರಿತು ಬರೆದ ಕೆಲವು ವಿದ್ವಾಂಸರ ಕೃತಿಗಳಲ್ಲಿಯೂ ಸ್ಪಷ್ಟತೆ ಕಂಡುಬರುವುದಿಲ್ಲ. ಎಲ್ಲ ವಿದ್ವಾಂಸರು ಭಿನ್ನವಾದ ಲಕ್ಷಣಗಳನ್ನು ಹೇಳಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲದೆ ಪ್ರಸ್ತುತ ಸಂದರ್ಭದಲ್ಲಿ ಮೂರು ರಂಗಕ್ಷೇತ್ರಗಳಾದ ಶ್ರೀರಂಗಂ, ಶ್ರೀರಂಗಪಟ್ಟಣ ಮತ್ತು ಶಿವನಸಮುದ್ರದ ದೇವಾಲಯಗಳಲ್ಲಿರುವ ಶಯನ ರಂಗನಾಥನ ಶಿಲ್ಪಗಳು ಬೇರೆ ಬೇರೆ ಲಕ್ಷಣಗಳನ್ನು ಒಳಗೊಂಡು ನೆಲೆಗೊಂಡಿವೆ. ಜೊತೆಗೆ ಕರ್ನಾಟಕದಲ್ಲಿ ದೊರೆಯುವ ೩೦ ಶಯನ ರಂಗನಾಥ ಶಿಲ್ಪಗಳನ್ನು ಹೊಂದಿರುವ ದೇವಾಲಯಗಳಲ್ಲಿಯೂ ರಂಗನಾಥ ಮೂರ್ತಿಶಿಲ್ಪಗಳು ಭಿನ್ನವಾದ ಲಕ್ಷಣಗಳನ್ನು ಒಳಗೊಂಡಿವೆ. ಹೀಗಾಗಿ 'ರಂಗನಾಥ' ವೆಂಬ ನಾಮವೊಂದೇ ಮುಖ್ಯವಾಗಿತ್ತು ಎಂಬುವುದು ಸ್ಪಷ್ಟವಾಗುತ್ತದೆ.

**ಶ್ರೀರಂಗಪಟ್ಟಣ :**

ರಂಗನಾಥಸ್ವಾಮಿಯು ಐದು ಹೆಡೆಗಳನ್ನು ಹೊಂದಿದ ಸರ್ಪದ ಹಾಸಿಗೆಯ ಮೇಲೆ ಮಲಗಿದ್ದಾನೆ. ವಿಷ್ಣುವಿನ ದೇಹದ ಶಿರೋಭಾಗವು ಮಾತ್ರ ಸ್ವಲ್ಪ ಮೇಲೆತ್ತಿದ್ದು, ಬಲಗೈಯು ತಲೆಗೆ ದಿಂಬಿನಂತೆ ಆಸರೆಯಾಗಿದೆ. ಸರ್ವಾಲಂಕಾರ ಭೂಷಿತನಾದ ವಿಷ್ಣುವಿನ ಪಾದದ ಬಳಿ ಲಕ್ಷ್ಮೀಯು ಪಾದ ಸೇವೆಯಲ್ಲಿ ತೊಡಗಿರುವಂತೆ ತೋರಿಸಲಾಗಿದೆ. ಇದು ಕಾವೇರಿಯ ಶಿಲ್ಪವು ಎನ್ನುವ ಅಭಿಪ್ರಾಯವಿದೆ. ಸರ್ಪ ಹಾಸಿಗೆಯು ಎಂಟು ಸುತ್ತಿನದಾಗಿದ್ದು ಗಮನಾರ್ಹವಾಗಿದೆ.

**ಶಿವನಸಮುದ್ರ :**

ರಂಗನಾಥಸ್ವಾಮಿಯು ಐದು ಹೆಡೆಗಳನ್ನು ಹೊಂದಿದ ಆದಿಶೇಷನ ಹಾಸಿಗೆಯ ಮೇಲೆ ಮಲಗಿದ್ದಾನೆ. ಇದು ಮೂರು ಸುತ್ತಿನ ಆವೃತಿಯುಳ್ಳ ಹಾಸಿಗೆಯಾಗಿದೆ. ಆತನ ಬಲಕೈಯೂ ತಲೆಗೆ ದಿಂಬಿನಂತೆ ಆಸರೆಯಾಗಿದೆ. ಎಡಕೈಯು ಸಮಾನಾಂತರವಾಗಿ ಎಡತೊಡೆಯ ಮೇಲೆ ಚಾಚಿದೆ.

**ರಂಗಸ್ಥಳ :**

ಏಳು ಹೆಡೆಗಳುಳ್ಳ ಆದಿಶೇಷನ ಮೇಲೆ ರಂಗನಾಥನು ಪವಡಿಸಿದ್ದಾನೆ. ಇದು ಮೂರು ಸುತ್ತಿನ ಆವೃತ್ತಿಯುಳ್ಳ ಪರ್ಯಂಕನವಾಗಿದೆ. ಅದರ ಮೇಲೆ ಮಲಗಿರುವ ವಿಷ್ಣುವಿನ ನೀಳಕಾಯವು ಕಂಠದವರೆಗೆ ಪವಡಿಸಿದ್ದು ಶಿರವನ್ನು ಮಾತ್ರ ಕೊಂಚ ಮೇಲೆತ್ತಿದೆ. ಕಾಲುಗಳು ಎರಡು ಸಮಾನಾಗಿವೆ. ಎಡಗೈ ಲಕ್ಷ್ಮೀ ಪಾದಸೇವೆಯಲ್ಲಿ ನಿರತಳಾಗಿರುವಂತೆ ಬಿಡಿಸಿದೆ. ಪಾದದ ಬಳಿ

ಶ್ರೀದೇವಿ ಭೂದೇವಿಯರಿಬ್ಬರು ಇದ್ದಾರೆ. ದೇವರ ಹಿಂಭಾಗದ ಭಿತ್ತಿಯ ಪಟ್ಟಿಕೆಗಳಲ್ಲಿ ಸಪ್ತಋಷಿ, ಶಂಖ, ಚಕ್ರ, ಅಪ್ಸರೆಯರು, ಅಷ್ಟದಿಕ್ಪಾಲಕರು ಮುಂತಾದವರ ಉಬ್ಬುಶಿಲ್ಪಗಳಿವೆ.

**ಸ್ಥಾನಕ ಮೂರ್ತಿ :**

ಮುಖ್ಯವಾಗಿ ಈ ಮೂರು ಮೂರ್ತಿಶಿಲ್ಪಗಳು ವಿಜಯನಗರ ಕಾಲಾವಧಿಯಲ್ಲಿ ಪ್ರಸಿದ್ಧಿಗೆ ಬಂದಂತೆ ಕಂಡುಬರುತ್ತದೆ. ಹಂಪಿಯನ್ನು ರಾಜಕೀಯ ಕೇಂದ್ರ ಸ್ಥಾನವನ್ನಾಗಿ ಆಯ್ದುಕೊಂಡು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯನ್ನು ಆರಂಭಿಸಿದ ಅರಸರಲ್ಲಿ ಸಂಗಮ, ಸಾಳ್ವ, ತುಳುವ, ಅರವೀಡು ಎಂಬ ನಾಲ್ಕು ರಾಜವಂಶಗಳು ಪ್ರಸಿದ್ಧವಾಗಿವೆ. ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಧರ್ಮವು ಆಸ್ಥಾನದ ಧರ್ಮವಾಗಿರುವಂತೆ ಕೃಷ್ಣದೇವರಾಯನ ಕಾಲದಲ್ಲಿ ಶ್ರೀವೈಷ್ಣವ ಧರ್ಮವು ಆಸ್ಥಾನದ ಧರ್ಮವಾಗಿತ್ತು. ಅಲ್ಲದೆ ವಿಜಯನಗರ ಸಾಮ್ರಾಜ್ಯದ ಮೊದಲಿಗೆ ಶೈವ ಧರ್ಮವೇ ರಾಜಧರ್ಮವಾಗಿತ್ತು. ಆದರೆ ಮುಂದೆ ಶ್ರೀಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ತಮಿಳುನಾಡಿನಿಂದ ಪ್ರಸಾರಗೊಂಡ ಈ ಶ್ರೀವೈಷ್ಣವ ಧರ್ಮವು ವಿಜಯನಗರದ ರಾಜ ಧರ್ಮವಾಗಿ ಬೆಳೆಯಿತು. ಶ್ರೀವೈಷ್ಣವ ಧರ್ಮವು ವಿಜಯನಗರ ಸಾಮ್ರಾಜ್ಯದಲ್ಲಿ ನೆಲೆಗೊಂಡ ಮೇಲೆ ಅನೇಕರು ಶ್ರೀವೈಷ್ಣವ ಧರ್ಮದ ಮತಾವಲಂಬಿಗಳಾದರು.

ಇವರ ಆಳ್ವಿಕೆಯ ಕಾಲದಲ್ಲಿ ಶಿಷ್ಟ ರಂಗನಾಥ ಸಂಪ್ರದಾಯವು ಬಹು ವ್ಯಾಪಕವಾದ ವಿಸ್ತಾರವನ್ನು ಪಡೆದುಕೊಂಡಿತು. ಅಲ್ಲದೆ ಮುಂದೆ ಪಾಳೆಯಗಾರರ ಕಾಲದ ವರೆಗೂ ಮುಂದುವರೆಯಿತು. ವಿಜಯನಗರ ಕಾಲದಲ್ಲಿ ರಂಗನಾಥನ ಶಯನ ಮೂರ್ತಿಶಿಲ್ಪಗಳು ಆರಾಧನೆಗೆ ಒಳಪಟ್ಟಿದ್ದರೂ ಆ ಶಿಲ್ಪದ ಜೊತೆ ಮತ್ತೆರಡು ಮೂರ್ತಿಶಿಲ್ಪಗಳು ರಂಗನಾಥನೆಂದು ಗುರುತಿಸಿಕೊಂಡವು. ಕೊನೆಗೆ ಪಾಳೆಯಗಾರರ ಕಾಲದಲ್ಲಿಯೂ ಅವು ವ್ಯಾಪಕವಾಗಿ ಮುಂದುವರೆದವು. ವಿಜಯನಗರದ ಕಾಲಾವಧಿಯಲ್ಲಿ ಪರಿಶಿಷ್ಟ ಮತ್ತು ಶಿಷ್ಟ ರಂಗನಾಥ ಸಂಪ್ರದಾಯವು ಸಂಪೂರ್ಣ ಪ್ರಭುತ್ವದ ಅಡಿಯಲ್ಲಿ ನೆಲೆಗೊಂಡಿವುದು ಕಂಡುಬರುತ್ತದೆ. ಕಾರಣ ವಿಜಯನಗರದ ಸೈನ್ಯ ಪಡೆಯಲ್ಲಿ ಬಹುಪಾಲು ಸೈನಿಕರು ಹಾಗೂ ಪಾಳೆಯಗಾರರೆಲ್ಲರೂ ಬುಡಕಟ್ಟು ಬೇಡ ಮೂಲಗಳಿಂದ ಬಂದವರಾಗಿದ್ದರು. ಇವರು ಸಾಮ್ರಾಜ್ಯದ ಅಡಿಯಲ್ಲಿ ನೆಲೆಗೊಂಡ ಧರ್ಮಗಳ, ದೈವಗಳ ಆರಾಧಕರಾಗಿದ್ದರೂ, ತಮ್ಮ ಬೇಟೆ ಮೂಲದಿಂದ ಬಂದ ಬೇಟೆರಂಗನನ್ನು, ಬೇಟೆರಂಗನ ಆರಾಧನೆಯನ್ನು ಚಾಚು ತಪ್ಪದೇ ನಡೆಸಿಕೊಂಡು, ಮುಂದುವರೆಸಿಕೊಂಡು ಬಂದವರಾಗಿದ್ದರು. ಈ ಕಾಲಾವಧಿಯಲ್ಲಿ ರಂಗನಾಥ ಆರಾಧನೆಯು ಶಿಷ್ಟ ರೂಪದಲ್ಲಿ ಗುರುತಿಸಿಕೊಂಡರೂ, ಇಲ್ಲಿನ ಜನಸಮುದಾಯಗಳು ಮೂಲ ಹಂತದ ಪರಿಶಿಷ್ಟ ರಂಗನಾಥನ ಸಂಪ್ರದಾಯವನ್ನು ತಮ್ಮ ನಂಬಿಕೆ, ಆಚರಣೆ, ಆರಾಧನೆ ಹಿನ್ನಲೆಯಲ್ಲಿ ಉಳಿಸಿಕೊಂಡು, ಬೆಳೆಸಿಕೊಂಡು ಪ್ರಭುತ್ವದ ಅಡಿಯಲ್ಲಿ ನೆಲೆನಿಂತವರಾಗಿದ್ದರು. ಅಲ್ಲದೇ ಪ್ರಸ್ತುತ ವಿವಿಧ ಆಚರಣೆಗಳು ಜೀವಂತವಾಗಿವೆ.

೧. ಚತುರ್ಭುಜಧಾರಿ : ಶಂಖ, ಚಕ್ರ, ಬಿಲ್ಲು, ಬಾಣ ಹಿಡಿದಿರುವ ರಂಗನಾಥನ ಶಿಲ್ಪ

ಮುಖ್ಯವಾಗಿ ವಿಜಯನಗರದ ರಾಮಚಂದ್ರ (ಹಜಾರರಾಮ) ದೇವಾಲಯ ಸಂಗಮರ ಕಾಲದ ಕಟ್ಟಡವಾಗಿದೆ. ಪೂರ್ವಾಭಿಮುಖವಾದ ಈ ದೇವಾಲಯದ ಅಧಿಷ್ಠಾನದ ಮೇಲೆ ಮೊದಲನೆಯ ದೇವರಾಯನ (ಕ್ರಿ.ಶ.೧೪೦೬-೨೨)ಕಾಲದ ಉಲ್ಲೇಖವಿರುವ ಶಾಸನವಿದ್ದು ಅವನ ಕಾಲದಲ್ಲಿಯೇ ಇದು ನಿರ್ಮಾಣವಾಗಿರಬೇಕೆಂದು ಅಭಿಪ್ರಾಯಿಸಲಾಗಿದೆ. ಇಲ್ಲಿ ವಿಶೇಷವೆಂದರೆ ದೇವಾಲಯ ಹೊರಭಾಗದ ಬಲಭಾಗದಲ್ಲಿ ಗರ್ಭಗೃಹದ ಭಿತ್ತಿಯ ಮೇಲೆ ಚತುರ್ಭುಜನಾದ ಒಂದು ಮೂರ್ತಿಶಿಲ್ಪವಿದ್ದು, ಮೇಲ ಕೈಯಲ್ಲಿ ಶಂಖ, ಚಕ್ರಧಾರಿಯಾಗಿ ಕೆಳ ಕೈಯಲ್ಲಿ ಬಿಲ್ಲು, ಬಾಣ ಹಿಡಿದಿರುವ ಶಿಲ್ಪವಿದೆ. ಪ್ರಸ್ತುತ ಸಂದರ್ಭದಲ್ಲಿ ಅನೇಕ ರಂಗನಾಥ ದೇವಾಲಯಗಳಲ್ಲಿ ಇದೇ ಮಾದರಿಯ ಶಿಲ್ಪವನ್ನು ಬೇಟೆರಂಗನಾಥನೆಂದು ಆರಾಧಿಸುತ್ತಿರುವುದು ಕಂಡುಬರುತ್ತದೆ. ಹೀಗಾಗಿ ಈ ಶಿಲ್ಪವನ್ನು ಬೇಟೆರಂಗ ಎಂದೂ ಕರೆದು ಆರಾಧಿಸುವ ಪರಂಪರೆಯು ವಿಜಯನಗರ ಕಾಲವಧಿಯಿಂದಲೇ ಪ್ರಾರಂಭವಾಗಿರಬೇಕೆಂದು ತಿಳಿದುಬರುತ್ತದೆ. ಜೊತೆಗೆ ಈ ಕಾಲಾವಧಿಯಲ್ಲಿ ಪ್ರಭುತ್ವವು ರಂಗನಾಥನನ್ನು ಎರಡು ಸಂಪ್ರದಾಯದಲ್ಲಿ ಒಪ್ಪಿದಂತೆ ಸ್ಪಷ್ಟವಾಗುತ್ತದೆ. ಅಲ್ಲದೆ ಜನಸಮುದಾಯದ ಆರಾಧನಾ ಭಾಗವಾದ ಮೂಲಬೇಟೆರಂಗನಿಗೆ ಈ ಶಿಲ್ಪದ ಮೂಲಕ ಆತನಿಗೂ ಒಂದು ಸ್ಥಾನವನ್ನು ಕೊಟ್ಟಂತೆ ಕಂಡುಬರುತ್ತದೆ.

೨. ಚತುರ್ಭುಜಧಾರಿ- ಶ್ರೀದೇವಿ ಭೂದೇವಿ ಸಮೇತ ಶಂಖ, ಚಕ್ರ, ಪದ್ಮ, ಗದೆ ಹಿಡಿದಿರುವ ರಂಗನಾಥನ ಮೂರ್ತಿಶಿಲ್ಪ

೩. ಚತುರ್ಭುಜಧಾರಿ- ಶ್ರೀದೇವಿ ಭೂದೇವಿ ಸಮೇತ ಶಂಖ, ಚಕ್ರ, ವರದ, ಅಭಯ ಮುದ್ರೆ ಹೊಂದಿರುವ ರಂಗನಾಥನ ಮೂರ್ತಿಶಿಲ್ಪ

ಈ ಲಕ್ಷಣಗಳನ್ನು ಒಳಗೊಂಡಿರುವ ಮೂರ್ತಿಶಿಲ್ಪಗಳು ಪ್ರಸ್ತುತ ರಂಗನಾಥ ಸಂಪ್ರದಾಯದಲ್ಲಿ ರಂಗನಾಥನೆಂದು ಗುರುತಿಸಿಕೊಂಡಿವೆ.

ಮುಖ್ಯವಾಗಿ ಸೋಲಿಗರ ಒಂದು ಪ್ರಚಲಿತವಿರುವ ಕತೆಯ ಪ್ರಕಾರ ಬಿಳಿಗಿರಿರಂಗನು ಲಕ್ಕಮ್ಮ, ತೊಳಸಮ್ಮನ ಬಿಟ್ಟು ರಂಗಿಯ ಮನೆಗೆ ಹೋಗುವವನಾಗಿದ್ದನು. ಇತನು ರಂಗಿಯ ಮನೆಗೆ ಹೋಗುವಾಗ ಇವರಿಬ್ಬರ ಮಧ್ಯ ತನ್ನಂಥದೇ ಮರದ ಪ್ರತಿಮೆಯೊಂದನ್ನು ಮಾಡಿ ಹೆಂಡತಿಯರ ಮಧ್ಯೆ ಮಲಗಿಸಿ ಹೋಗುತ್ತಾನೆಂಬ ಪ್ರತೀತಿ ಇದೆ.[೨] ಬಹುಶಃ ಈ ಶಿಲ್ಪಗಳನ್ನು ರಂಗನಾಥನಾಗಿ ತೋರಿಸುವಲ್ಲಿ ಪ್ರಚಲಿತಕ್ಕೆ ಬಂದಿರಬೇಕೆಂದು ಅಭಿಪ್ರಾಯಿಸಬಹುದು.

**ಉತ್ಸವ ಮೂರ್ತಿ :** ವಿಶೇಷ ಸಂದರ್ಭದಲ್ಲಿ ಗುಡಿಯ ಆವರಣದೊಳಗೆ, ಊರಬೀದಿಗಳಲ್ಲಿ ಹೊತ್ತು ಅಥವಾ ರಥದ ಮೇಲಿಟ್ಟು ತಿರುಗಾಡುವ ಮೂರ್ತಿಯೇ 'ಉತ್ಸವ ಬೇರು'. ಇವು ಚಲ ಮೂರ್ತಿಗಳಾಗಿದ್ದು, ಲೋಹದಿಂದ ಮಾಡಲಾಗಿರುತ್ತದೆ. ಇವು ಹೆಚ್ಚು ಭಾರವಿಲ್ಲದೆ, ಸಣ್ಣ

ಪ್ರಮಾಣದಲ್ಲಿದ್ದು, ಉತ್ಸವ ಕಾಲದಲ್ಲಿ ಅಥವಾ ಪೂಜಾ ಸಮಯದಲ್ಲಿ ಅಲ್ಲಿಂದಿಲ್ಲಿಗೆ ಒಯ್ಯಲು ಅನುಕೂಲವಾಗುವವು. ಈ ರೀತಿಯ ಉತ್ಸನ ಮೂರ್ತಿ ರಂಗನಾಥನ ಎಲ್ಲ ದೇವಾಲಯಗಳಲ್ಲಿಯೂ ಕಂಡುಬರುತ್ತದೆ. ಇಲ್ಲಿ ರಂಗನಾಥನು ಶ್ರಿದೇವಿ ಭೂದೇವಿ ಸಮೇತರಾಗಿ ನಿಂತ ಸಣ್ಣ ಉತ್ಸವ ಮೂರ್ತಿಗಳು ಕಂಡುಬರುತ್ತವೆ. ವಿಶೇಷವೆಂದರೆ ಎಲ್ಲ ದೇವಾಲಯದಲ್ಲಿಯೂ ಒಂದೇ ರೀತಿಯ ಉತ್ಸವ ಮೂರ್ತಿಗಳಿವೆ.

ಹೀಗೆ ಅನಾದಿ ಕಾಲದ ರಂಗನ ನಿರಾಕಾರ ಶಿಲ್ಪಗಳಿಂದ ಹಿಡಿದು ವಿಜಯನಗರ, ಪಾಳೆಯಗಾರರ ಕಾಲದವರೆಗೂ ರಂಗನಾಥನು ಶಿಷ್ಟ ಮತ್ತು ಪರಿಶಿಷ್ಟ ಮೂರ್ತಿಶಿಲ್ಪಗಳಲ್ಲಿ ರೂಪ ತಳೆಯುತ್ತಾ ಮುಂದುವರೆದು ನೆಲೆಗೊಂಡಿದ್ದಾನೆ. ರಂಗನಾಥನನ್ನು ಗುರುತಿಸುವಲ್ಲಿ ಎಲ್ಲ ಮೂರ್ತಿಶಿಲ್ಪಗಳು ಒಂದೇ ಸ್ಥಾನವನ್ನು ಪಡೆದುಕೊಂಡು ಮಹತ್ವತೆಯನ್ನು ಪಡೆದವುಗಳಾಗಿವೆ.

## ಅಡಿಟಿಪ್ಪಣಿಗಳು

೧. ಮುತ್ತಾಚಾರ್ಯ ಟಿ.ವಿ., ೧೯೮೭, ಭಾರತೀಯ ಶಿಲ್ಪಶಾಸ್ತ್ರಸಾರ ಭಾಗ.೧., ಪು.೧.

೨. ತಿಪ್ಪೇಸ್ವಾಮಿ ಪಿ. ಆರ್.(ಪ್ರಸಂ.), ೧೯೯೪, ಶಿಲ್ಪಕಲಾ ಪ್ರಪಂಚ, ಪು.೩೫.

೩. ಮಂಜಪ್ಪಶೆಟ್ಟಿ ಎಂ. ಪಿ.(ಪ್ರಸಂ.), ೧೯೮೧, ಚಿಕ್ಕುಪಾಧ್ಯಾಯ ವಿರಚಿತ ಶ್ರೀರಂಗಮಾಹಾತ್ಮ್ಯಂ, ಪು.೨೧-೨೫.

೪. ತಿರುನಾರಾಯಣಪುರಂ ಅರ್ಯೆಯರ್., ೨೦೦೫, ಆಳ್ವಾರ್ ಶರಣರ ತಿರುಪತಿ ತಿಮ್ಮಪ್ಪ, ಪು.೧೨೮.

೫. ಅದೇ, ಪು.೨೩೫.

೬. ಅದೇ, ಪು.೧೫೭.

೭. ಅದೇ, ಪು.೧೫೭.

೮. ಕನ್ನಡ ವಿಷಯ ವಿಶ್ವಕೋಶ(ಪರಿಷ್ಕೃತ), ೨೦೦೭, ಕರ್ನಾಟಕ.ಸಂ.೨., ಪು.೪೪೩.

೯. ಕೃಷ್ಣಸ್ವಾಮಿಅಯ್ಯಂಗಾರ್ ಎಚ್. ಎಸ್., ೧೯೮೫, ಅವಲೋಕನ, ಪು.೧೭೩.

೧೦. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು. ೯೯೬.

೧೧. ಮಂಜುನಾಥ ಸಿ.ಯು., ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು.೧೧೧.

೧೨. ಬೋರಲಿಂಗಯ್ಯ ಹಿ.ಚಿ., ೨೦೧೫, ಬುಡಕಟ್ಟು ದೈವಾರಾಧನೆ, ಪು.೫೪-೫೫.

ಕರ್ನಾಟಕದಲ್ಲಿ ಇರುವ ರಂಗನಾಥ ಮೂರ್ತಿಶಿಲ್ಪಗಳು

122
20
102
30

ಉದ್ಭವ ಮೂರ್ತಿಶಿಲ್ಪಗಳು
ಬಿಲ್ಲು ಬಾಣ ಹಿಡಿದಿರುವ ಮೂರ್ತಿಶಿಲ್ಪಗಳು
ಸ್ಥಾನಕ ಮೂರ್ತಿಶಿಲ್ಪಗಳು (ಅಭಯ, ವರದ, ಪದ್ಮ, ಗದೆ)
ಶಯನ ರಂಗನಾಥ ಮೂರ್ತಿಶಿಲ್ಪಗಳು

## ನಿರಾಕಾರ ರಂಗನಾಥನ ಶಿಲ್ಪಗಳು





ಬಿಲ್ಲೇನಹಳ್ಳಿ (ಮಂಡ್ಯ ಜಿಲ್ಲೆ, ಕೃಷ್ಣರಾಜಪೇಟೆ ತಾಲೂಕು)




ರೌಡಕುಂದ (ಕೊಪ್ಪಳ ಜಿಲ್ಲೆ, ಗಂಗಾವತಿ ತಾಲೂಕು)



ಕವುತಾಳ (ಚಿಕ್ಕಮಗಳೂರು ತಾಲೂಕು, ಜಿಲ್ಲೆ)



ಹಳ್ಳೂರು (ಹಿರೇಕೆರೂರು ತಾಲೂಕು, ಹಾವೇರಿ ಜಿಲ್ಲೆ)



ಮಾವಿನಕೆರೆ (ಹೊಳೆನರಸೀಪುರ ತಾಲೂಕು, ಹಾಸನ ಜಿಲ್ಲೆ)



ಮಲ್ಲಾಡಿಹಳ್ಳಿ (ಚಿತ್ರದುರ್ಗ ಜಿಲ್ಲೆ, ಹೊಳಲಕೆರೆ ತಾಲೂಕು)



ತಿರುಮಲೆದೇವರಕೊಪ್ಪ (ಹಾವೇರಿ ಜಿಲ್ಲೆ,

ರಾಣೇಬೆನ್ನೂರು ತಾಲೂಕು)



ಹೊದಿಗೆರೆ (ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲೂಕು)



ಕಳವಿಬಾಗಿ (ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲೂಕು)



ಕೋಮಾರನಹಳ್ಳಿ (ದಾವಣಗೆರೆ ಜಿಲ್ಲೆ, ಹರಿಹರ ತಾಲೂಕು)



ತಂಬ್ರಹಳ್ಳಿ (ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಳ್ಳಿ ತಾಲೂಕು)



ಕರೆಕಲ್ಲು (ಚಿತ್ರದುರ್ಗ ಜಿಲ್ಲೆ, ಹೊಳಲಕೆರೆ ತಾಲೂಕು)



ಕೊಣಚಗಲ್ಲು (ಚಿತ್ರದುರ್ಗ ಜಿಲ್ಲೆ, ಜಗಳೂರು ತಾಲೂಕು)



ಮಾವಿನಕೆರೆ (ಹಾಸನ ಜಿಲ್ಲೆ, ಹೊಳೆನರಸೀಪುರ ತಾಲೂಕು)



ಗುಂಡ್ಲಹಳ್ಳಿ (ತುಮಕೂರು ಜಿಲ್ಲೆ, ಮಧುಗಿರಿ ತಾಲೂಕು)



ಸ್ಯಾದರಕಲ್ಲಹಳ್ಳಿ (ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲೂಕು)



ಗಿಜಿಗಟ್ಟೆ (ಚಿಕ್ಕಮಗಳೂರು ಜಿಲ್ಲೆ, ತರಿಕೆರೆ ತಾಲೂಕು)



ಕಳಾಲುಘಟ್ಟ (ಬೆಂಗಳೂರು ಗ್ರಾಮಾಂತರ ಜಿ. ನೆಲಮಂಗಲ ತಾ.)



ಮರಬನಹಳ್ಳಿ (ದಾವಣಗೆರೆ ಜಿಲ್ಲೆ. ಚನ್ನಗಿರಿ ತಾಲೂಕು)



ಅಬ್ಬಿನಹೊಳೆ (ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲೂಕು)



ಜೋಗಿಹಟ್ಟಿ (ಚಿತ್ರದುರ್ಗ ಜಿಲ್ಲೆ. ಚಳ್ಳಕೆರೆ ತಾಲೂಕು)



ಮಲ್ಲಪ್ಪನಹಳ್ಳಿ (ಚಿತ್ರದುರ್ಗ ಜಿಲ್ಲೆ. ಹಿರಿಯೂರು ತಾಲೂಕು)



ಇಜಲಘಟ್ಟ (ಮಂಡ್ಯ ಜಿಲ್ಲೆ. ನಾಗಮಂಗಲ ತಾಲೂಕು)



ಇಟಗಿ (ದಾವಣಗೆರೆ ಜಿಲ್ಲೆ. ಚನ್ನಗಿರಿ ತಾಲೂಕು)

## ರಂಗನಾಥನ ಶಯನ ಶಿಲ್ಪಗಳು



ಶಿವನಸಮುದ್ರ (ಚಾಮರಾಜನಗರ ಜಿಲ್ಲೆ, ಕೊಳ್ಳೆಗಾಲ ತಾಲೂಕು)



ದೇವನಹಳ್ಳಿ (ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲೂಕು)

## ಬಿಲ್ಲು, ಬಾಣ ಹಿಡಿದಿರುವ ರಂಗನಾಥನ ಶಿಲ್ಪಗಳು



ಹಜಾರರಾಮ ದೇವಾಲಯದಲ್ಲಿರುವ ಬೇಟೆ ರಂಗನಾಥ ಶಿಲ್ಪ (ಹಂಪಿ)


ಆನಂದಪುರ (ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ)


ಮೂಡಲವಿಠಲಾಪುರ (ಭದ್ರಾವತಿ ತಾಲೂಕು, ಶಿವಮೊಗ್ಗ ಜಿಲ್ಲೆ)


ಕೋಣನತಲೆ (ರಾಣೇಬೆನ್ನೂರು ತಾಲೂಕು, ಹಾವೇರಿ ಜಿಲ್ಲೆ)


ದಾಸರಹಟ್ಟಿ (ಹೊನ್ನಾಳಿ ತಾಲೂಕು, ದಾವಣಗೆರೆ ಜಿಲ್ಲೆ)



ದಾನವಾಡಿ (ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲೂಕು)



ಚೀಲೂರು (ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲೂಕು)

## ಸ್ಥಾನಿಕ ಶಿಲ್ಪಗಳು


ನಂದಿಹಳ್ಳಿ (ಚಿತ್ರದುರ್ಗ ಜಿಲ್ಲೆ. ಹಿರಿಯೂರು ತಾಲೂಕು)


ಅಂಬಲಗೆರೆ(ಚಿತ್ರದುರ್ಗ ಜಿಲ್ಲೆ. ಹಿರಿಯೂರು ತಾಲೂಕು)


ಹಾರಣಕಣಿವೆ (ಚಿತ್ರದುರ್ಗ ಜಿಲ್ಲೆ. ಹಿರಿಯೂರು ತಾಲೂಕ)


ಹಳೆದೇವರಹೊನ್ನಾಳಿ ದಾವಣಗೆರೆ ಜಿಲ್ಲೆ. ಹೊನ್ನಾಳಿ ತಾಲೂಕು)

# ಅಧ್ಯಾಯ-ಆರು

# ನಂಬಿಕೆ ಮತ್ತು ಆಚರಣೆಗಳು

ಪ್ರಕೃತಿಯ ಮಧ್ಯೆ ಬಾಳುವ ಮಾನವ ಹಲವು ಶಕ್ತಿಗಳನ್ನು ದೇವರು ಎಂದು ನಂಬಿದ್ದ. ನಂತರ ಪೂಜಿಸಲು ಪ್ರಾರಂಭಿಸಿ ಒಲಿಸಿಕೊಳ್ಳಲು ಪ್ರಯತ್ನಿಸಿದನು. ಜೊತೆಗೆ ಅವುಗಳ ವಿರುದ್ಧವಾಗಿ ದೆವ್ವಗಳ ಅಥವಾ ಭೀತಿಗಳ ಭಯವು ಅಧಿಕವಾಗಿ ಕಂಡುಕೊಂಡನು. ಇವುಗಳಿಂದ ರಕ್ಷಣೆ ಪಡೆಯಲು ಬಾಳಿನಲ್ಲಿ ನೆಮ್ಮದಿಯನ್ನು ಕಂಡುಕೊಳ್ಳಲು ಮತ್ತೆ ಕೆಲವು ನಂಬಿಕೆಗಳನ್ನು ರೂಢಿಸಿಕೊಂಡನು. ಹೀಗೆ ಭಯ ಮತ್ತು ಭಾವನಾತ್ಮಕತೆಯ ಹಿನ್ನಲೆಯಲ್ಲಿ ಬಂದಿದ್ದ ನಂಬಿಕೆಯ ಪ್ರಪಂಚ ವಿಶಾಲವಾದುದ್ದು ಮತ್ತು ಆಳವಾದುದ್ದಾಗಿದೆ. ಮಾನವನ ಜೀವನದ ಸಕಲ ಮುಖಗಳಲ್ಲಿಯೂ ಇದರ ಇರುವಿಕೆ ಕಂಡುಬರುತ್ತದೆ. ಮಾನವನ ಬದುಕಿನ ಮೂಲ ಪುಟಗಳನ್ನು ತೆರೆದಾಗ, ಈ ನಂಬಿಕೆಗಳ ಸರಪಳಿ ಜೋಡನೆಯ ಕಾರ್ಯವೂ ಅದರಿಂದಲೇ ಆರಂಭವಾಯಿತೆನ್ನಬಹುದು. ಹೀಗಾಗಿ ಮಾನವನ ಬದುಕಿಗೂ ನಂಬಿಕೆಗಳಿಗೂ ಬೇರ್ಪಡಿಸಲಾಗದ ಸಂಬಂಧವಿದೆ. ಅಲ್ಲದೆ ಪ್ರತಿಯೊಂದು ಸಮಾಜದ ಜನಪದರ ಬದುಕಿನಲ್ಲೂ ನಂಬಿಕೆ ಹಾಸುಹೊಕ್ಕಾಗಿವೆ. ಇವು ಮಾನವನ ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಾಗಿ ಬೆಳೆದು ಉಳಿದುಕೊಂಡು ಬಂದಿವೆ. ಜನಪದರ ನಿತ್ಯ ಬದುಕಿಗೂ ನಂಬಿಕೆಗಳಿಗೂ ನಿಕಟವಾದ ನಂಟಿದೆ. ನಂಬಿಕೆಯು ಒಂದು ಮಾನಸಿಕ ಒಪ್ಪಿಗೆಯಾಗಿದ್ದು, ಜನಪದರು ಅದನ್ನು ಪರಂಪರಾನುಗತವಾಗಿ ನಂಬಿ ಅದರಂತೆ ನಡೆದುಕೊಂಡು ಬಂದಿರುವ ಭಾವರೂಪಗಳಾಗಿವೆ. ಇದು ಸೂಚನೆ, ನಿಯಮ, ಆದೇಶ, ವಿಧಿನಿಷೇದ, ನಿರ್ದೇಶನ, ಆಗ್ರಹ ಮತ್ತು ಆದೇಶ ಮತ್ತು ಆಜ್ಞೆಗಳ ರೂಪದ ಒಂದು ಹೇಳಿಕೆ.[೧]

ಹೀಗೆ ಮಾನವನ ಜೀವನದಲ್ಲಿ ನಂಬಿಕೆಯ ಪ್ರಾಬಲ್ಯ ಅನನ್ಯವಾದದ್ದು. ಮಾನವ ಬದುಕಿನ ಭಾಗವಾದ ದೈವ ಸಂಸ್ಕೃತಿಯಲ್ಲಿ ನಂಬಿಕೆಯ ಪ್ರಪಂಚ ಅತ್ಯಂತ ವಿಸ್ತಾರವಾದದ್ದು. ಮುಖ್ಯವಾಗಿ

ದೈವ ಸಂಸ್ಕೃತಿಯಲ್ಲಿ ನಂಬಿಕೆಗಳು ಜನಪದರ ಮಾನಸಿಕ ರೋಗಚಿಕಿತ್ಸಕಗಳಾಗಿ ಕೆಲಸ ಮಾಡುತ್ತವೆ. ಪ್ರಸ್ತುತ ಅಧ್ಯಯನದ ರಂಗನಾಥನು ಇದಕ್ಕೆ ಹೊರತಾಗಿಲ್ಲ. ಅನಾದಿ ಮಾನವನ ಜೀವನ ವಿಧಾನದಿಂದ ಹಿಡಿದು ಆಧುನಿಕ ಮಾನವ ಜೀವನ ರೀತಿಯಲ್ಲಿ ರಂಗನಾಥನು ಒಂದಲ್ಲ ಒಂದು ರೀತಿಯಲ್ಲಿ ನಂಬಿಕೆಯ ಪ್ರಬಲ ಹಿಡಿತದಲ್ಲಿ ರೂಪಗೊಂಡು ನೆಲೆಗೊಂಡಿದ್ದಾನೆ.

ಪ್ರಸ್ತುತ ಅಧ್ಯಯನದ ರಂಗನಾಥ ಅನಾದಿ ಮಾನವ ತನ್ನ ಬೇಟೆ ಸಂಸ್ಕೃತಿಯಲ್ಲಿ ತನ್ನ ಜೊತೆ ಕಾಡಿನಲ್ಲೇ ಸೃಷ್ಟಿಸಿಕೊಂಡ ದೈವವಾಗಿದ್ದಾನೆ. ಇಲ್ಲಿ ಈತನ ಹುಟ್ಟಿಗೆ, ಅಸ್ತಿತ್ವಕ್ಕೆ ನಂಬಿಕೆಯೇ ಮೂಲ ಆಧಾರ. ಹೀಗಾಗಿ 'ರಂಗ' ಎನ್ನುವ ವಸ್ತು, ಸಂಕೇತ, ನಂಬಿಕೆ, ನಾಮ ಎಲ್ಲವು ನಂಬಿಕೆಯಿಂದಲೇ ಸೃಷ್ಟಿಸಿಕೊಂಡಂತವುಗಳಾಗಿ ವ್ಯಕ್ತವಾಗುತ್ತದೆ. ಹಾಗೆಯೇ ಇಲ್ಲಿ 'ರಂಗ' ಅನಾದಿ ಮಾನವನಿಗೆ ರಕ್ಷಕನಾಗಿದ್ದ. ಬೇಟೆಯು ದೊರೆಯುವಲ್ಲಿ ಸಹಾಯ ಮಾಡುವವನಾಗಿದ್ದ. ಕಾಡಿನಲ್ಲಿ ಜೊತೆಗಾರನಾಗಿದ್ದ. ಈ ರಂಗನನ್ನು ಪೂಜಿಸಿ ಹೋದರೆ ಬೇಟೆಯು ದೊರೆಯುತ್ತದೆಂದು ನಂಬಿದ್ದ. ಬೇಟೆ ದೊರೆತಾಗ ಆತನಿಗೂ ಒಂದು ಪಾಲನ್ನು ಕೊಡವುದರಿಂದ ಮತ್ತೆ ಬೇಟೆ ದೊರೆಯುವಲ್ಲಿ ರಂಗನು ಸಹಾಯ ಮಾಡುವನೆಂದು ನಂಬಿದ್ದನು. ಹೀಗಾಗಿ ಆತನ ಆಹಾರದ ಬೇಕು ಬೇಡಿಕೆಗಳನ್ನು ಪೂರೈಸುವವನಾಗಿ ರಂಗನನ್ನು ಕಂಡುಕೊಂಡಿದ್ದರು. ಇಂದಿಗೂ ರಂಗನನ್ನು ಬೇಟೆಗಾರರು ಪೂಜಿಸುವ ಪರಿಪಾಠವಿದೆ. 'ಬೇಟೆರಂಗ' ಎನ್ನುವ ನಂಬಿಕೆ ಜನಸಮುದಾಯದಲ್ಲಿ ಪ್ರಬಲವಾಗಿ ನೆಲೆಗೊಂಡಿದೆ.

ಮುಂದುವರೆದು ಮಾನವ ತನ್ನ ಅಲೆಮಾರಿ ಜೀವನವನ್ನು ಕೈಬಿಟ್ಟು ಒಂದುಕಡೆ ನೆಲೆನಿಂತು, ಬುಡಕಟ್ಟು ಜೀವನವನ್ನು ಕಟ್ಟಿಕೊಂಡನು. ಮೂಲದಲ್ಲಿ ಪ್ರಕೃತಿಯ ಆರಾಧನೆಯನ್ನು ಕಟ್ಟುನಿಟ್ಟಾಗಿ ಆಚರಿಸಿಕೊಂಡು ಬಂದ ಬುಡಕಟ್ಟುಗಳು, ನೆಲೆನಿಂತ ಪರಿಸರದಲ್ಲಿನ ಇತರ ದೈವಗಳನ್ನು ಆರಾಧಿಸಲು ಪ್ರಾರಂಭಿಸಿದವು. ಹೀಗಾಗಿ ಮೂಲ ಬೇಟೆರಂಗನು ಇತರ ದೈವಗಳೊಂದಿಗೆ ಬೆರೆತು ಹೋದನು. ಇದರಿಂದ ರಂಗನು ಇತರ ದೈವಗಳ ಜೊತೆಗೆ ಮುಖ್ಯವಾಗಿ ಮಾನವನ ಆರಾಧನೆಯ ವಿವಿಧ ಚಟುವಟಿಕೆಗಳಲ್ಲಿ ಗುರುತಿಸಿಕೊಂಡನು. ಜೊತೆಗೆ ಕುಟುಂಬ ಕುಲಜೀವನ, ಸಮುದಾಯಗಳ ನಂಬಿಕೆಯಲ್ಲಿ ಅವನ ಕುರಿತಾಗಿ ಭಕ್ತಿ, ಆರಾಧನೆಯು ವ್ಯಾಪಕತೆಯನ್ನು ಪಡೆದುಕೊಂಡಿತು. ಅವರ ಎಲ್ಲ ಕಷ್ಟಗಳಿಗೆ ಪರಿಹಾರವನ್ನು ನೀಡುವವನಾಗಿ ನೆಲೆಗೊಂಡನು. ಹೀಗಾಗಿ ಯಾವುದೇ ಜಾತಿ, ಮತ, ವರ್ಗ, ಪಂಥಕ್ಕೂ ಸೀಮಿತವಾಗಿರದೆ ತಳಸಮುದಾಯದ ಜನರಿಂದ ಹಿಡಿದು ಮೇಲವರ್ಗದವರೆಗೆ ಎಲ್ಲರಿಗೂ ಸಮಾನವಾಗಿ ಆರಾಧಿಸುವ ದೈವವಾಗಿದ್ದಾನೆ. ಎಲ್ಲರನ್ನು ಸಮಾನ ದೃಷ್ಟಿಯಿಂದ ನೋಡುವವನಾಗಿ, ರಕ್ಷಕನಾಗಿ ರಂಗನಾಥನು ಜನಸಮುದಾಯದಲ್ಲಿ ನೆಲೆಗೊಂಡಿದ್ದಾನೆ. ಜೊತೆಗೆ ಕರ್ನಾಟಕದಾದ್ಯಂತ ಭಕ್ತ ಸಮೂಹವನ್ನು ಪಡೆದು ವ್ಯಾಪಕ ವಿಸ್ತಾರವನ್ನು ಪಡೆದುಕೊಂಡವನಾಗಿದ್ದಾನೆ.

ಜನಸಮುದಾಯದಲ್ಲಿ ರಂಗನಾಥನು ಭಕ್ತಿ ಮತ್ತು ಭಯ ಎರಡು ನೆಲೆಯಲ್ಲಿ ನೆಲೆಗೊಂಡಿದ್ದಾನೆ. ಭಕ್ತರು ರಂಗನಾಥಸ್ವಾಮಿಯನ್ನು ನಿಷ್ಠೆ ಮತ್ತು ಭಕ್ತಿಯಿಂದ ಪೂಜಿಸಿ ತಮ್ಮ ಕಷ್ಟಗಳನ್ನು ಪರಿಹರಿಸುವಂತೆ ಬೇಡಿಕೊಂಡರೆ ಖಂಡಿತ ಫಲಸಿಗುತ್ತದೆ ಎಂದು ನಂಬಿದ್ದಾರೆ. ಮುಖ್ಯವಾಗಿ ಪಶುಪಾಲಕರು ದನ-ಕರುಗಳ ರಕ್ಷಕನಾಗಿ ಕಂಡುಕೊಂಡಿದ್ದಾರೆ. ತಮ್ಮ ಜಾನುವಾರುಗಳಿಗೆ ಯಾವುದಾದರು ರೋಗ-ರುಜಿನಗಳು, ಸಂಕಟ ಬಂದಾಗ ಅದರ ನಿವಾರಣೆಗಾಗಿ ರಂಗನಲ್ಲಿ ಬೇಡಿಕೊಂಡು ಪ್ರಾರ್ಥಿಸುವವರು. ರೋಗ ನಿವಾರಣೆಯಾದ ದನಕರು, ಕುರಿಗಳು ಮರಿ ಹಾಕಿದರೆ ಮೊದಲಿಗೆ ಕರೆದ ಹಾಲನ್ನು ದೈವಕ್ಕೆ ಸಮರ್ಪಿಸುವ ಕಡ್ಡಾಯ ವಿಧಿಯಿದೆ. ಅಲ್ಲದೆ ಆಕಳು ಹಾಲು, ಗಿನ್ನು, ತುಪ್ಪ ಎಲ್ಲವು ರಂಗನಿಗೆ ಪ್ರೀಯವೆಂದು ನಂಬಿದ ಜನರು ತಪ್ಪದೇ ಆತನಿಗೆ ನೈವೇದ್ಯ ಅರ್ಪಿಸುತ್ತಾರೆ. ಮಡಿ ನೇಮದಿಂದ ಹಾಲನ್ನು ಕರೆದು ಮೀಸಲು ತುಪ್ಪವನ್ನು ತಯಾರಿಸಿ ರಂಗನಿಗೆ ದೀಪ ಹಚ್ಚಿದರೆ ದನಕರುಗಳಿಗೆ ಯಾವ ರೋಗವು ಬರುವುದಿಲ್ಲವೆಂಬ ನಂಬಿಕೆಯಿದೆ. ಜೊತೆಗೆ ಮನೆಯವರಿಗೆಲ್ಲರಿಗೂ ಕ್ಷೇಮ ಎನ್ನುವ ನಂಬಿಕೆಯಿದೆ. ಅಲ್ಲದೆ ಪ್ರತಿವರ್ಷವು ದನಕರುಗಳನ್ನು ರಂಗನಾಥ ನೆಲೆಗೊಂಡ ಸ್ಥಳಗಳಿಗೆ ಕರೆದುಕೊಂಡು ಹೋಗಿ ಪೂಜಿಸಿಕೊಂಡು ಬರುವ ಸಂಪ್ರದಾಯವನ್ನು ರೂಢಿಸಿಕೊಂಡು ಬಂದಿದ್ದಾರೆ. ಈ ರೀತಿಯ ಆಚರಣೆಯು ಎಲ್ಲ ದೇವಾಲಯಗಳಲ್ಲಿ ಕಂಡುಬರುತ್ತದೆ. ಇದರಿಂದ ತಮ್ಮ ಜಾನುವಾರುಗಳಿಗೆ ಕ್ಷೇಮವಾಗುತ್ತದೆ ಎಂದು ನಂಬಿದ್ದಾರೆ. ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಬಿಲ್ಲೇನಹಳ್ಳಿ ರಂಗನಾಥಸ್ವಾಮಿ ದೇವಾಲಯದಲ್ಲಿ ಈ ಪದ್ಧತಿಯು ವ್ಯಾಪಕವಾಗಿ ನಡೆಯುತ್ತದೆ.

ರಂಗನು ಮಕ್ಕಳನ್ನು ಕರುಣಿಸುವ ದೈವವಾಗಿ ನೆಲೆಗೊಂಡಿದ್ದಾನೆ. ಸ್ತ್ರೀಯರು ನೇಮದಿಂದ ಮಡಿಯಿಂದ ರಂಗನಾಥನನ್ನು ಪೂಜಿಸಿ ಮಕ್ಕಳನ್ನು ಕರುಣಿಸು ಎಂದು ಬೇಡಿಕೊಳ್ಳುತ್ತಾರೆ. ಅಷ್ಟೇ ಅಲ್ಲದೆ ಮಕ್ಕಳಾದರೆ ಬಾಯಿಬೀಗ ಹಾಕಿಸಿಕೊಳ್ಳುವ, ಹೆಜ್ಜೆನಡೆ ಸೇವೆಯನ್ನು ಮಾಡುವ ಹರಕೆಯನ್ನು ಹೊತ್ತಕೊಂಡು ಪೂರೈಸುತ್ತಾರೆ.

ಕಾಲದಿಂದ ಕಾಲಕ್ಕೆ ಮಳೆ, ಬೆಳೆ ಸಮೃದ್ಧವಾಗಿ ಬರದೆ ಇದ್ದಾಗ ಭಕ್ತರು ರಂಗನಾಥನಿಗೆ ವಿಶೇಷ ಪೂಜೆಯನ್ನು ಮಾಡಿದರೆ ಮಳೆ ಬರುತ್ತದೆಂಬ ನಂಬಿಕೆಯಿದೆ. ಜೊತೆಗೆ ಮಳೆಯ ಸಲುವಾಗಿ ಬೇರೆ ಗ್ರಾಮದ ಜನರು ರಂಗನಾಥನ ಉತ್ಸವ ಮೂರ್ತಿಯನ್ನು ತಮ್ಮ ಗ್ರಾಮಗಳಿಗೆ ಕರೆದುಕೊಂಡು ಹೋಗಿ ಪೂಜಿಸುವುದರಿಂದ ಮಳೆ, ಬೆಳೆ ಸಮೃದ್ಧವಾಗಿ ಬರುವುದೆಂಬ ನಂಬಿಕೆ ಇದೆ. ಅಲ್ಲದೆ ರೈತರಿಗೆ ರಂಗನಾಥನು ಬೆಳೆಗಳ ಸಂರಕ್ಷಕ ದೈವನಾಗಿದ್ದಾನೆ. ಹೊಲ ಬಿತ್ತುವ ಸಂದರ್ಭದಲ್ಲಿ ಮೊದಲು ಬಿತ್ತುವ ಕಾಳುಗಳನ್ನು ತಂದು ದೇವರಿಗೆ ಪೂಜೆಯನ್ನು ನೆರವೇರಿಸುತ್ತಾರೆ. ಬೆಳೆಯು ಚೆನ್ನಾಗಿ ಫಲಿಸಲಿ ಎಂದು ಬೇಡಿಕೊಂಡು ರೈತನು ತಾನು ಬೆಳೆದ, ಬೆಳೆಯ ಹೊಸ

ಫಸಲನ್ನು ತಪ್ಪದೇ ದೇವಾಲಯಕ್ಕೆ ತಂದು ಕೊಡುವ ಸಂಪ್ರದಾಯವಿದೆ. ಹೀಗೆ ಕೊಟ್ಟರೆ ಮುಂದಿನ ವರ್ಷವು ಸಮೃದ್ಧವಾಗಿ ಬೆಳೆ ಕೊಡುವನೆಂಬ ನಂಬಿಕೆ ಇದೆ.

ಕರ್ನಾಟಕದಾದ್ಯಂತ ರಂಗನನ್ನು ಪೂಜಿಸಿ ಹೂಅಪ್ಪಣೆ ಕೇಳುವ ಸಂಪ್ರದಾಯ ವ್ಯಾಪಕವಾಗಿ ನಡೆದುಕೊಂಡು ಬಂದಿದೆ. ಸ್ವಾಮಿಯ ಅಪ್ಪಣೆಯನ್ನು ಪಡೆಯದೆ ಜನಪದರು ಯಾವ ಮಹತ್ವದ ಕಾರ್ಯವನ್ನು ಕೈಗೊಳ್ಳಲಾರರು. ಜೊತೆಗೆ ಯಾವ ಕೆಲಸವನ್ನು ಮಾಡುವುದಿಲ್ಲ. ಸ್ವಾಮಿಯನ್ನು ಭಕ್ತಿಯಿಂದ ಪೂಜಿಸಿ ಹೂ ಅಪ್ಪಣೆ ಕೇಳಿದರೆ ಫಲಸಿಗುವುದೆಂಬ ನಂಬಿಕೆಯಿದೆ. ಯಾವ ಕೆಲಸವಾದರು ಸರಿ, ಅಂದರೆ ಮದುವೆ, ಮಕ್ಕಳು, ಉದ್ಯೋಗ, ಹೀಗೆ ಬದುಕಿನ ಕಷ್ಟ, ಸಮಸ್ಯೆಗಳಿಗೆ ಹೂಅಪ್ಪಣೆಯಿಂದ ಪರಿಹಾರ ಕೇಳಿಕೊಳ್ಳುವ ಭಕ್ತರಿಗೆ, ರಂಗನು ಅಭಯವನ್ನು ಕೊಡುವವನಾಗಿದ್ದಾನೆ. ಸ್ವಾಮಿಯನ್ನು ಪೂಜಿಸಿ ಭಕ್ತರ ಇಚ್ಛಾನುಸಾರ ಎಡ, ಬಲ ಹೂಅಪ್ಪಣೆ ಕೊಟ್ಟರೆ ಎಲ್ಲ ಕೆಲಸಗಳು ಯಶಸ್ಸಾಗುತ್ತವೆ ಎಂಬ ನಂಬಿಕೆ. ಇಲ್ಲಿ ರಂಗನಾಥನು ಮನೆಯ ಹಿರಿಯ ವ್ಯಕ್ತಿಯಂತೆ ಜನಸಮುದಾಯದಲ್ಲಿ ಗೋಚರಿಸಿಕೊಂಡಿದ್ದಾನೆ. ಹೂಅಪ್ಪಣೆ ಕೇಳುವಾಗ ಜನರು ರಂಗನಾಥನ ಜೊತೆ ಸಂಭಾಷಣೆಯ ಮೂಲಕ ಮಾತನಾಡುತ್ತಾರೆ. ಅಂದರೆ ಒಬ್ಬ ವ್ಯಕ್ತಿಯ ಜೊತೆ ನೇರವಾಗಿ ಮಾತನಾಡುವ ರೀತಿಯಲ್ಲಿರುತ್ತದೆ. ಇದರಿಂದ ರಂಗನಾಥನು ತಮ್ಮ ಜೊತೆ ಮಾತನಾಡುತ್ತಾನೆಂದು ಜನಪದರು ನಂಬಿದ್ದಾರೆ.

ಮುಖ್ಯವಾಗಿ ರಂಗನಾಥನು ಭವರೋಗ ನಿವಾರಿಸುವ ವೈದ್ಯನಾಗಿ ಕೆಲಸ ಮಾಡುವವನಾಗಿದ್ದಾನೆ. ಅನಾರೋಗ್ಯಕ್ಕೆ ಒಳಗಾದ ವ್ಯಕ್ತಿಗಳು ದೇವಾಲಯದಲ್ಲಿ ತಂಗುವ ಪದ್ಧತಿ ಹೆಚ್ಚಾಗಿ ಕಂಡುಬರುತ್ತದೆ. ಕ್ಷೇತ್ರಕಾರ್ಯ ಕೈಗೊಂಡಾಗ ಅನೇಕ ನಿದರ್ಶನಗಳು ದೊರೆತಿವೆ. ಅನಾರೋಗ್ಯನಾದವನು ಸ್ವಾಮಿಯು ಹೂಅಪ್ಪಣೆಯ ಮೂಲಕ ಅಥವಾ ಸ್ವಾಮಿಯ ಮಹಿಮೆಗೆ ಒಳಗಾದ ವ್ಯಕ್ತಿಯು ಹೇಳಿದಷ್ಟು ದಿನ ದೇವಾಲಯದಲ್ಲಿ ಮಡಿ, ನೇಮದಿಂದ ಉಳಿದುಕೊಂಡು ಸ್ವಾಮಿಯ ಸೇವೆಯನ್ನು ಕೈಕೊಳ್ಳಬೇಕು. ಇದರಿಂದ ಖಾಯಿಲೆಯು ವಾಸಿಯಾಗುತ್ತದೆಂಬ ನಂಬಿಕೆ ಅಪಾರ ಪ್ರಮಾಣದಲ್ಲಿದೆ. ಇವರು ಯಾವ ವೈದ್ಯಕೀಯ ಚಿಕಿತ್ಸೆಗೂ ಆಶ್ರಯಿಸಿರದೇ ಕೇವಲ ದೈವ ಭಕ್ತಿಯಲ್ಲೇ ಅರೋಗ್ಯವಂತರಾಗುವವರು. ಈ ನಂಬಿಕೆ ಮಹತ್ವದ್ದಾಗಿದೆ. ಪ್ರಸ್ತುತ ಚಿತ್ರದುರ್ಗ ಜಿಲ್ಲೆಯ ಹಾರಣಕಣಿವೆ ರಂಗನಾಥ ದೇವಾಲಯದಲ್ಲಿ ಹಾವು, ಚೇಳು, ವಿಷ ಹುಳುಗಳು ಕಡಿದರೆ ರಂಗನಾಥ ದೇವರ ಹೆಸರಿನಲ್ಲಿ ಔಷಧ ಕೊಡುವ ಪದ್ಧತಿ ಪ್ರಚಲಿತದಲ್ಲಿದೆ.

ಸ್ವಾಮಿಗೆ ಊರುಳು ಸೇವೆ, ಹೆಜ್ಜೆ ನಡೆ ಸೇವೆ ಮಾಡಿದರೆ ಅವರೆಲ್ಲ ಕಷ್ಟ ಪರಿಹರಿಸುತ್ತವೆ ಎಂಬ ನಂಬಿಕೆ ಪ್ರಚಲಿತದಲ್ಲಿದೆ. ಅಲ್ಲದೆ ಸಣ್ಣ ಮಕ್ಕಳ ತಲೆಕೂದಲವನ್ನು(ಮುಡಿ)ಕೊಡುವ ಪದ್ಧತಿಯು ಮಕ್ಕಳಿಗೆ ಒಳ್ಳೆಯದಾಗುತ್ತದೆಂಬ ನಂಬಿಕೆ. ಮಾಟ, ಮಂತ್ರ, ಭೂತಗಳಿಂದ

ನರಳುವವರು ರಂಗನಾಥ ದೇವಾಲಯಗಳಲ್ಲಿ ಬಂದು ನೆಲೆಸುತ್ತಾರೆ. ಇದರಿಂದ ಆ ಸಮಸ್ಯೆಗಳು ಪರಿಹಾರವಾಗುತ್ತವೆ ಎಂಬ ನಂಬಿಕೆಯಿದೆ. ಭಯ, ನಿರಾಶೆ, ಅಂಶಾತಿ ಮುಂತಾದ ನೊಂದ ಮನಸ್ಸುಗಳಿಗೆ ಶಾಂತಿ ನೀಡುವನೆಂಬ ನಂಬಿಕೆ ಇಂದಿಗೂ ಜನರಲ್ಲಿ ನೆಲೆಸಿದೆ.

ರಂಗನಾಥನು ಪವಾಡಪುರಷ ಎಂಬುದಾಗಿ ಜನರು ನಂಬಿಕೊಂಡಿದ್ದಾರೆ. ಜೊತೆಗೆ ರಂಗನಾಥನು ಬೇಟೆದೈವ ಎಂಬ ನಂಬಿಕೆ ಅಪಾರವಾಗಿದೆ. ಈ ಕುರಿತಾಗಿ ಅನೇಕ ಆಚರಣೆಗಳು ಪ್ರಸ್ತುತವು ಆಚರಣೆಯಲ್ಲಿವೆ. ಅಲ್ಲದೆ ರಂಗನು ಎಲ್ಲ ಜನಸಮುದಾಯಗಳಿಗೂ ಆರಾಧಕನಾಗಿದ್ದು, ರಕ್ಷಕನು, ಪ್ರೀತಿಸುವವನು ಆಗಿದ್ದಾನೆ. ಜೊತೆಗೆ ಶಿಕ್ಷಿಸುವವನು ಆಗಿದ್ದಾನೆ. ಸ್ವಾಮಿಯು ಭಕ್ತರನ್ನು ಕೈ ಹಿಡಿದು ನಡೆಸುವವನು, ಪ್ರೇರಕ ಶಕ್ತಿಯಾಗಿಯೂ, ವಾತ್ಸಲ್ಯ ತೋರುವವನಾಗಿಯೂ, ಪೂಜ್ಯ, ಪೂಜಕ, ಪೂಜಾಸಾಧನ ಅವನೇ ಆಗಿ ನೆಲೆಗೊಂಡಿದ್ದಾನೆಂಬ ನಂಬಿಕೆ ಭಕ್ತರಲ್ಲಿದೆ. ಶನಿವಾರವು ರಂಗನಾಥನ ಆರಾಧನಾ ದಿನವಾಗಿದೆ. ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ದೈವದ ಪೂಜೆಯನ್ನು ತಪ್ಪದೆ ಮಾಡುತ್ತಾರೆ. ಗ್ರಾಮಗಳಿಗೆ ತೆರಳಿ ಜಾತ್ರೆ, ಉತ್ಸವಗಳಲ್ಲಿ ಪಾಲ್ಗೋಳ್ಳುವುದರಿಂದ ದೈವದ ಕೃಪೆಗೆ ಪಾತ್ರರಾಗುತ್ತೇವೆ ಎಂಬ ನಂಬಿಕೆ ಜನಪದರಲ್ಲಿದೆ.

**ಆಚರಣೆಗಳು :**

ಕಾಡಿನಲ್ಲಿ ನೆಲೆಗೊಂಡಿದ್ದ ಅನಾದಿ ಮಾನವನಿಗೆ ಪ್ರಕೃತಿಯಲ್ಲಿನ ವೈಪರೀತ್ಯಗಳು ಅಸಮಾನ್ಯವೆನಿಸುತ್ತಿದ್ದವು. ಅವುಗಳ ಹಿಂದೆ ಅಡಗಿರುವ ಅಗೋಚರ ಶಕ್ತಿಯನ್ನು ಸಂಪ್ರೀತಗೊಳಿಸಿದರೆ ಜೀವನ ನಿರಾಂತಕವಾಗುವುದೆಂದು ಭಾವಿಸಿದ್ದನು. ಹೀಗೆ ನಿಸರ್ಗದ ಮಡಿಲಲ್ಲಿ ಮಾನವ ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತ ಸೋತು ಅದಕ್ಕೆ ಶರಣಾಗತನಾದ. ಈ ಹಿನ್ನಲೆಯಲ್ಲಿ ಆಶ್ಚರ್ಯ ಭಯಗಳನ್ನು ಕೆರಳಿಸಿದ ವಸ್ತುಗಳೆಲ್ಲವು ಪೂಜನೀಯವಾದವು. ಜೊತೆಗೆ ತನ್ನ ಬದುಕಿಗೆ ಪ್ರಕೃತಿಯ ಪ್ರತಿಯೊಂದು ಘಟನೆಯ ಹಿಂದಿರುವ ಮಹತ್ತರವಾದ ಶಕ್ತಿಯ ಬೆಂಬಲ ಅವಶ್ಯವೆಂದು ಮನಗೊಂಡನು. ಆ ಶಕ್ತಿಯನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದನು. ಹೀಗೆ ತನ್ನ ಕಲ್ಪನೆಯ ಆಳದಲ್ಲಿ ಅಡಗಿದ ದೈವಗಳಿಗೆ ಭಕ್ತಿ, ಗೌರವ, ಶ್ರದ್ಧೆಯಿಂದ ಆರಾಧಿಸುವುದರಲ್ಲಿ ತೊಡಗಿಕೊಂಡನು. ಇದರ ಪ್ರತಿಯಾಗಿ ಅನೇಕ ಆಚರಣೆಗಳನ್ನು ರೂಢಿಸಿಕೊಂಡನು.

ಹೀಗೆ ಅಸ್ತಿತ್ವಕ್ಕೆ ಬಂದ ಆಚರಣೆಗಳು ಜನಪದ ಜೀವನದ ಅವಿಭಾಜ್ಯ ಅಂಗವಾಗಿವೆ. ಲಿಖಿತ ಆಧಾರಗಳಿಲ್ಲದ ಸಂಸ್ಕೃತಿಯ ಅಧ್ಯಯನಕ್ಕೆ ಆಚರಣೆಗಳು ಮೂಲ ಆಧಾರವಾಗಿವೆ. ಪ್ರಸ್ತುತ ಅಧ್ಯಯನದ ರಂಗನಾಥ ಸಂಪ್ರದಾಯವು ಪರಂಪಾರಾನುಗತವಾಗಿ ಬದಲಾವಣೆಗೊಳ್ಳುತ್ತಾ, ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ನಿರಂತರವಾಗಿ ಸಾಗಿ ಬಂದಿದೆ. ರಂಗನಾಥ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಕರ್ನಾಟಕದ ೨೨ ಜಿಲ್ಲೆಗಳಲ್ಲಿ ವಿವಿಧ ಆಚರಣೆಗಳು ಕಂಡುಬರುತ್ತವೆ. ಈ

ಆಚರಣೆಗಳೇ ರಂಗನಾಥ ಸಂಪ್ರದಾಯವನ್ನು ಕಟ್ಟಿಕೊಡಲು ಬಹುಮುಖ್ಯ ಆಕರಗಳಾಗಿವೆ. ಕ್ಷೇತ್ರಕಾರ್ಯದ ಮೂಲಕ ಸಮಗ್ರವಾಗಿ ಸಂಗ್ರಹಿಸಲಾಗಿದ್ದು ಕೆಳಗಿನಂತಿವೆ.

ಮೊದಲೆ ತಿಳಿಸಿದಂತೆ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯವು ಆಹಾರ ಸಂಗ್ರಹಣೆ ಮತ್ತು ಬೇಟೆ, ಪಶುಪಾಲನೆ, ಕೃಷಿ ಮತ್ತು ಶಿಷ್ಟ ಸಂಪ್ರದಾಯದ ನೆಲೆಯಲ್ಲಿ ನೆಲೆಗೊಂಡು ಅಸ್ತಿತ್ವ ಪಡೆದುಕೊಂಡಿದೆ. ಹೀಗಾಗಿ ಈ ಸಂಪ್ರದಾಯದ ಆಚರಣೆಗಳು ಪ್ರಸ್ತುತ ಸಂದರ್ಭದಲ್ಲಿ ರಂಗನಾಥನ ಐದು ಹಂತಗಳನ್ನು ಒಳಗೊಂಡು ಮಿಶ್ರಗೊಂಡಿದೆ. ಅವುಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಪ್ರಸ್ತುತ ಅಧ್ಯಾಯದಲ್ಲಿ ಐದು ಹಂತದಲ್ಲಿಯು ನೋಡಲಾಗಿದೆ.

**ಆಹಾರ ಸಂಗ್ರಹಣೆ ಮತ್ತು ಬೇಟೆ ಸಂಬಂಧಿ ಸಂಕೇತಿಸುವ ಆಚರಣೆಗಳು :**

ಆದಿಮಾನವನ ವಾಸದ ನೆಲೆ ಸಂಪೂರ್ಣವಾಗಿ ಕಾಡಿನಲ್ಲೇ ನೆಲೆಗೊಂಡಿತ್ತು. ಇಲ್ಲಿ ಬೇಟೆಯೇ ಆತನ ಮೂಲ ಬದುಕು. ಪ್ರಸ್ತುತ ಅಧ್ಯಯನದ ರಂಗ ಅಥವಾ ರಂಗನಾಥ ಈ ಬೇಟೆಯ ಹಂತದಲ್ಲೇ ಅನಾದಿ ಮಾನವ ತನ್ನ ಜೊತೆ ಕಾಡಿನಲ್ಲಿ ಸೃಷ್ಟಿಸಿಕೊಂಡ ದೈವವಾಗಿದೆ. ಜೊತೆಗೆ ಬೇಟೆಗೆ ಹೊರಡುವಾಗ ಆತನನ್ನು ಪೂಜಿಸಿ ಹೋಗುವ ಪರಿಪಾಠ ಬೆಳೆಸಿಕೊಂಡಿದ್ದನು. ಇದರ ಸಂಪೂರ್ಣ ವಿವರಣೆಯನ್ನು ಅಧ್ಯಯನದ ಎರಡನೆಯ ಅಧ್ಯಾಯದಲ್ಲಿ ನೀಡಿದ್ದೇನೆ. ಪ್ರಸ್ತುತ ಇಲ್ಲಿ ಆಚರಣೆಯನ್ನು ಮಾತ್ರ ವಿವರಿಸಿದ್ದೇನೆ.

**ಬಿಲ್ಲುಗೂಡು ಸೇವೆ :**

ಚಿಕ್ಕಮಗಳೂರ ಜಿಲ್ಲೆಯಲ್ಲಿ ಈ ಆಚರಣೆ ಹೆಚ್ಚಾಗಿ ಕಂಡುಬರುತ್ತದೆ. ಬಿಲ್ಲುಗೂಡಿನ ಸೇವೆಯು ಸಾಮಾನ್ಯವಾಗಿ ದೇವಾಲಯದ ಮುಂಭಾಗದಲ್ಲಿ ನಡೆಯುತ್ತದೆ. ಇಲ್ಲವೆ ದೇವಾಲಯದ ಆವರಣದಲ್ಲಿ ಸ್ಥಳಾವಕಾಶ ಇರುವ ಕಡೆ ಆಚರಿಸುತ್ತಾರೆ. ಒಂದು ನಿರ್ದಿಷ್ಟ ಸ್ಥಳವನ್ನು ಸ್ವಚ್ಛಗೊಳಿಸಿ ಅಲ್ಲಿ ಪೂಜೆಗಾಗಿ ಎರಡು ದೊಡ್ಡ ಭೂತನಾಲಿಗೆಗಳನ್ನು (ಹರಿಗೆ) ಇಟ್ಟಿರುತ್ತಾರೆ. ಇವೆರಡರ ಮಧ್ಯ ಬಿಲ್ಲು, ಬಾಣಗಳನ್ನು ನಿಲ್ಲಿಸುತ್ತಾರೆ. ನಂತರ ಬೇಟೆಸೊಪ್ಪು, ಹೊಂಬಾಳೆ ಸೇರಿಸಿ ಕೆಂಪು ಬಟ್ಟೆಯಿಂದ ಭೂತನಾಲಿಗೆಗಳ ಹಿಂಭಾಗದ ಮಧ್ಯಕ್ಕೆ ಬಾಳೆಯ ದಿಂಡಿನಿಂದ ಅಥವಾ ಬಿದಿರಿನಿಂದ ಒಂದು ತ್ರಿಕೋನಾಕಾರದ ಗೂಡನ್ನು ಕಟ್ಟುತ್ತಾರೆ. ಭೂತನಾಲಿಗೆಗಳ ಮುಂದೆ ಶಂಖ, ಜಾಗಟೆ, ಭವನಾಸಿ, ಗೂಡಿನಗಂಟೆ, ಗರುಡಗಂಭ ಮುಂತಾದ ದೇವರ ಪರಿಕರಗಳನ್ನಿಟ್ಟು, ತಳಿಗೆ ಮಾಡಿದ ಅನ್ನ ಮತ್ತು ಹುರಳಿ ಗುಗ್ಗರಿಯನ್ನು ಭೂತನಾಲಿಗೆಗೆ ಎಡೆ ಹಾಕುತ್ತಾರೆ. ಭೂತನಾಲಿಗೆಗಳ ಸುತ್ತ ಸುಮಾರು ೧೦ ಅಡಿ ಅಂತರದಲ್ಲಿ ಮಡಿವಾಳರು ಮಡಿ ಬಟ್ಟೆಗಳನ್ನು ಮಡಿಕೆ ಮಾಡಿ ನಾಲ್ಕು ದಿಕ್ಕುಗಳಿಗೂ ಉದ್ದವಾಗಿ ಹಾಸಿರುತ್ತಾರೆ. ಅದರ ಮೇಲೆ ೧೦೧ ಎಡೆ ಮತ್ತು ಅಷ್ಟದಿಕ್ಪಾಲಕರಿಗೆ ಸುತ್ತ ಎಂಟು ಮೊಸರನ್ನ ಮತ್ತು ಹುರಳಿ ಗುಗ್ಗರಿ ಎಡೆ ಹಾಕಿರುತ್ತಾರೆ. ನಂತರ ತೆಂಗಿನಕಾಯಿ

ಒಡೆದು ಪೂಜೆ ಮಾಡುತ್ತಾರೆ. ಪೂಜೆಗೆ ಇಟ್ಟಿರುವ ಭೂತನಾಲಿಗೆಗಳಿಗೆ ಎದುರಾಗಿ ಸುಮಾರು ೨೦ ಅಡಿ ಅಂತರದಲ್ಲಿ ಎರಡು ಭಾಗದಲ್ಲಿ ಸ್ವಲ್ಪ ನೆಲವನ್ನು ತಗ್ಗುಮಾಡಿ ಕರಿಕಂಬಳಿ ಹಾಸುತ್ತಾರೆ. ಆ ಸ್ಥಳದಲ್ಲಿ ಹೊಸ ಮಣ್ಣಿನ ಮಡಿಕೆಯಲ್ಲಿ ಮಾಡಿದ (ತಳಿಗೆ) ಅನ್ನವನ್ನು ಎರಡು ಬಾಳೆ ಎಲೆಯಲ್ಲಿ ಹಾಕಿ ಹಾಲು, ಮೊಸರು, ತುಪ್ಪ, ಬೆಲ್ಲ, ಬಾಳೆ ಹಣ್ಣುಗಳನ್ನು ಒಟ್ಟಿಗೆ ಕಲಿಸಿ ಆ ಎರಡು ದೊಡ್ಡೆಡೆಯ ಮೇಲೆ ಮತ್ತೇ ಬಾಳೆ ಎಲೆಯನ್ನು ಮುಚ್ಚಿ, ಕಟ್ಟಿದ ಕಂಬಳಿ ತೆರೆಯನ್ನು ತೆಗೆಯುತ್ತಾರೆ.

ದೊಡ್ಡೆಡೆಯ ಮುಂಭಾಗದಲ್ಲಿ ಇಬ್ಬರು ದಾಸಯ್ಯಗಳು ನಾಮ ಬಳಿದುಕೊಂಡು ಕೆಂಪುವಸ್ತ್ರ ತಲೆಯ ಮೇಲೆ ಹೊದ್ದುಕೊಂಡು ದೊಡ್ಡೆಡೆಯ ಮುಂದೆ ಕುಳಿತುಕೊಳ್ಳುತ್ತಾರೆ. ದೇವರ ಪೂಜೆಯೊಂದಿಗೆ ಮತ್ತೊಬ್ಬ ದಾಸಯ್ಯ ಜಾಗಟೆ ಬಡಿದು ತಿರುಮಂತ್ರ ಹೇಳಿ ದೇವರನ್ನು ವಿವಿಧ ನಾಮಗಳಿಂದ ಕೊಂಡಾಡುತ್ತಾರೆ. ನಂತರ ಶಂಖ, ಜಾಗಟೆ, ಉರುಮೆ ಮೊದಲಾದ ವಾದ್ಯಗಳು ಹರ್ಷೋದ್ಗಾರವಾಗಿ ಮೊಳಗ್ಗುತ್ತಿರುವಾಗ ದಾಸಯ್ಯಗಳು ತಲೆಯ ಮೇಲಿನ ಕೆಂಪುವಸ್ತ್ರ ತೆಗೆಯುತ್ತಾರೆ. ಆಗ ದಾಸಯ್ಯಗಳು ಬೇಟೆ ಎಲೆಯಲ್ಲಿಟ್ಟ ಬೆಲ್ಲದ ತುಂಡನ್ನು ಬಾಯಲ್ಲಿ ಕಚ್ಚಿ ತಿಂದು, ಭೂತನಾಲಿಗೆಗಳ ಸುತ್ತ ಮೂರು ಸಾರಿ ಮಣೇವು (ಪ್ರದಕ್ಷಿಣೆ) ತಿರುಗಿ ದೊಡ್ಡಡೆಯ ಅನ್ನ ತಿನ್ನುತ್ತಾರೆ. ಅವರು ತಿನ್ನುವ ದೃಶ್ಯ ಅತ್ಯಂತ ವಿಸ್ಮಯವಾದುದು. ನಾಯಿಯಂತೆ ಎರಗಿ ಅವರೆ ಬಾಯಿ ಹಾಕಿ ಸ್ಪರ್ಧೆ ಮಾಡುತ್ತಾ ತಿನ್ನುತ್ತಾರೆ.

ಬಿಲ್ಲುಗೂಡಿನ ಪೂಜೆ ಎಂದರೆ ಇಲ್ಲಿ 'ಬಿಲ್ಲು' ಮತ್ತು 'ಗೂಡು' ಎಂಬ ಎರಡು ಶಬ್ದಗಳು ಕೂಡಿ 'ಬಿಲ್ಲುಗೂಡು' ಎಂದಾಗಿದೆ. ಮುಖ್ಯವಾಗಿ ಇದು ಬಿಲ್ಲು ಮತ್ತು ಬಾಣವನ್ನು ಬೇಟೆಗೆ ಬಳಸಿರುವುದನ್ನು ಸಂಕೇತಿಸುತ್ತದೆ. ಮೂಲದಲ್ಲಿ ಅನಾದಿ ಮಾನವ ನಡೆಸುವ ಪದ್ಧತಿಯು ಕಾಲಾಂತರದಲ್ಲಿ ಬದಲಾವಣೆಗೊಂಡು ಪ್ರಸ್ತುತ ಸಂಕೇತವಾಗಿ ಆಚರಿಸಲ್ಪಡುತ್ತಿದೆ. ಇಲ್ಲಿ ಎಲ್ಲ ವರ್ಗದ ಜನರು ಭಾಗವಹಿಸುತ್ತಾರೆ. ಮುಖ್ಯವಾಗಿ ಈ ಆಚರಣೆಯು ಬೇಟೆಯನ್ನು ಸಂಕೇತಿಸುತ್ತದೆ. ಇಲ್ಲಿ ಬಳಸಲಾಗುವ ಬಿಲ್ಲು, ಬಾಣ, ಭೂತದ ಹರಿಗೆ, ಬೇಟೆ ಸೊಪ್ಪು, ಕೆಂಪುವಸ್ತ್ರ, ಎಲ್ಲವು ಬೇಟೆಗೆ ಸಂಬಂಧಿಸಿದ ಸಂಕೇತಗಳಾಗಿವೆ. ನೇರವಾಗಿ ಬಲಿ ಆಚರಣೆ ಇಲ್ಲದಿದ್ದರೂ ಕೆಂಪುವಸ್ತ್ರವು ರಕ್ತದ ಸಂಕೇತವಾಗಿ ಬಳಕೆಯಾಗಿದೆ. ಇಲ್ಲಿ ಬಳಸುವ ಆಹಾರ ಪದಾರ್ಥಗಳು ಪಶುಪಾಲಕ ಸಂಸ್ಕೃತಿಯನ್ನು ಸೂಚಿಸುವುದಾದರೆ, ಶಂಖ, ಚಕ್ರ, ಭವನಾಸಿ, ಜಾಗಟೆ, ಗರುಡಸ್ತಂಭ, ಶ್ರೀವೈಷ್ಣವ ಧರ್ಮದ ಪ್ರಭಾವದಿಂದಾಗಿ ವೈಷ್ಣವೀಕರಣಗೊಂಡಿರುವ ವಿಷಯ ಸ್ಪಷ್ಟವಾಗಿ ಗೋಚರಿಸುತ್ತದೆ.

**ಬೇಟೆರಂಗನ ಸ್ಥಾಪನೆ :**

ಪ್ರಸ್ತುತ ಆಚರಣೆಯು ವಾಸ್ತವವಾಗಿ ನಡೆಯುತ್ತದೆ. ಇದು ಶಿವಮೊಗ್ಗ, ತೀರ್ಥಹಳ್ಳಿ, ಹೊಸನಗರ, ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ, ಶೃಂಗೇರಿ, ಮೂಡಿಗೆರೆ ಮತ್ತು ನರಸಿಂಹರಾಜಪುರ

ಮುಂತಾದ ಮಲೆನಾಡು ಪ್ರದೇಶಗಳಲ್ಲಿರುವ ಮಲೆನಾಡು ವೈಷ್ಣವ ಒಕ್ಕಲಿಗರು ಆಚರಿಸುತ್ತಾರೆ. ಪ್ರಾಚೀನವಾದ ಬೇಟೆ ತಂತ್ರ ವಿಧಾನಗಳೇ ಇವರಲ್ಲಿ ಇಂದಿಗೂ ಉಳಿದು ಬಂದಿರುವುದು ಆಶ್ಚರ್ಯವಾಗಿ ಕಾಣುತ್ತದೆ.

ಪ್ರಮುಖ ಬೇಟೆಗಾರರು ಒಂದೆಡೆ ಸೇರಿ ಬೇಟೆಗೆ ದಿನ ಮತ್ತು ಸ್ಥಳವನ್ನು ಗೊತ್ತುಮಾಡಿ ಆ ಸುತ್ತಿನ ಬೇಟೆಗಾರರೆಲ್ಲರಿಗೂ ತಿಳಿಸುವರು. ಬೇಟೆಗೆ ಹೋದ ಸಂದರ್ಭದಲ್ಲಿ ಬಿಲ್ಲಿನವರ ಬಿಲ್ಲಿಗೆ ಪ್ರಾಣಿ ಸಿಕ್ಕು ಸತ್ತಿರುವುದನ್ನು ತಿಳಿದುಕೊಂಡು ಬಿಲ್ಲಿನವರು, ಹಳುವಿನವರು (ಪಂಗಡಗಳು) ಬೇಟೆಯಾಡುವ ಜಾಗಕ್ಕೆ ಧಾವಿಸಿ ಹೋಗುತ್ತಾರೆ. ಎಲ್ಲರ ಸಮಕ್ಷಮ ಗೊತ್ತಾದ ಒಂದು ಸ್ಥಳಕ್ಕೆ ಹೋಗುತ್ತಾರೆ. ಅಲ್ಲಿ 'ಹಸುಗೆ' ಕಾರ್ಯ ನಡೆಸಲಾಗುವುದು. ಸೌದೆ ತರಲು ಕೆಲವರು, ಬೆಂಕಿ ಒಟ್ಟಲು ಕೆಲವರು, ಬಾಳೆ ಎಲೆಗಳನ್ನು ಒದಗಿಸಲು ಕೆಲವರು, ಪ್ರಾಣಿಯನ್ನು ಸುಡಲು ಕೆಲವರು ಹೀಗೆ ಹಸುಗೆಯ ಒಂದೊಂದು ಕೆಲಸವನ್ನು ಒಬ್ಬೊಬ್ಬರು ನಿರ್ವಹಿಸುತ್ತಾರೆ. ಪ್ರಾಣಿಯನ್ನು ಚರ್ಮ ಸುಲಿದು ಸ್ವಚ್ಚಗೊಳಿಸಿದ ನಂತರ ಕೊಚ್ಚಿ ಮಾಂಸ ಮಾಡುತ್ತಾರೆ. ಕಾಲು ಭಾಗ ಮಾಂಸವನ್ನು ಒಂದು ಪಾತ್ರೆಯಲ್ಲಿ ಹಾಕಿ ಉಪ್ಪು ಖಾರ ಮಿಶ್ರಮಾಡಿ 'ಹುರಿತುಂಡು' ಬೇಯಿಸುವರು. ಮಿಗಕ್ಕೆ ಈಡು ಹೊಡೆದು ಕೊಂದವನು ಅದರ ತೊಡೆ, ತಲೆ, ಒಂದು ಬೀವು, ಐದು ಬದಿ ಜಿಗ್ಗು ಇಷ್ಟನ್ನು ಒಂದು ಬುಟ್ಟಿಯಲ್ಲಿ ತುಂಬಿಸಿ ತಂದು ಫಲ ಕೊಡುವ ಮರದ ಬುಡದಲ್ಲಿರಿಸಿ ಬೇಟೆರಂಗನ ಪೂಜೆಗೆ ಅಣಿಯಾಗುವನು. ಸುತ್ತಲೂ ಒಂದು ಹಸೆ ಬರೆದು ಒಂದು ಕಲ್ಲನ್ನು ಸ್ಥಾಪಿಸಿ ಅದರ ಎದುರಿಗೆ ತನ್ನ ವಂಶದ ಐದು ಕುಲಗಳನ್ನು ಪ್ರತಿನಿಧಿಸುವ ಸಂಕೇತವಾಗಿ ಐದು ಜಾತಿಯ ಎಲೆಗಳನ್ನು ಹಾಸಿ, ಒಂದೊಂದು ಎಲೆಗೂ ಉಪ್ಪು ಸವರದೆ ಸುಟ್ಟ ಕರಕಲಕಡ್ಡಿ ತೊಳ್ಳೆಗಳ ತುಂಡನ್ನು ಬಡಿಸುವನು. ಮಾಂಸದ ಬುಟ್ಟಿಯ ಒಂದು ಮಗ್ಗುಲಲ್ಲಿ ಕೋವಿಯನ್ನು ನಿಲ್ಲಿಸಿ ಬೇಟೆಯಾಡುವ ಅವಕಾಶ ಮತ್ತೆ ಮತ್ತೆ ಬರಲಿ ಎಂದು ಹಾರೈಸುತ್ತಾ ಧೂಪ ಹಾಕುವನು. ಅವನ ಜೊತೆಯಲ್ಲಿ ಇನ್ನೂ ಕೆಲವರು ಧೂಪ ಹಾಕುವರು. ಅನಂತರ ಒಂದು 'ಹುಸಿಈಡು' ಹಾರಿಸಲಾಗುವುದು. ಬೇಟೆರಂಗನ ಪೂಜೆ ಮುಗಿದ ಮೇಲೆ ಎಲ್ಲರೂ 'ಹುರಿತುಂಡು' ಹಂಚಿಕೊಂಡು ತಿನ್ನುವರು. ಮಿಗವನ್ನು ಕೊಂದವನಿಗೆ ಬೇಟೆ ರಂಗನ ಪೂಜೆಗೆ ಉಪಯೋಗಿಸಿದ ಪ್ರಾಣಿಯ ತೊಡೆ, ಒಂದು ಬೀವು, ಐದು ಬದಿ ಜಿಗ್ಗು ಮತ್ತು ಹಿಂದಲೆ – ದೊಡ್ಡ ಪಾಲು ಕೊಡುತ್ತಾರೆ.

ಈ ಆಚರಣೆ ಮಹತ್ವದ್ದಾಗಿದ್ದು, ಪ್ರಸ್ತುತ ಸಂದರ್ಭದಲ್ಲಿ ಬೇಟೆಗಾಗಿ ಅನಾದಿ ಕಾಲದಿಂದಲೂ ಬಂದ ಆಚರಣೆಯನ್ನು ಮುಂದುವರೆಸಿಕೊಂಡು ಬಂದಿರುವುದು ವಿಶೇಷವಾಗಿದೆ. ಅದರಲ್ಲಿ ಇವರು ಬೇಟೆರಂಗನನ್ನು ಸ್ಥಾಪಿಸುವ ಪದ್ಧತಿಯು ರಂಗನಾಥ ಸಂಪ್ರದಾಯವನ್ನು ಕಟ್ಟಿಕೊಡಲು ಮುಖ್ಯವಾದ ಆಕರವಾಗಿದೆ.

**ನೂರೊಂದು ಎಡೆ ಸೇವೆ :**

ಪ್ರಸ್ತುತ ಆಚರಣೆಯು ಚಿತ್ರದುರ್ಗ, ತುಮಕೂರು, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ನಡೆಯುತ್ತದೆ. ಈ ಆಚರಣೆಯು ಜಾತ್ರೆಯ ಸಂದರ್ಭದಲ್ಲಿ ಮತ್ತು ಭಕ್ತರು ತಮ್ಮ ಇಷ್ಟಾರ್ಥ ಸಿದ್ಧಿಯಾಗಿ ಬೇಡಿಕೊಂಡ ಸಂದರ್ಭದಲ್ಲಿ ವೈಯಕ್ತಿಕವಾಗಿಯೂ ಆಚರಿಸಲ್ಪಡುತ್ತದೆ. ದೇವಾಲಯದ ಆವರಣದಲ್ಲಿ ಗೊತ್ತುಪಡಿಸಿದ ಸ್ಥಳವನ್ನು ಶುದ್ಧಗೊಳಿಸಿ ನಂತರ ಹಸೆ ಬಿಡಿಸಿ, ಅದರ ಮೇಲೆ ಕರಿಕಂಬಳಿಯನ್ನು ಹಾಯಿಸುತ್ತಾರೆ. ಅದರ ಮೇಲೆ ದಾಸಪ್ಪನು ರಂಗನಾಥನನ್ನು ಸಂಕೇತಿಸುವ ಶಂಖ, ಜಾಗಟೆ, ಭವನಾಸಿ ಮುಂತಾದವುಗಳನ್ನು ಇಡುತ್ತಾನೆ. ನಂತರ ಬೇಟೆಸೊಪ್ಪು, ಕಾರೇಮುಳ್ಳುಗಳನ್ನು ಬಿಲ್ಲು ಬಾಣಗಳನ್ನು ಇಟ್ಟು ಪೂಜೆಗೆ ಅಣಿಯಾಗುತ್ತಾನೆ. ಪೂಜೆಯ ನಂತರ ದೇವರ ಸಮ್ಮುಖದಲ್ಲಿ ಬಾಳೆ ಅಥವಾ ಮುತಗದ ಎಲೆಯನ್ನು ೧೦೧ ಎಡೆಮಾಡಲು ಸಿದ್ಧಗೊಳಿಸುತ್ತಾನೆ. ೧೦೧ ಎಲೆಗಳನ್ನು ನೆಲೆದ ಮೇಲೆ ಹಾಕಿ ಅದರಲ್ಲಿ ತೆಂಗಿನಕಾಯಿ ಚೂರು, ಮಂಡಕ್ಕಿ, ನೆನೆಹಾಕಿದ ಕಡಲೆ, ಬೆಲ್ಲ, ಅಡಕೆ, ಬಾಳೆಹಣ್ಣು ಮುಂತಾದ ಪದಾರ್ಥಗಳನ್ನು ಹಾಕಿ ಎಡೆ ಸಿದ್ಧಗೊಳಿಸುತ್ತಾನೆ. ನೆರೆದ ಗ್ರಾಮದ ಭಕ್ತರೆಲ್ಲರು ಸೇರಿ ಸ್ವಾಮಿಯ ಗೋವಿಂದ ಹಾಕುತ್ತಾ, ಪೂಜೆಯನ್ನು ಕೈಗೊಂಡು ಪೂರ್ಣಗೊಳಿಸುತ್ತಾರೆ. ಇಲ್ಲಿ ದಾಸಪ್ಪನು ಪಂಜಿನ ಸೇವೆ, ಮಣೇವು ಸೇವೆ ಮಾಡುತ್ತಾನೆ. ೧೦೧ ಎಡೆಗಳನ್ನು ಸೂಚಿಸಿದ ಆಯಾ ವ್ಯಕ್ತಿಗಳು ತೆಗೆದುಕೊಳ್ಳುತ್ತಾರೆ. ಬೇಟೆಗೆ ಸಂಬಂಧಿಸಿದ ಆಚರಣೆಯಾದರು ಇಲ್ಲಿ ೧೦೧ ಎಡೆ ಹಾಕುವುದು ವಿಶೇಷವಾಗಿದೆ. ಅನಾದಿ ಮಾನವ ತನ್ನ ಬೇಟೆಯ ನಂತರ ಎಲ್ಲರು ತಮ್ಮ ಪಾಲುಗಳನ್ನು ಹಂಚಿಕೊಳ್ಳುವ ಪದ್ಧತಿಯು ಇಲ್ಲಿ ವ್ಯಕ್ತವಾಗುತ್ತದೆ. ಹೀಗೆ ೧೦೧ ಎಡೆ ಮಾಡಿ ನೇಮಿಸಿದ ವ್ಯಕ್ತಿಗಳು ಎಲ್ಲರು ಒಂದೊಂದು ಎಡೆಯನ್ನು ತೆಗೆದುಕೊಳ್ಳುವುದು ಗಮನಾರ್ಹವಾಗಿದೆ.

**ದೊಡ್ಡ ಎಡೆ ಸೇವೆ :**

ಪ್ರಸ್ತುತ ಆಚರಣೆಯು ಚಿತ್ರದುರ್ಗ, ತುಮಕೂರು, ಶಿವಮೊಗ್ಗ ಜಿಲ್ಲೆಯಲ್ಲಿ ಹೆಚ್ಚಿನ ರೀತಿಯಲ್ಲಿ ಕಂಡುಬರುತ್ತದೆ. ಈ ಆಚರಣೆಯು ಭಕ್ತರ ಇಚ್ಛಾನುಸಾರ, ಮತ್ತು ಜಾತ್ರೆಯ ಸಂದರ್ಭದಲ್ಲಿ ತಪ್ಪದೇ ನಡೆಯುವ ಪದ್ಧತಿಯಾಗಿದೆ. ದೇವಾಲಯದ ಮುಂಭಾಗದಲ್ಲಿ ದೊಡ್ಡದಾದ ವೃತ್ತಾಕಾರದ ಒಂದು ಸ್ಥಳವನ್ನು ಇಲ್ಲವೆ ಕಲ್ಲನ್ನು ಬಳಸಿಕೊಂಡು ಅದರ ಮೇಲೆ ಎಡೆ ಹಾಕುತ್ತಾರೆ. ಅನ್ನ, ಬಾಳೆಹಣ್ಣು, ಹಾಲು, ತುಪ್ಪ, ತೆಂಗಿನಕಾಯಿ ಹೋಳು, ದ್ರಾಕ್ಷಿ, ಗೋಡಂಬಿ, ಬಾದಾಮಿ ಮುಂತಾದ ಪದಾರ್ಥಗಳನ್ನು ಸೇರಿಸಿ ಗೊತ್ತುಪಡಿಸಿದ ಸ್ಥಳದಲ್ಲಿ ದೊಡ್ಡದಾದ ಎಡೆ ಹಾಕುತ್ತಾರೆ. ನಂತರ ಎಲ್ಲರೂ ಸೇರಿ ರಂಗನಾಥನನ್ನು ಪೂಜಿಸುತ್ತಾರೆ. ಹಾಕಿರುವ ಎಡೆಯನ್ನು ರಂಗನಾಥನಿಗೆ ದೂರದಿಂದಲೇ ನೈವೇದ್ಯ ಅರ್ಪಿಸುತ್ತಾರೆ. ನಂತರ ಎಡೆಯ ಮುಂದೆ ದೊಡ್ಡದಾದ ಎರಡು

ಭೂತನಾಲಿಗೆಗಳನ್ನು, ಬೇಟೆಮರ, ಕಾರೇಗಿಡವನ್ನು ಇಟ್ಟು ಪೂಜಿಸುತ್ತಾರೆ. ನಂತರ ಭೂತಪ್ಪನು ಅಂದರೆ ದಾಸಯ್ಯನು ಕುಣಿದು ಕುಣಿದು ಆವೇಶ ಭರಿತನಾಗಿ ಬಡಿಸಿದ ಎಡೆಯನ್ನು ಪೂಜಿಸಿ, ಮೂರು ಸುತ್ತ ಪ್ರದಕ್ಷಿಣೆ ಹಾಕುತ್ತಾನೆ. ನಂತರ ತನಗೆ ಹೊಟ್ಟೆ ತುಂಬುವಷ್ಟು ಆ ಎಡೆಯನ್ನು ಎರಡು ಕೈಯಿಂದ ಆವೇಶ ಭರಿತನಾಗಿ ತಿನ್ನುತ್ತಾನೆ. ಆವೇಶದಲ್ಲಿ ಭೂತಪ್ಪಗಳು ಒಬ್ಬ ವ್ಯಕ್ತಿ ತಿನ್ನುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ತಿನ್ನುತ್ತಾನೆ. ಈ ರೀತಿಯ ಆಚರಣೆಯು ಬೆರಗನ್ನು ಉಂಟು ಮಾಡುತ್ತದೆ. ಆಶ್ಚರ್ಯವೆಂದರೆ ಇಷ್ಟು 'ದೊಡ್ಡ ಎಡೆ' ಗಳನ್ನು ಸೇವಿಸುವ ದಾಸಪ್ಪಗಳು, ಮನೆಗೆ ಹೋಗಿ ತಾವೇನು ತಿಂದಿಲ್ಲವೆಂಬಂತೆ ಮನೆಯವರ ಜೊತೆ ಪುನಃ ತಮ್ಮ ಪಾಲಿನ ಊಟ ಮಾಡುತ್ತಾರೆ. ಕಾರಣ ತಾವು ಮಾಡಿರುವ ಊಟ ಎಲ್ಲವೂ ಭೂತಪ್ಪಗಳ ಹೊಟ್ಟೆಗೆ ಸೇರಿರುತ್ತದೆ. ನಮ್ಮ ಹಸಿವು ನೀಗಿರುವುದಿಲ್ಲವೆನ್ನುತ್ತಾರೆ. ಬಹುಶಃ ಬೇಟೆ ದೊರೆತಾಗ ಸಿಗುವ ಖುಷಿಯನ್ನು ಸಂಕೇತಿಸುವಂತೆ ಕಂಡುಬರುತ್ತದೆ.

ಪ್ರಸ್ತುತ ಬೇಟೆ ಸಂಬಂಧಿ ಆಚರಣೆಗಳು ಕಾಲಾಂತರದಲ್ಲಿ ಬದಲಾವಣೆಗೆ ಒಳಗಾಗುತ್ತಾ ಬಂದರು, ಮೂಲದಲ್ಲಿ ಅವು ಬೇಟೆ ಸಂಸ್ಕೃತಿಯ ರಂಗನನ್ನು ಸೂಚಿಸುವ ಸಂಕೇತಗಳಾಗಿ ಉಳಿದಿವೆ. ಇಲ್ಲಿ ಬಳಸುವ ಬಿಲ್ಲು, ಬಾಣ, ಬೇಟೆ ಮರ, ಕಾರೇಗಿಡ, ಭೂತದ ಹರಿಗೆಗಳು, ಎಲ್ಲವೂ ಬೇಟೆಯನ್ನೇ ಸೂಚಿಸುವ ವಸ್ತುಗಳಾಗಿವೆ. ಕಾಲಕ್ಕೆ ತಕ್ಕ ಹಾಗೇ ಆಚರಣೆಗಳಲ್ಲಿ ಬದಲಾವಣೆಯಾಗಿದ್ದು, ಮಾಂಸಾಹಾರವನ್ನು ಕೈಬಿಟ್ಟು, ಜನಪದರು ಹೆಚ್ಚಾಗಿ ಸಸ್ಯಾಹಾರದ ಪದಾರ್ಥಗಳನ್ನು ಬಳಸುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಆದರೂ ಈ ಆಚರಣೆಗಳು ಬೇಟೆಯನ್ನು ಸಂಕೇತಿಸುವಲ್ಲಿ ಹಿಂದೆ ಬಿದ್ದಿಲ್ಲ ಎಂಬುವುದು ಸ್ಪಷ್ಟವಾಗಿ ಕಂಡುಬರುತ್ತದೆ.

**ಪಶುಪಾಲಕ ಮತ್ತು ಕೃಷಿ ಹಂತದ ರಂಗನನ್ನು ಸಂಕೇತಿಸುವ ಆಚರಣೆಗಳು :**

ಬುಡಕಟ್ಟು ಸಂಸ್ಕೃತಿಯಲ್ಲಿ ಕಾಲಿಟ್ಟ ಅನಾದಿ ಮಾನವ ಹಂತ ಹಂತವಾಗಿ ಕಾಡಿನಿಂದ ಬದಲಾವಣೆಗೊಳಗಾಗುತ್ತಾ ಮೂಲ ಬೇಟೆಯ ಕಸುಬಿನ ಜೊತೆಗೆ ಪಶುಪಾಲನೆ, ಕೃಷಿಯಂತಹ ವೃತ್ತಿಗಳಲ್ಲಿ ತೊಡಗಿಕೊಳ್ಳುತ್ತಾನೆ. ಇಲ್ಲಿ ತನ್ನ ಮೂಲ ಬೇಟೆ ದೈವದ ಜೊತೆಗೆ, ದೈನಂದಿನ ಜೀವನಕ್ಕೆ ಸಹಾಯಕವಾದ ವಸ್ತುಗಳಲ್ಲಿ ದೈವೀ ಭಾವನೆ ಕಂಡುಕೊಂಡನು. ಹೀಗಾಗಿ ಮೂಲ ಬೇಟೆರಂಗನು ಪಶುಪಾಲಕರ ಇತರ ದೈವಗಳ ಜೊತೆಗೆ ಬೆರೆತುಕೊಂಡು ಬದಲಾವಣೆಗೊಳಗಾಗಿ ನೆಲೆಗೊಂಡನು. ಜೊತೆಗೆ ಪಶುಪಾಲಕ ಸಂಸ್ಕೃತಿಯನ್ನು ರೂಢಿಸಿಕೊಂಡ ಸಂದರ್ಭದಲ್ಲಿ ಬುಡಕಟ್ಟು ಜನರು ತಮ್ಮ ಪಶುಸಂಪತ್ತಿಗೆ ಆಸರೆಯಾದ ಬೆಟ್ಟ, ಗುಡ್ಡ, ಪರ್ವತಗಳ ಬಗ್ಗೆ ಭಯ, ಭಕ್ತಿ ಬೆಳೆಸಿಕೊಂಡಿದ್ದರಲ್ಲದೆ, ತಾವು ನೆಲೆನಿಂತ ಪರಿಸರದಲ್ಲಿ ರಂಗ, ರಂಗಪ್ಪನನ್ನು ತಮ್ಮ ಪಶುಪಾಲನಾ ದೈವವಾಗಿ ನೆಲೆಸಿಕೊಂಡರು. ಹೀಗಾಗಿ ಆತನ ಹೆಚ್ಚಿನ ಆರಾಧನಾ ನೆಲೆಗಳು ಬೆಟ್ಟ-ಗುಡ್ಡ, ಗವಿ,

ನದಿ, ಹಳ್ಳ, ಕೊಳ್ಳ ಪರಿಸರದಲ್ಲಿ ನೆಲೆಗೊಂಡಿರುವುದು ಕಂಡುಬರುತ್ತದೆ. ಪಶುಪಾಲಕರು ತನ್ನ ಬದುಕಿನ ಒಂದು ಭಾಗವಾಗಿ ರಂಗನಾಥನನ್ನು ಕಂಡು ಆರಾಧಿಸುತ್ತಾ, ಅನೇಕ ಆಚರಣೆಗಳನ್ನು ರೂಢಿಸಿಕೊಂಡರು. ಅಲ್ಲದೆ ಪ್ರಸ್ತುತವು ನಿರಂತರವಾಗಿ ಆಚರಣೆಗಳಲ್ಲಿ ಮುಂದುವರೆಸಿಕೊಂಡು ಬಂದಿದ್ದಾರೆ. ಅವು ಕೆಳಕಂಡಂತಿವೆ.

**ಗುಗ್ಗರಿ ಸೇವೆ :**

ಪಶುಪಾಲಕರು ಧಾನ್ಯವನ್ನು ಉಪಯೋಗಿಸುವ ಮುನ್ನ ಅದಕ್ಕೊಂದು ಆಚರಣೆ ನಡೆಸುವ ಕ್ರಮವನ್ನು ದೈವ ಸಮ್ಮುಖದಲ್ಲಿ ಕಂಡುಕೊಂಡಿದ್ದಾರೆ. ಅದೇ ಗುಗ್ಗರಿ ಸೇವೆ. ಈ ಆಚರಣೆಯು ಪ್ರಸ್ತುತ ಕರ್ನಾಟಕದ ರಂಗನಾಥನ ಎಲ್ಲ ನೆಲೆಗಳಲ್ಲಿಯೂ ನಿರಂತರವಾಗಿ ನಡೆಯುತ್ತಿದೆ. ರೈತರು ತಾವು ಬೆಳೆದ ಕಾಳುಗಳನ್ನು ಅಂದರೆ ಮುಖ್ಯವಾಗಿ ಹುರುಳಿ ಕಾಳುಗಳನ್ನು ಜೊತೆಗೆ ತೊಗರೆ, ಕಡೆಲೆ, ಮುಂತಾದ ಕಾಳನ್ನು ಬಳಸಿ, ಕುದಿಸಿ ಜಾತ್ರೆಯ ಸಂದರ್ಭದಲ್ಲಿ ದೇವರಿಗೆ ನೈವೇದ್ಯ ಮಾಡುತ್ತಾರೆ. ಇದಕ್ಕೆ ಗುಗ್ಗರಿ ಸೇವೆ ಎಂದು ಕರೆಯುತ್ತಾರೆ. ಅಲ್ಲದೆ ಕಡ್ಡಾಯವಾಗಿ ಜಾತ್ರೆಯ ಸಂದರ್ಭದಲ್ಲಿ ಹಂಚುತ್ತಾರೆ. ಭಾರತ ಹುಣ್ಣಿಮೆಯಲ್ಲಿ ವಿಶೇಷವಾಗಿ ನಡೆಯುವ ಆಚರಣೆ ಇದ್ದಾಗಿದ್ದು, ಹುರಳಿಯು ದೇಹ ಸದೃಢವಾಗುವಿಕೆಗೆ ಸಹಾಯಕವಾಗುವ ಮಹತ್ವವನ್ನು ಅರಿತವರಾಗಿದ್ದರು ಎಂದು ತಿಳಿದುಬರುತ್ತದೆ. ಅಲ್ಲದೆ ತಾವು ಬೆಳೆದ ಹೊಸ ಬೆಳೆಯನ್ನು ದೇವರಿಗೂ ಅರ್ಪಿಸುವ ಭಕ್ತಿಯು ಜೊತೆಗೆ ಆನಂದವು ಕಂಡುಬರುತ್ತದೆ.

**ಅನ್ನ ಸಂತರ್ಪಣೆ :**

ಆಹಾರ ಮೂಲವಾದ ಅಕ್ಕಿಗೆ ಜನಪದರ ಆಚರಣೆಯಲ್ಲಿ ಪ್ರಮುಖ ಸ್ಥಾನವಿದೆ. ಭಕ್ತರನ್ನು ಅನ್ನದಿಂದ ಸಂತೃಪ್ತಿಸಿದರೆ ದೇವರು ಸಂಪ್ರೀತನಾಗುತ್ತಾನೆಂಬ ನಂಬಿಕೆ ಇಂದಿಗೂ ಪ್ರಬಲವಾಗಿದೆ. ಹೀಗಾಗಿ ರಂಗನಾಥ ದೇವಾಲಯದಲ್ಲಿ ಪಶುಪಾಲಕರು ತಪ್ಪದೇ ವರ್ಷಕೊಂದು ಸಾರಿ ಈ ಸೇವೆಯನ್ನು ಆಚರಿಸುತ್ತಾ ಬಂದಿದ್ದಾರೆ. ಗ್ರಾಮದವರು, ಪರಗ್ರಾಮಗಳಲ್ಲಿಯ ಜನರೆಲ್ಲರೂ ಸೇರಿ ತಾವು ಬೆಳೆದ ಆಹಾರ ಪದಾರ್ಥಗಳನ್ನು ದೇವರಿಗೆ ದಾನ ನೀಡುವ ಮೂಲಕ ಸಂಗ್ರಹಿಸಿರುತ್ತಾರೆ. ನಂತರ ಆ ಪದಾರ್ಥಗಳನ್ನು ಬಳಸಿಕೊಂಡು ಅಡುಗೆ ಮಾಡಿ ಎಲ್ಲರು ಸೇರಿ ಊಟ ಮಾಡುತ್ತಾರೆ. ರಂಗಸ್ವಾಮಿಯು ಉತ್ಸವಪ್ರಿಯ ದೇವರಾಗಿರುವಂತೆಯೇ, ಅನ್ನ ದಾಸೋಹ ಪ್ರಿಯನೂ ಆಗಿರುವನೆಂಬುದಕ್ಕೆ ಅನೇಕ ಆಚರಣೆಗಳು ಸಾಕ್ಷಿಯಾಗಿವೆ. ರಂಗಸ್ವಾಮಿ ದೇವರು ಒಕ್ಕಲು-ಭಕ್ತರು ಸ್ವಾಮಿಗೆ ಯಾವುದೇ ಹರಕೆ ಪೂಜೆ ಸಲ್ಲಿಸುವಾಗಲೂ 'ಎಡೆ' 'ಅನ್ನದಾನ' ಮಾಡುವುದು ವಾಡಿಕೆಯಾಗಿದೆ. ರಂಗನಿಗೆ ಸೇವೆ ಮಾಡುವುದಿದ್ದರೆ ಅನ್ನ ದಾಸೋಹ ಸೇವೆ ಮಾಡು ಎಂಬ ಮಾತು ಮನೆಮಾತಾಗಿದೆ. ಉತ್ಸವಕ್ಕಿಂತ ಅನ್ನದಾಸೋಹ ಮಾಡಿಸುವುದು ಈ

ದೇವರಿಗೆ ಹೆಚ್ಚು ಪ್ರಿಯವಾದ ಸೇವೆ. ಅಪ್ಪಣೆ ಕೇಳಲು ಬರುವವರು ಎಲ್ಲ ವಿಶೇಷ ಸಂದರ್ಭಗಳಲ್ಲಿ ಮುಡಿ ತೆಗೆಸುವ ಸೇವೆಗೆ ಬಂದಾಗ ಈ ಎಲ್ಲ ಸಂದರ್ಭದಲ್ಲಿ ಅನ್ನದಾಸೋಹವು ನಡೆಯುವುದು ಕಡ್ಡಾಯವಾಗಿದೆ. ಈ ಆಚರಣೆಯು ದೇವರ ಹೆಸರಿನಲ್ಲಿ ನಡೆಯುವದಾದರು, ಜನಸಮುದಾಯದಲ್ಲಿ ಒಗ್ಗೂಡುವಿಕೆ, ಸಾಮರಸ್ಯ, ಸಹಕಾರಕ್ಕೆ ಪ್ರತೀಕವಾಗಿ ಕಂಡುಬರುತ್ತದೆ.

**ಮಡಿಲಕ್ಕಿ ಸೇವೆ :**

ಪಶುಪಾಲಕರು ಮುಖ್ಯವಾಗಿ ಜನ, ಜಾನುವಾರುಗಳು ರೋಗಗಳಿಗೆ ತುತ್ತಾದಾಗ, ಮಳೆ ಬಾರದಿದ್ದಾಗ, ವಿಶೇಷವಾಗಿ ರಂಗನಾಥ ದೇವಾಲಯಕ್ಕೆ ಮಡಿಲಕ್ಕಿಯನ್ನು ಅರ್ಪಿಸುತ್ತಾರೆ. ತಮ್ಮ ಸಾಮರ್ಥ್ಯಕ್ಕೆ ತಕ್ಕ ಹಾಗೆ ಆಹಾರ ಪದಾರ್ಥಗಳನ್ನು ಅದರಲ್ಲೂ ಮುಖ್ಯವಾಗಿ ಅಕ್ಕಿಯನ್ನು ಕೊಡುವುದು ವಿಶೇಷವಾಗಿದೆ. ತಮಗೆ ಒದಗಿ ಬಂದ ಸಮಸ್ಯೆಗೆ ಪರಿಹಾರ ಕೊಡಬೇಕೆಂದು ರಂಗನಾಥನನ್ನು ಬೇಡಿಕೊಂಡು, ದೇವಾಲಯಕ್ಕೆ ಎಲ್ಲ ಪದಾರ್ಥಗಳನ್ನು ಸೇರಿಸಿ ದಾನ ನೀಡುತ್ತಾರೆ. ಇದೇ ಮಡಿಲಕ್ಕಿ ಸೇವೆ. ಅಲ್ಲದೆ ತುಮಕೂರು ಜಿಲ್ಲೆಯ ಹೆಗ್ಗೆರೆಯಲ್ಲಿ ಕೆಂಪಮ್ಮನ ಕೆರೆ ತುಂಬಿದ ವರ್ಷ, ಒಂದು ಕರೆ ಗದ್ದೆಗೆ ಹತ್ತು ಸೇರು ಭತ್ತವನ್ನು ಶ್ರೀಗವಿರಂಗನಾಥಸ್ವಾಮಿಗಾಗಿ ಮೀಸಲು ತೆಗೆಯುವರು. ಇದನ್ನು 'ದೇವರ ಭತ್ತ' ಎನ್ನವರು. ಹೀಗೆ ಎತ್ತಿದ ಭತ್ತವು ಸುಮಾರು ೨೫-೩೦ ಚೀಲದಷ್ಟಾಗುವುದು. ಎಲ್ಲವನ್ನು ಅಕ್ಕಿ ಮಾಡಿಸಿ ಗವಿರಂಗನಾಥಸ್ವಾಮಿಯನ್ನು ಹೆಗ್ಗೆರೆಯ ಸಂಪ್ರದಾಯದಂತೆ ಗ್ರಾಮಕ್ಕೆ ಕರೆತಂದು, ಸ್ವಾಮಿಗೆ 'ನೂರೊಂದು ಎಡೆ' ಹಾಕಿ ಎಲ್ಲ ಜನರಿಗೂ ಅನ್ನ ದಾಸೋಹ ಮಾಡುತ್ತಾರೆ. ಈ ಆಚರಣೆಯು ಹೆಚ್ಚಿನ ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತದೆ. ಪ್ರಸ್ತುತ ಆಚರಣೆಗಳ ಮೂಲ ಉದ್ದೇಶ ಧಾನ್ಯ ಮತ್ತು ಪಶುಸಂಪತ್ತು ಸಮೃದ್ಧಿಯಾಗಬೇಕು. ಜನಜಾನುವಾರುಗಳು ರೋಗದಿಂದ ಮುಕ್ತರಾಗಬೇಕು, ಕ್ರೂರಮೃಗಗಳೊಂದಿಗೆ ಸಮನ್ವಯ ಸಾಧಿಸಬೇಕು ಎನ್ನುವ ಆಶಯದಲ್ಲಿ ಆಚರಣೆಯಲ್ಲಿವೆ.

**ಮೀಸಲು ಸೇವೆ :**

ಪಶುಪಾಲಕರು ತಮ್ಮ ಮೂಲ ಸಂಪತ್ತಾದ ಜಾನುವಾರುಗಳ ರಕ್ಷಣೆಗಾಗಿ, ರಂಗನಾಥ ದೈವದಲ್ಲಿ ಬೇಡಿಕೊಂಡು ಮೀಸಲು ಅರ್ಪಿಸುವವರು. ಮುಖ್ಯವಾಗಿ ರಂಗನಾಥನು ಪಶುಗಳ ರಕ್ಷಕನಾಗಿದ್ದಾನೆಂದು ಜನಪದರು ನಂಬಿದ್ದಾರೆ. ಇಲ್ಲಿ ಹಾಲು ತುಪ್ಪ, ಗೀಣ್ಣು ಮೊದಲಾದ ಪದಾರ್ಥಗಳನ್ನು ದೇವರಿಗೆ ಮೀಸಲಾಗಿ ಅರ್ಪಿಸುತ್ತಾರೆ. ಕರು ಹಾಕಿದ ಹಸುವಿನ ಮೊದಲ ಹಾಲಿನ ನೈವೇದ್ಯವು ಜೊತೆಗೆ ಗೀಬು ರಂಗನಾಥನ ವಿಶೇಷ ನೈವೇದ್ಯವಾಗಿದೆ. ಹಾಲನ್ನು ಕರೆದು ಅದರಿಂದ ತಯಾರಿಸಿದ ತುಪ್ಪವನ್ನು ದೇವರಿಗೆ ದೀಪಕ್ಕಾಗಿ ನೀಡುತ್ತಾರೆ. ಈ ಆಚರಣೆಯು ಕಡ್ಡಾಯವಾಗಿ ನಡೆಯುವಂತದಾಗಿದ್ದು ಹೈನು ಪದಾರ್ಥಗಳು ಪಶುಪಾಲಕರ ವರ್ಷದ ಸಮೃದ್ಧಿಯ ಕುರುವಾಗಿ ಇಂದಿಗೂ ಉಳಿದುಕೊಂಡು ಆಚರಣೆಯಲ್ಲಿವೆ.

**ಗಂಡಸಾರತಿ ಸೇವೆ :**

ರಂಗನಾಥನ ಜಾತ್ರೆಯ ಸಮಯದಲ್ಲಿ ಗೋಧಿ ಹಿಟ್ಟಿನಿಂದ ಒಂದು ತಟ್ಟೆಯ ಆಕಾರ ಗಾತ್ರದಲ್ಲಿ ದೀಪದ ಹಣತೆಗಳನ್ನು ಮಾಡುತ್ತಾರೆ. ಅದರಲ್ಲಿ ದೀಪ ಹಚ್ಚಿ ಅದನ್ನು ಒಂದು ತಟ್ಟೆಯಲ್ಲಿ ಅಲಂಕರಿಸಿಕೊಳ್ಳುತ್ತಾರೆ. ನಂತರ ವಾದ್ಯಸಮೇತ ಮೆರವಣಿಗೆಯಲ್ಲಿ ಗ್ರಾಮದ ಎಲ್ಲ ಪುರುಷರು ತಲೆಯ ಮೇಲೆ ಹೊತ್ತುಕೊಂಡು ರಂಗನಾಥ ದೇವಾಲಯದ ಬೆಟ್ಟವನ್ನು ಹತ್ತಿ ಬಂದು ದೇವರಿಗೆ ಆರತಿ ಬೆಳಗುತ್ತಾರೆ.

ಇಲ್ಲಿ ಪುರುಷರೇ ಈ ಕಾರ್ಯವನ್ನು ವಿಶೇಷವಾಗಿ ಆಚರಿಸುತ್ತಿದ್ದು ಕಂಡುಬರುತ್ತದೆ. ಹೀಗಾಗಿ ಇದಕ್ಕೆ ಗಂಡಸಾರತಿ ಎಂದು ಕರೆಯುತ್ತಾರೆ. ಇದು ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ತಮ್ಮಿನಾಳ ಗ್ರಾಮದಲ್ಲಿ ವಿಶೇಷವಾಗಿ ನಡೆಯುವ ಆಚರಣೆಯಾಗಿದೆ. ವರ್ಷಕ್ಕೊಮ್ಮೆ ನಿರ್ದಿಷ್ಟ ದಿನದಂದು ರಂಗನಾಥನ ಉತ್ಸವದಲ್ಲಿ ತಪ್ಪದೇ ಜರುಗುತ್ತದೆ. ಕೆಲವೊಮ್ಮೆ ಗ್ರಾಮದಲ್ಲಿ ಅತಿವೃಷ್ಟಿ, ಅನಾವೃಷ್ಟಿ ನೈಸರ್ಗಿಕ ವಿಕೋಪಗಳು ಕಾಣಿಸಿಕೊಂಡರೆ ಭಕ್ತರು ದೈವದ ಮೊರೆ ಹೋಗಿ ಹರಕೆ ಹೊತ್ತು ಈ ಆರತಿ ಸೇವೆಯನ್ನು ನಡೆಸುವುದು ಕಂಡುಬರುತ್ತದೆ. ಅಲ್ಲದೇ ಇದು ಆಹಾರ ಪದಾರ್ಥದ ಕುರಿತು ತಿಳಿಸುತ್ತದೆ.

**ಚೆಂಡು ಹೂವಿನ ಆರತಿ :**

ವಿಜಯದಶಮಿ ನಂತರ ರಂಗನಾಥನನ್ನು ಬೇಟೆಗೆ ಕರೆದುಕೊಂಡು ಹೋಗುವುದು. ನಂತರ ಬೇಟೆ ಆಚರಣೆ ಮುಗಿದು ಮರಳಿ ಗ್ರಾಮಕ್ಕೆ ದೇವರು ಬರುವಾಗ ಗ್ರಾಮದ ಪ್ರತಿ ಮನೆಯವರು ಚೆಂಡು ಹೂವಿನ ಆರತಿ ತಂದು ಸ್ವಾಮಿಗೆ ಬೆಳಗುತ್ತಾರೆ. ಈ ಆಚರಣೆಯು ದಾವಣಗೆರೆ ಜಿಲ್ಲೆಯ ಮಲೆಬೆನ್ನೂರಿನ ಜಿಗಳಿ ಗ್ರಾಮದಲ್ಲಿ ರಂಗನಾಥನಿಗೆ ವಿಶೇಷವಾಗಿ ನಡೆಯುತ್ತದೆ. ನವಂಬರ ತಿಂಗಳಲ್ಲಿ ಚೆಂಡು ಹೂವಿನ ಬೆಳೆ ಹೆಚ್ಚಾಗಿ ಇರುತ್ತದೆ. ಇದೇ ಹೂವಿನಲ್ಲಿ ಆರತಿ ಮಾಡುವುದು ವಿಶೇಷವಾಗಿದೆ.

**ಪಾನಕ ಪಲಹಾರ ಸೇವೆ :**

ಪ್ರಸ್ತುತ ಸೇವೆಯು ಜಾತ್ರೆಯ ಸಮಯದಲ್ಲಿ ನಡೆಯುತ್ತದೆ. ಬೆಲ್ಲ ಅಥವಾ ಸಕ್ಕರೆ ನೀರಿನಿಂದ ಮಾಡಿದ ಪಾನಕ ಕುಡಿಯುವ ಮತ್ತು ಕಡಲೆ ಕಾಯಿಚೂರಿನಿಂದ ಮಾಡಿದ ಫಲಾಹಾರ ತಿನ್ನುವ ಒಂದು ಪದ್ಧತಿಯಾಗಿದೆ. ಗ್ರಾಮದ ಜನರು ತಮ್ಮ ಇಷ್ಟದಂತೆ ೧, ೨ ಮತ್ತು ೩ ಎತ್ತಿನ ಬಂಡೆಗಳಲ್ಲಿ ತಾವೇ ಸ್ವಇಚ್ಛೆಯಿಂದ ತಮ್ಮ ಮನೆಯಿಂದ ಪಾನಕ ಮಾಡಿಕೊಂಡು ಜಾತ್ರೆಯ ಸಂದರ್ಭದಲ್ಲಿ ನೆರೆದ ಜನಗಳಿಗೆ ಕೊಡುತ್ತಾರೆ. ಇದು ಕೃಷಿಕರ ಭಾಗವಾದ ಎತ್ತು ಮತ್ತು ಬಂಡೆಯನ್ನು ಪೂಜಿಸುವುದನ್ನು ತಿಳಿಸುವುದಲ್ಲದೇ, ಜೊತೆಗೆ ಬಿಸಿಲಲ್ಲಿ ದಣಿವು ನೀಗಿಸಿಕೊಳ್ಳುವಲ್ಲಿ

ಸಿಹಿ ಪದಾರ್ಥಗಳು ಹೆಚ್ಚು ಉಪಯುಕ್ತವಾಗುತ್ತವೆ ಎಂಬುದನ್ನು ತಿಳಿಸುತ್ತದೆ. ಅಲ್ಲದೆ ಆಚರಣೆಯು ಜನಸಮುದಾಯದಲ್ಲಿ ಒಗ್ಗಟ್ಟು, ಸಹಕಾರ, ಸಾಮರಸ್ಯವನ್ನು ಬೆಳೆಸುವಲ್ಲಿ ಸಹಾಯಕವಾಗಿದೆ. ಈ ಸೇವೆ ಮಾಡುವುದರಿಂದ ಬಿಸಿಲಿನಿಂದ ಆಯಾಸವಾದ ಜನರಿಗೆ ಅವಶ್ಯಕವಾದ ನೀರನ್ನು ಕೊಡುವುದರಿಂದ ಸಂತೃಪ್ತಿ ಮತ್ತು ತಮ್ಮ ಬದುಕಿಗೆ ಒಳ್ಳೆಯದಾಗುತ್ತದೆ ಎಂದು ನಂಬಿರುವುದು ಕಂಡುಬರುತ್ತದೆ.

**ಬಸವನನ್ನು ಬಿಡುವುದು :**

ರಂಗನಾಥನು ಮುಖ್ಯವಾಗಿ ಪಶುಪಾಲಕರ ದೈವವಾಗಿದ್ದು, ಆತನಿಗೆ ಬಸವನನ್ನು ಬಿಡುವ ಪದ್ಧತಿ ಇದೆ. ಅದು ರಂಗನಾಥನ ಬಸವ ಎಂದೇ ಕರೆಯಿಸಿಕೊಳ್ಳುತ್ತದೆ. ಗ್ರಾಮದಲ್ಲಿ ಅದಕ್ಕೆ ಎಲ್ಲದರಲ್ಲಿಯೂ ಮುಕ್ತ ಪ್ರವೇಶ. ಈ ಮೂಲಕ ದೈವವು ತಮ್ಮ ದನಕರುಗಳನ್ನು ರಕ್ಷಿಸುತ್ತದೆ ಎಂಬ ನಂಬಿಕೆ. ಜಾತ್ರೆಯ ಸಂದರ್ಭದಲ್ಲಿ ಬಸವನಿಗೆ ವಿಶೇಷ ಪೂಜೆಯನ್ನು ನೇರವೇರಿಸುತ್ತಾರೆ. ಜಾತ್ರೆಯ ಮೊದಲ ಪೂಜೆಯ ಬಸವನಿಂದಲೇ ಪ್ರಾರಂಭವಾಗುತ್ತದೆ. ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲೂಕಿನ ಬುರಡೆಕಟ್ಟೆ ಗ್ರಾಮದಲ್ಲಿ ಜಾತ್ರೆಯ ಸಂದರ್ಭದಲ್ಲಿ ಮಾಡಲಾಗುವ ಅನ್ನ ಸಂತರ್ಪಣೆಯಲ್ಲಿ ಮೊದಲ ನೈವೇದ್ಯ ಬಸವನಿಗೆ ಕೊಡಲಾಗುತ್ತದೆ. ರಂಗನಾಥಸ್ವಾಮಿಗೆ ಹರಕೆ ಹೊತ್ತ ಭಕ್ತರು ದೇವರಿಗೆ ಎತ್ತುಗಳನ್ನು 'ಬಸವ ಮುದ್ರೆ' ಮಾಡಿಸುವ ಮೂಲಕ ಸಮರ್ಪಿಸುತ್ತಾರೆ. ಮುದ್ರೆ ಹಾಕದೆಯೂ ಬಸವನನ್ನು ಬಿಡುವುದುಂಟು. ಮುದ್ರೆ ಆಗದಿರುವ ಬಸವಗಳನ್ನು ತಹಸೀಲ್ದಾರರ ಅನುಮೋದನೆ ಪಡೆದು ಹರಾಜು ಹಾಕಲಾಗುತ್ತದೆ. ಬಂದ ಹಣವನ್ನು ದೇವಾಲಯದ ಲೆಕ್ಕಕ್ಕೆ ಹಾಕಲಾಗುತ್ತದೆ. ಭಕ್ತರು ಕರುವಿದ್ದಾಗಲೇ ಮುದ್ರೆ ಹಾಕಿಸಿ ಬಸವನನ್ನಾಗಿ ಬಿಡುತ್ತಾರೆ. ಈ ದೇವರ ಎತ್ತುಗಳು ಸುತ್ತಲು ಯಾವುದೇ ಹೊಲಗಳಲ್ಲಾದರೂ ಹುಲ್ಲು, ಪೈರುಗಳನ್ನು ಮೇಯಲು ಅವಕಾಶವಿರುತ್ತದೆ. ಭಕ್ತರು ರಂಗನಾಥನ ಬಸವನೆಂದು ಯಾವುದೇ ವಿರೋಧವನ್ನು ವ್ಯಕ್ತಪಡಿಸದಿರುವುದು ಕಂಡುಬರುತ್ತದೆ. ಈ ಸಂಪ್ರದಾಯವು ರಂಗನಾಥ ಪಶುಪಾಲನಾ ಹಂತದಲ್ಲಿ ಪಶುಪಾಲಕರ ಆರಾಧ್ಯ ದೈವವಾದ ಜುಂಜಪ್ಪನ ಜೊತೆ ಬೆರೆತು ಹೋಗಿದ್ದನ್ನು ಸೂಚಿಸುತ್ತದೆ. ಕಾರಣ ಜುಂಜಪ್ಪನ ಸಂಪ್ರದಾಯದಲ್ಲಿ ಪಟ್ಟದ ಬಸವನಿರುವುದು ಕಂಡುಬರುತ್ತದೆ. ಇದೇ ಸಂಪ್ರದಾಯವನ್ನು ರಂಗನಾಥನು ಅನುಸರಿಸಿರುವುದು ಕಂಡುಬಂದಿದೆ.

**ಹರಕೆ ಸಂಬಂಧಿ ಆಚರಣೆಗಳು :**

ತನ್ನ ಇಷ್ಟಾರ್ಥ ಸಿದ್ದಿಗಾಗಿ ದೇವರಲ್ಲಿ ಮಾಡಿಕೊಳ್ಳುವ ಸೇವೆಯ ನಿರ್ಧಾರ ಇಲ್ಲವೆ ಸಂಕಲ್ಪವೇ ಹರಕೆ. ಹರಕೆಗಳು ಬಹುತೇಕ ಆಚರಣೆಯ ರೂಪದಲ್ಲಿ ನಡೆಯುತ್ತವೆ. ಹರಕೆ ಕಟ್ಟಿಕೊಂಡವರು ತಮ್ಮ ಕಷ್ಟಗಳು ಬಯಲಾಗಿ ಇಷ್ಟಾರ್ಥಗಳು ನೆರವೇರಿದಾಗ ತಾವು ಹರಸಿಕೊಂಡ ರಂಗನಾಥ

ದೇವರ ಉತ್ಸವದ ಸಂದರ್ಭದಲ್ಲಿ ಕೆಲವೊಮ್ಮೆ ತಮಗೆ ಶಕ್ತವಾದ ಸಂದರ್ಭದಲ್ಲಿಯೂ ಹರಕೆ ತೀರಿಸುತ್ತಾರೆ. ಹರಕೆಯು ವೈಯಕ್ತಿಕವಾದುದ್ದು, ಇದಕ್ಕೆ ಯಾವುದೇ ಜಾತಿಯ ನಿರ್ಬಂಧವು ಇಲ್ಲದುದಾಗಿದೆ.

**ಕೊಂಡಸೇವೆ :**

ರಂಗನಾಥ ದೇವರಿಗೆ ಕೊಂಡ ಸೇವೆಯನ್ನು ಆಚರಿಸುತ್ತಾರೆ. ಈ ಆಚರಣೆಯು ಚಿತ್ರದುರ್ಗ ಜಿಲ್ಲೆ ತಮಟಕಲ್ಲು ರಂಗನಾಥ ದೇವಾಲಯದಲ್ಲಿ ಕಂಡುಬರುತ್ತದೆ. ಜಾತ್ರೆಯ ಸಂದರ್ಭದಲ್ಲಿ ದೇವಾಲಯದ ಮುಂದೆ ನೆಲವನ್ನು ತಗ್ಗುಗೊಳಿಸಿ ಮರದಿಂದ ಬೆಂಕಿಯನ್ನು ಸಿದ್ಧಗೊಳಿಸಿ ಕೆಂಡದಿಂದ ತಗ್ಗನ್ನು ಸಿದ್ಧಪಡಿಸುತ್ತಾರೆ. ಮೊದಲು ದೇವರ ಉತ್ಸವ ಮೂರ್ತಿಯ ಪಲ್ಲಕ್ಕಿಯನ್ನು ಹೊತ್ತುಕೊಂಡು ಪ್ರಥಮವಾಗಿ ಪೂಜಾರಿ ಸಮೇತ ಆ ಕೊಂಡದಲ್ಲಿ ಹಾಯುವರು. ನಂತರ ಹರಕೆ ಹೊತ್ತ ಭಕ್ತರು ಬರಿಗಾಲಿನಲ್ಲಿ ಕೊಂಡ ಹಾಯುತ್ತಾರೆ. ಈ ಸಂದರ್ಭದಲ್ಲಿ ಪೂಜಾರಿಯ ಮೈ ಮೇಲೆ ರಂಗನಾಥನು ಆವಾಹನೆಯಾಗುತ್ತಾನೆ. ಆ ವರ್ಷದ ಒಳಿತು ಕೆಡಕುಗಳ ಬಗ್ಗೆ ಭಕ್ತರ ಪ್ರಶ್ನೆಗಳಿಗೆ ರಂಗನಾಥನಿಂದ ಉತ್ತರ ದೊರೆಯುತ್ತದೆ. ಈ ರೀತಿಯ ವರ್ಷ ಭವಿಷ್ಯದ ಹೇಳಿಕೆಯು ಜನಸಾಮಾನ್ಯರನ್ನು ಮುಂಬರುವ ಕಷ್ಟ, ಸುಖಗಳನ್ನು ಅನುಭವಿಸಲು ಮಾನಸಿಕವಾಗಿ ಸದೃಢರನ್ನಾಗಿಸುತ್ತದೆ.

**ಬಾಯಿ ಬೀಗ ಆಚರಣೆ :**

ಚಿತ್ರದುರ್ಗ ಜಿಲ್ಲೆಯ ಹಿರಿಯೂರ ತಾಲೂಕಿನ ಕಳವಿಬಾಗಿ ಗ್ರಾಮದಲ್ಲಿ ವಿಶೇಷವಾಗಿ ಬಾಯಿಬೀಗ ಹಾಕುವ ಸೇವೆ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಹರಕೆ ಹೊತ್ತ ಭಕ್ತರು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಬಾಯಿಬೀಗ ಸೇವೆ ಮಾಡುತ್ತಾರೆ. ಇದನ್ನು ಮಾಡುವಂತಹ ಭಕ್ತರು ಅಂದು ಮಡಿಯಿಂದ (ನೇಮದಿಂದ) ಇದ್ದು ಹೊಸ ಬಟ್ಟೆಗಳನ್ನು ಧರಿಸಿಕೊಳ್ಳುವರು. ದೇವಾಲಯದ ತುಸು ಅನತಿ ದೂರದಲ್ಲಿರುವ ತೊಟ್ಟಿಲು ತಿಮ್ಮಪ್ಪನ ಗುಡಿಯ ಬಳಿ ಬಂದು, ಅಲ್ಲಿ ಬಾಯಿಬೀಗ (ಎರಡು ಕೆನ್ನೆಯ ಮಧ್ಯ ಕಬ್ಬಿಣದ ಎಳೆಗಳನ್ನು ಚುಚ್ಚಿಕೊಳ್ಳುವುದು) (ಬಾಯಿಯನ್ನು ಲೋಹದ ಕಡ್ಡಿಯಿಂದ ಚುಚ್ಚಿಕೊಳ್ಳುವುದು) ಹಾಕಿಸಿಕೊಂಡು ಮನಸ್ಸಿನಲ್ಲಿಯೇ ಗೋವಿಂದ ಎಂದು ನಾಮ ಜಪ ಮಾಡುತ್ತಾ ರಂಗನಾಥ ಸ್ವಾಮಿಯ ದೇವಾಲಯಕ್ಕೆ ಬಂದು ದರ್ಶನ ಮಾಡುತ್ತಾರೆ. ನಂತರ ಐದು ಸುತ್ತು ದೇವಾಲಯವನ್ನು ಪ್ರದಕ್ಷಿಣೆ ಹಾಕಿ ಅಲ್ಲಿ ಬಾಯ ಬೀಗವನ್ನು ತೆಗೆಸಿಕೊಳ್ಳುತ್ತಾರೆ. ನಂತರ ಶಸ್ತ್ರ ಚುಚ್ಚಿದ ಭಾಗಗಳಿಗೆ ದೇವರ ಹೆಸರಲ್ಲಿ ಅಂಗಾರ (ಗಂಧ)ವನ್ನು ಲೇಪಿಸುತ್ತಾರೆ. ಈ ಆಚರಣೆಯು ಅನೇಕ ದೇವಾಲಯಗಳಲ್ಲಿಯೂ ನಡೆಯುತ್ತದೆ. ಉದಾಹರಣೆಗೆ ಮೈಸೂರು ಜಿಲ್ಲೆಯ ಬನ್ನೂರು ರಂಗನಾಥ ದೇವಾಲಯದಲ್ಲಿ ನಡೆಯುತ್ತದೆ. ಚಿತ್ರದುರ್ಗ ಜಿಲ್ಲೆಯ

ಹೊರಕೆರೆದೇವರಪುರ ರಂಗನಾಥ ದೇವಾಲಯದಲ್ಲಿ ಹರಿತವಾದ ಎದೆಶೂಲ, ದೇವರ ಬಾಕು (ತುಂಡುಗತ್ತಿ)ಯಿಂದ ಎದೆಯನ್ನು ಚುಚ್ಚಿಕೊಳ್ಳುವ ವಿಶೇಷ ಆಚರಣೆ ಕಂಡುಬರುತ್ತದೆ.

ಹೀಗೆ ಭಕ್ತರು ತಮ್ಮ ಭಕ್ತಿಯ ಪರಾಕಾಷ್ಠೆಯನ್ನು ವ್ಯಕ್ತಪಡಿಸಿ ತಮ್ಮ ದೇಹವನ್ನು ದಂಡಿಸಿಕೊಳ್ಳುತ್ತಾ ಹಿಂಸಾತ್ಮಕ ಉಗ್ರ ಆಚರಣೆಯನ್ನು ಯಾವ ಭಯವಿಲ್ಲದೆ ತೋರ್ಪಡಿಸುತ್ತಾರೆ. ಇದು 'ಉಗ್ರಕಲೆ ಹಾಗೂ ರೋಮಾಂಚನಕಾರಿ ದೃಶ್ಯ'[೨] ವೆಂದು, ಬಾಯಿ ಶಸ್ತ್ರ ಹಾಕುವುದನ್ನು ಕೆಲವು ಜಾನಪದ ತಜ್ಞರು ಆಚರಣೆಯ ಹಿನ್ನಲೆಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದರ ಸಾಂಕೇತಿಕ ರೂಪ ಎಂದಿದ್ದಾರೆ.[೩]

**ಹೆಜ್ಜೆನಡೆ ಸೇವೆ :**

ಹೆಜ್ಜೆನಡೆ ಸೇವೆ ಅಥವಾ ಹೆಜೆ ನಮಸ್ಕಾರವನ್ನು ವೈಯಕ್ತಿಕ, ಕೌಟುಂಬಿಕ, ಇಲ್ಲವೆ ಸಾಮೂಹಿಕ ಕಾರಣಕ್ಕೆ ಸಂಕಲ್ಪ ಹೊತ್ತಿರುವ ಭಕ್ತರು ತಮ್ಮ ಇಷ್ಟಾರ್ಥ ಸಿದ್ಧಿಗಾಗಿಯೇ ಮಾಡುವಂತದ್ದು. ಇದನ್ನು ಜಾತ್ರೆಯ ಸಂದರ್ಭದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಆಚರಿಸುತ್ತಾರೆ. ಹೆಜ್ಜೆ ನಮಸ್ಕಾರವು ದೇವಸ್ಥಾನದ ಪ್ರಾಕಾರದಲ್ಲಿ ಹೆಜ್ಜೆ ಹೆಜ್ಜೆಗೂ ನಮಸ್ಕರಿಸುತ್ತ ಹೋಗುವುದಾಗಿದೆ. ಈ ಆಚರಣೆಯು ಚಿತ್ರದುರ್ಗ ಜಿಲ್ಲೆಯ ಕಳವಿಬಾಗಿ ರಂಗನಾಥ ದೇವಾಲಯದಲ್ಲಿ ನಡೆಯುತ್ತದೆ. ದೇವಾಲಯದಿಂದ ಅನತಿ ದೂರದ ತೊಟ್ಟಿಲ ತಿಮ್ಮಪ್ಪನ ಗುಡಿಯಿಂದ ಭಕ್ತರು ಮಡಿಯಿಂದ (ನೇಮ) ಪ್ರತಿ ಹೆಜ್ಜೆಗೂ ಗೋವಿಂದ ಎಂದು ನಾಮ ಸ್ಮರಿಸುತ್ತ ದೇವಾಲಯಕ್ಕೆ ಬರುತ್ತಾರೆ. ಐದು ಸುತ್ತು ಪ್ರದಕ್ಷಿಣೆಗೈದು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಪ್ರಾರ್ಥನೆ ಗೈಯುತ್ತಾ ಮತ್ತು ಇಷ್ಟಾರ್ಥ ಪೂರ್ಣ ಗೊಂಡಿದ್ದಕ್ಕಾಗಿಯೂ ಹರಕೆಯನ್ನು ತೀರಿಸಿಕೊಳ್ಳುತ್ತಾರೆ. ಇದು ಭಕ್ತರ ಸೇವೆಯ ಒಂದು ಭಾಗವಾಗಿದೆ.

**ದುಂಡುರುಳು ಸೇವೆ, ಮಡೆ ಹೊರಳುವುದು :**

ಸ್ವಲ್ಪ ಹೆಚ್ಚು ಕಡಿಮೆ ಇವು ಒಂದೇ ಬಗೆಯ ಆಚರಣೆಯಾಗಿವೆ. ದುಂಡುರುಳು ಸೇವೆಯಲ್ಲಿ ಭಕ್ತರು ಒದ್ದೆ ಬಟ್ಟೆಯನ್ನು ಉಟ್ಟು ದೇವಾಲಯದ ಸುತ್ತ ತಮ್ಮ ಇಚ್ಛಾನುಸಾರ ಐದು, ಒಂಭತ್ತು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ಹಾಗೆಯೇ ಮಡೆ ಹೊರಳುವ ಸೇವೆಯು ರಥೋತ್ಸವ, ಪರ್ವಗಳಂತ ದೊಡ್ಡ ಸಮಾರಂಭದಲ್ಲಿ ನೂರಾರು ಜನ ಊಟ ಮಾಡಿದ ಎಂಜಲು ಎಲೆಗಳನ್ನು ಎತ್ತುವುದಕ್ಕೆ ಮುಂಚೆ ಅದರ ಮೇಲೆ ಉರುಳುವುದು (ಉದಾಹರಣೆಗೆ ಸುಬ್ರಹ್ಮಣ್ಯ ದೇವಾಲಯದಲ್ಲಿ ನಡೆಯುವ ರೀತಿಯದ್ದು) ಪ್ರಾರಂಭದಲ್ಲಿ ಬಿಳಿಗಿರಿರಂಗನ ಬೆಟ್ಟದಲ್ಲಿಯೂ ಈ ಸೇವೆ ನಡೆಯುತ್ತಿತ್ತೆಂದು ತಿಳಿದು ಬರುತ್ತದೆ. ಭಕ್ತರು ತಮ್ಮ ಇಷ್ಟದ ನೆರವೇರಿಕೆಗೆ ಇದನ್ನು ಮಾಡುವುದಾಗಿದ್ದರು, ಪ್ರಸ್ತುತ ಸಂದರ್ಭದಲ್ಲಿ ಈ ಆಚರಣೆಯ ಬಗ್ಗೆ ವಿರೋಧ ವ್ಯಕ್ತವಾಗಿದೆ.

**ಸಸ್ಯ ಸಂಬಂಧಿ ಆಚರಣೆ :**

ಮಾನವನ ಹುಟ್ಟು, ಬೆಳವಣಿಗೆಯೆಲ್ಲವೂ ಪ್ರಕೃತಿಯ ಮಡಿಲಲ್ಲಿ. ಮನುಷ್ಯ ಅಲೆಮಾರಿಯಾಗಿದ್ದ ದಿನಗಳಿಂದಲು ಗಿಡ, ಮರಗಳ ಜೊತೆ ಅಪಾರವಾದ ಭಾವನಾತ್ಮಕ ಸಂಬಂಧ ಬೆಳೆಸಿಕೊಂಡಿದ್ದಾನೆ. ಅವುಗಳ ಮೇಲಿನ ಗೌರವ ಸೂಚಕವಾಗಿ, ಕೆಲವನ್ನು ತಮ್ಮ ಕುಲದೇವತೆಗಳನ್ನಾಗಿ ಕುಲಲಾಂಛನವನ್ನಾಗಿ ಮಾಡಿಕೊಂಡಿದ್ದನು. ಅಲ್ಲದೆ ಅವುಗಳ ಕುರಿತು ಭಯ, ಭಕ್ತಿ, ಗೌರವ ಬೆಳೆಸಿಕೊಂಡಿದ್ದನು. ಕಾರಣ ಮಾನವನ ದಿನನಿತ್ಯದ ಬದುಕಿಗೆ ಸಸ್ಯಗಳು ಹಲವಾರು ರೀತಿಯಲ್ಲಿ ಸಹಾಯಕವಾಗಿವೆ. ಇಂಥ ಭಾವನೆಗಳು ಸಸ್ಯಾರಾಧನೆಗೆ ನಾಂದಿಯಾಗಿದೆ.

ಪ್ರಸ್ತುತ ರಂಗನಾಥ ಆಚರಣೆಯಲ್ಲಿ ಬೇಟೆಮರ ಪೂಜೆ, ಮತ್ತು ಮುಳ್ಳು ಪವಾಡ ಆಚರಣೆಯು ಜರಗುತ್ತದೆ.

**ಬೇಟೆಮರ ಪೂಜೆ :**

ಆಚರಣೆಯು ಪರಿಶಿಷ್ಟ ಮತ್ತು ಶಿಷ್ಟ ಪರಂಪರೆಯ ಎಲ್ಲ ರಂಗನಾಥ ದೇವಾಲಯಗಳಲ್ಲಿ ಕಂಡುಬರುತ್ತದೆ. ಶಿಷ್ಟ ಸಂಪ್ರದಾಯದ ಆಚರಣೆಯ ಸಮಯದಲ್ಲಿ ಜನಪದರು ತಪ್ಪದೇ ಈ ಮರವನ್ನು ಬಳಸುತ್ತಾರೆ. ಈ ಮರದ ಬಗ್ಗೆ ಜನಪದರಲ್ಲಿ ಅಪಾರ ಭಕ್ತಿ, ನಂಬಿಕೆ. ಸಸ್ಯ ಪ್ರಭೇದಗಳಲ್ಲಿ ಒಂದಾದ ಮುಳ್ಳು ಬೇಟೆ ಮರ. ಇದು ಬೇಟೆ ರಂಗನನ್ನು ಸೂಚಿಸಲು ಪ್ರಮುಖ ಸಂಕೇತವಾಗಿದ್ದು, ಆಚರಣೆಯಲ್ಲಿ ಪೂಜನೀಯ ಸ್ಥಾನ ಪಡೆದುಕೊಂಡಿದೆ. ಮಾನವನ ಬೇಟೆ ಸಂಸ್ಕೃತಿಯಲ್ಲಿ ಪ್ರಾಣಿ ಬಲಿ ನಡೆಯುತ್ತಿದ್ದು ಬೇಟೆಗೆ ಬಲಿಯಾಗುವ ಪ್ರಾಣಿಗಳ ಆಶ್ರಯತಾಣ ಮುಳ್ಳಿನ ಗಿಡಗಳಾಗಿದ್ದವು. ಬಹುಶಃ ಅವುಗಳ ನಾಶವೇ ಬೇಟೆ ಮರದ ಆಚರಣೆಯ ಹಿನ್ನಲೆಯಿರಬೇಕು. ಪ್ರಸ್ತುತ ರಂಗನಾಥನಿಗೆ ಸಂಬಂಧಿಸಿದ ಐತಿಹ್ಯದಲ್ಲಿಯೂ ಬೇಟೆ ಮರದ ಅನೇಕ ಉಲ್ಲೇಖಗಳು ದೊರೆಯುತ್ತದೆ. ಮುಖ್ಯವಾಗಿ ಈ ಪೂಜೆಯನ್ನು ಆಚರಣೆಯನ್ನು ಬೇಡ ಜನಾಂಗದವರೇ ಮಾಡುವವರಾಗಿದ್ದರು. ಕಾರಣ ಅವರು ಬೇಟೆ ಸಂಪ್ರದಾಯದಿಂದ ಬಂದವರಾಗಿದ್ದರು.

ಆದರೆ ಪ್ರಸ್ತುತ ರಂಗನಾಥನ ಜಾತ್ರೆಯಲ್ಲಿ ಎಲ್ಲ ವರ್ಗದ ಜನರು ಸೇರಿ ಬ್ಯಾಟೆಮರ ಪೂಜಿಸುತ್ತಾರೆ. ಗ್ರಾಮದವರೆಲ್ಲರೂ ಸೇರಿ ದಷ್ಟಪುಷ್ಟವಾಗಿ ಬೆಳೆದ 'ಗಂಡುಗಾರಿ ಮುಳ್ಳಿನ ಕಂಟಿ' ಗಿಡವನ್ನು ಹುಡುಕಿ ಪೂಜಿಸಿ ತರುತ್ತಾರೆ. ಈ ಸಂದರ್ಭದಲ್ಲಿ ಗಿಡವನ್ನು ಕೀಳುವಾಗ ನೀರು ಹಾಕಿ ಆಯುಧವನ್ನೇ ಬಳಸದೇ ಕೈಯಿಂದ ಮಣ್ಣು ಬಗೆದು ಬೇರು ಸಮೇತ ಗಿಡವನ್ನು ಕಿತ್ತು ತೆಗೆದುಕೊಂಡು ಬರುತ್ತಾರೆ. ನಂತರ ದೇವಾಲಯದಲ್ಲಿ ರಂಗನಾಥನ ಉತ್ಸವ ಸಂದರ್ಭದಲ್ಲಿ ಸ್ವಾಮಿಯ ಹತ್ತಿರ ಇಟ್ಟು ಪೂಜಿಸುತ್ತಾರೆ. ಸ್ವಾಮಿಯ ಎಲ್ಲ ಕಾರ್ಯಗಳಿಗೂ ಬ್ಯಾಟೆ ಮರ ಜೊತೆಯಲ್ಲಿಯೇ ತಪ್ಪದೆ ಇರಬೇಕು ಎನ್ನುವ ಸಂಪ್ರದಾಯವಿದೆ. ಬ್ಯಾಟೆ ಮರ ಎಂದರೆ

ರಂಗನಾಥನಿಗೆ ತುಂಬ ಪ್ರೀಯವಾದುದು ಎಂದು ಭಕ್ತರು ಅಭಿಪ್ರಾಯಿಸುತ್ತಾರೆ. ಸ್ವಾಮಿಯ ಜಾತ್ರೆಯ ಪ್ರಾರಂಭದಿಂದ ಮುಗಿಯುವ ವರೆಗೂ ಈ ಬೇಟೆ ಮರ ತುಂಬಾ ಮಹತ್ವತೆಯನ್ನು ಪಡೆದುಕೊಂಡಿದೆ. ಮುಳ್ಳು ಜನ ಮತ್ತು ಜಾನುವಾರುಗಳನ್ನು ರಕ್ಷಿಸುವುದು ವಾಸ್ತವ ಸಂಗತಿ. ಜನಸಮುದಾಯಗಳು ತಮ್ಮ ದೈವಗಳ ಗುಡಿಸಲುಗಳ ಸುತ್ತಲೂ ದಟ್ಟವಾದ ಮುಳ್ಳು ಬೇಲಿಹಾಕಿ ಕೊಂಡಿರುತ್ತಾರೆ. ಬ್ಯಾಟಿ ಮರದ ಆಚರಣೆಯ ಮೂಲಕ ಸಸ್ಯಾರಾಧನೆಗೆ ಮುಳ್ಳು ಪಾತ್ರವಾಗಿದೆ.

**ಮುಳ್ಳು ಪವಾಡ :**

ಪ್ರಸ್ತುತ ಆಚರಣೆಯು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲೂಕಿನ ಬುರುಡೆಕಟ್ಟೆ ಗ್ರಾಮದಲ್ಲಿ ನಡೆಯುತ್ತದೆ. ಆಚರಣೆಯು ದೊಡ್ಡ ಮಟ್ಟದಲ್ಲಿ ಗ್ರಾಮದಲ್ಲಿ ನಡೆಯುತ್ತದೆ. ಜಾತ್ರೆಯು ದಿನ ಸಂಜೆ ಎಲ್ಲರೂ ಸೇರಿಕೊಂಡು ಗ್ರಾಮದ ಹೊರ ವಲಯದಿಂದ ಜಾಲಿ ಮುಳ್ಳಿನ ದೊಡ್ಡ ದೊಡ್ಡ ಗಿಡಗಳನ್ನು ತರುತ್ತಾರೆ. ತರುವ ಸಂದರ್ಭದಲ್ಲಿ ವಿವಿಧ ವಾದ್ಯಗಳ ಮೂಲಕ ಅಪಾರ ಪ್ರಾಮಾಣದ ಜನರು ಸೇರಿ ರಂಗನಾಥನ ಝೇಂಕಾರ ಹಾಕುತ್ತಾ ಬಾರಿಸುತ್ತಾ ಬರುತ್ತಾರೆ. ದೇವಾಲಯದ ಹತ್ತಿರದಲ್ಲಿ ಗೊತ್ತು ಪಡಿಸಿದ ಸ್ಥಳದಲ್ಲಿ ತಂದ ಮುಳ್ಳಿನ ಗಿಡಗಳನ್ನು ಕೂಡಿಸಿ ಮುಳ್ಳ ಹಾಸಿಗೆ ಸಿದ್ಧಪಡಿಸುತ್ತಾರೆ. ನಂತರ ವಾದ್ಯ ಸಮೇತ ದೇವರ ಉತ್ಸವ ಮೂರ್ತಿಯನ್ನು ಆ ಸ್ಥಳಕ್ಕೆ ಕರೆದುಕೊಂಡು ಬಂದು ಪೂಜಿಸುತ್ತಾರೆ. ಈ ಸಂದರ್ಭದಲ್ಲಿ ವಿವಿಧ ಮಂತ್ರ, ಪಂಜಿನ ಸೇವೆಯು ನಡೆಯುತ್ತದೆ. ನಂತರ ದೇವರ ಸಮ್ಮುಖದಲ್ಲಿ ಒಬ್ಬೊಬ್ಬರಾಗಿ ಆವೇಶ ಭರಿತರಾಗಿ ವ್ಯಕ್ತಿಗಳು ಮುಳ್ಳಿನ ರಾಶಿಯಲ್ಲಿ ಬಿದ್ದು ಹೊರಳಾಡುತ್ತಾರೆ. ಭಕ್ತಿಯ ಪರಾಕಾಷ್ಠೆಯಲ್ಲಿ ಮುಳ್ಳಿನ ಮೇಲೆ ಬಿದ್ದರು ಚುಚ್ಚುವ ಅನುಭವವಾಗದಿರುವುದೇ ಇಲ್ಲಿಯ ವಿಶೇಷತೆ. ಮತ್ತೊಂದು ಆಚರಣೆಯಾದ ಮುಳ್ಳುಪಲ್ಲಕ್ಕಿ ಸೇವೆ ವಿಶೇಷವಾಗಿ ಕಂಡುಬರುತ್ತದೆ. ಪಲ್ಲಕ್ಕಿಯ ಮೇಲೆ ಜಾಲಿ ಹಾಗೂ ಕಾರೆಜಾತಿಯ ಚೂಪಾದ ಮುಳ್ಳುಗಳನ್ನು ತುಂಬಿ ಅದರ ಮೇಲೆ ವ್ಯಕ್ತಿಯೊಬ್ಬರು ಮಲಗುತ್ತಾರೆ. ಮುಖ್ಯವಾಗಿ ಇದು ಚಿತ್ರದುರ್ಗ ಜಿಲ್ಲೆ ಹೊರಕೆರೆದೇವಪುರ ರಂಗನಾಥಸ್ವಾಮಿ ದೇವಾಲಯದಲ್ಲಿ ನಡೆಯುವ ಆಚರಣೆಯಾಗಿದೆ. ಈ ದೃಶ್ಯ ದೈವೀಭಾವದೊಂದಿಗೆ ನೋಡುಗರಿಗೆ ಅದ್ಭುತ ಅನುಭವವಾಗುತ್ತದೆ. ಇಲ್ಲಿ ಭಕ್ತರು ತಮ್ಮನ್ನು ತಾವೇ ಶಿಕ್ಷೆಗೆ ಒಳಪಡಿಸಿಕೊಂಡು ದೇಹ ದಂಡಿಸುವ ಕ್ರಮಗಳಾಗಿವೆ. ಭಕ್ತರ ಭಕ್ತಿಯ ಉದ್ದೀಪನದ ಜೊತೆ ಭಕ್ತಿಯ ಉದ್ರೇಕದ ಸ್ಥಿತಿ ಈ ಆಚರಣೆಯಲ್ಲಿದೆ.

**ಪವಾಡ ಸಂಬಂಧಿ ಅಚರಣೆಗಳು :**

ಅತಿಮಾನುಷ ಶಕ್ತಿಯ ನಂಬಿಕೆಯ ಮೇಲೆ ವಿಶಿಷ್ಟ ಪವಾಡಗಳು ನಡೆಯುತ್ತವೆ. ಸಾಮನ್ಯವಾಗಿ ಜನಪದ ಅಚರಣೆಗಳ ಸುತ್ತಲೂ ಅನೇಕ ಪವಾಡಗಳು ವ್ಯಾಪಿಸಿಕೊಂಡಿವೆ. ಇವು ವಿಸ್ಮಯ ಮತ್ತು

ಕುತೂಹಲವನ್ನುಂಟು ಮಾಡುತ್ತವೆ. ಇವು ದೇವರ ಭಯದ ಹಿನ್ನಲೆಯಲ್ಲಿ ನಡೆಯುವ ಹರಕೆ ರೂಪದ ಆಚರಣೆಗಳಾಗಿವೆ. ಇವನ್ನು ಸಾಮಾನ್ಯ ದಿನಗಳಲ್ಲಿ ಮಾಡಲು ಸಾಧ್ಯವಿಲ್ಲ. ಇಲ್ಲಿ ಹಲವಾರು ಕಟ್ಟುಪಾಡುಗಳಿಂದ ಅತಿಮಾನುಷ ಕ್ರಿಯೆಯಾಗಿ ನೆರವೇರುವುದರಿಂದ ಪವಾಡಗಳೆಂದು ಕರೆಯುತ್ತಾರೆ. ಇವು ದೇವರ ಮಹಿಮೆಯನ್ನು ಜಗತ್ತಿಗೆ ಸಾರುವ ಪ್ರಭಾವಿ ಆಚರಣೆಗಳಾಗಿವೆ. ಇಲ್ಲಿ ಜನಪದರು ದೇವರ ಬಗ್ಗೆ ಇಟ್ಟಿರುವ ಅಪಾರ ಭಕ್ತಿ ವ್ಯಕ್ತವಾಗುತ್ತದೆ. ಪ್ರಸ್ತುತ ಅಧ್ಯಯನದ ರಂಗನಾಥ ಪವಾಡ ಪುರುಷನನ್ನಾಗಿ ಜನಸಮುದಾಯಗಳು ಸ್ವೀಕರಿಸಿಕೊಂಡಿವೆ. ಮುಖ್ಯವಾಗಿ ಎರಡು ರೀತಿಯ ಆಚರಣೆಗಳು ಪ್ರಸ್ತುತವು ಅಸ್ತಿತ್ವದಲ್ಲಿವೆ. ಅವು ಕೆಳಕಂಡಂತಿವೆ.

**ಗುಂಟಿಕೆ ಸೇವೆ :**

ರಂಗನಾಥನು ಸತ್ತ ವ್ಯಕ್ತಿಯನ್ನು ಬದುಕಿಸಿದ ಪವಾಡವು 'ಗುಂಟಿಕೆ ಸೇವೆ' ಎಂಬ ಹೆಸರಿನಲ್ಲಿ ಚಿತ್ರದುರ್ಗ ಜಿಲ್ಲೆಯ ಹೊಳಲಕೆರೆ ತಾಲೂಕಿನ ಗೀಲಕೇನಹಳ್ಳಿಯ ಶ್ರೀಲಕ್ಷ್ಮೀ ರಂಗನಾಥಸ್ವಾಮಿ ಸನ್ನಿಧಾನದಲ್ಲಿ ವರ್ಷಕ್ಕೊಮ್ಮೆ ತಪ್ಪದೆ ನಡೆಯತ್ತದೆ. ಇದು ಸತ್ತ ವ್ಯಕ್ತಿಯನ್ನು ಬದುಕಿಸುವ ಪವಾಡವಾಗಿದೆ. ಸ್ವಾಮಿಯ ಐತಿಹ್ಯದಲ್ಲಿ ಬರುವಂತೆ ಸ್ವಾಮಿಯು ಗೀಲಕೆನಹಳ್ಳಿ ಗ್ರಾಮಕ್ಕೆ ದಾಸಯ್ಯನ ಜೊತೆಯಲ್ಲಿ ಅವನ ಭವನಾಸಿಯಲ್ಲಿ ಬರುತ್ತಾನೆ. ನಂತರ ದಾಸಯ್ಯ ಸತ್ತ ವ್ಯಕ್ತಿಯ ಮನೆಗೆ ಭಿಕ್ಷೆಗೆ ಹೋಗುತ್ತಾನೆ. ಭಿಕ್ಷೆ ನೀಡಿದರೆ ಸತ್ತ ವ್ಯಕ್ತಿಯನ್ನು ಬದುಕಿಸಿ ಕೊಡುವುದಾಗಿ ಎಂದು ಹೇಳುತ್ತಾನೆ. ಪ್ರಸ್ತುತ ಗ್ರಾಮದಲ್ಲಿ ದೊಳ್ಳೇರ ಮತ್ತು ಮಂಗೋಳ ವಂಶದವರು ಈ ಪದ್ಧತಿಯನ್ನು ಆಚರಿಸಿಕೊಂಡು ಬರುತ್ತಾರೆ. ಆಚರಣೆಯು ನಿಜಕ್ಕೂ ಕುತೂಹಲ ಮತ್ತು ವಿಸ್ಮಯವನ್ನು ಉಂಟು ಮಾಡುತ್ತದೆ. ಜೊತೆಗೆ ದೇವರ ಕುರಿತಾಗಿ ಭಯ, ಭಕ್ತಿ ಹುಟ್ಟುವಂತೆ ಮಾಡುತ್ತದೆ.

ಪ್ರತಿ ವರ್ಷ ಚೈತ್ರ ಮಾಸದಲ್ಲಿ ನಡೆಯುವ ಜಾತ್ರೆಯಲ್ಲಿ ಸಾಂಕೇತಿಕವಾಗಿ ನಡೆಸಲಾಗುತ್ತದೆ. ಪ್ರಸ್ತುತ ಎರಡು ಮನೆತನದವರಲ್ಲಿ ಒಬ್ಬ ಅಳಿಯನು ಆಚರಣೆಯಲ್ಲಿ ಭಾಗಿಯಾಗುತ್ತಾನೆ. ಆಚರಣೆಯು ರಾತ್ರಿ ೮ ಗಂಟೆಗೆ ವಿವಿಧ ವಾದ್ಯಗಳ ನೂರಾರು ಭಕ್ತರ ಸಮ್ಮುಖದಲ್ಲಿ, ನಡೆಯುತ್ತದೆ. ಆಚರಣೆಯ ಸಂದರ್ಭದಲ್ಲಿ ಎಲ್ಲರು ಸೇರಿಕೊಂಡು ದೇವಾಲಯದಿಂದ ಗೊತ್ತುಪಡಿಸಿದ ಆ ಎರಡು ವಂಶದವರ ಮನೆಗೆ ಹೋಗುತ್ತಾರೆ. ಅಲ್ಲಿ ಪವಾಡ ಮಾಡುವ ಅಳಿಯನನ್ನು ಕರಿಕಂಬಳಿ ಹಾಸಿ ಅದರ ಮೇಲೆ ಕೂಡಿಸಿ ಪೂಜೆ ಮಾಡುತ್ತಾರೆ. ನಂತರ ಆತನನ್ನು ಪವಾಡ ಬೀಳುವ ಸ್ಥಳಕ್ಕೆ ಮೆರವಣಿಗೆಯ ಮೂಲಕ ಕರೆದುಕೊಂಡು ಹೋಗುತ್ತಾರೆ. ಅಂದರೆ ಮತ್ತೊಂದು ಮನೆಗೆ ಕರೆದುಕೊಂಡು ಹೋಗಿ ಅಲ್ಲಿ ಹೊಸ ಬಟ್ಟೆ ತೊಡಿಸುತ್ತಾರೆ. ಕರಿಕಂಬಳಿ ಹಾಸಿ ಅದರ ಮೇಲೆ ಕೂಡಿಸಿ ಪೂಜೆ ಮಾಡುತ್ತಾರೆ. ದಾಸಪ್ಪ ವಿವಿಧ ರೀತಿಯ ಮಂತ್ರ ಹೇಳುತ್ತಾ ಧೂಪ

ಹಾಕುತ್ತಾನೆ. ಎಲ್ಲರು ರಂಗನಾಥನ ನಾಮದ ಝೇಂಕಾರ ಹಾಕುತ್ತಾರೆ. ವಿವಿಧ ರೀತಿಯಲ್ಲಿ ಪೂಜೆ ಕೈಗೊಂಡ ನಂತರ, ಆತನನ್ನು ಮನೆಯಿಂದ ಹೊರಗೆ ಕರೆದುಕೊಂಡು ಬರುವಾಗ ನಾಲ್ಕು ಜನ ಅವನನ್ನು ಹೊತ್ತುಕೊಂಡು (ಮಲಗಿದ ರೀತಿಯಲ್ಲಿ) ಹೊರಕ್ಕೆ ಬರುತ್ತಾರೆ. ಅಲ್ಲಿ ವಿವಿಧ ವಾದ್ಯಗಳ ಜೊತೆ ರಂಗನಾಥನ ಝೇಂಕಾರ ಮಾಡುತ್ತಾ ಮೆರವಣಿಗೆ ಮೂಲಕ ಪವಾಡ ನಡೆಯುವ ಸ್ಥಳಕ್ಕೆ ಕರೆದುಕೊಂಡು ಬರುತ್ತಾರೆ. ಈ ಸ್ಥಳಕ್ಕೆ ಆಗಮಿಸುವುದಕ್ಕಿಂತ ಮುಂಚೆಯೇ ಮೆರವಣಿಗೆಯಲ್ಲಿ ಆತನ ಜೀವ (ಪ್ರಾಣ) ಹೋಗಿರುತ್ತದೆ ಎಂದು ನೆರೆದ ಎಲ್ಲ ಜನರು ಭಾವಿಸುತ್ತಾರೆ. ಪವಾಡ ನಡೆಯುವ ಸ್ಥಳದಲ್ಲಿ ಆತನನ್ನು ಸತ್ತ ವ್ಯಕ್ತಿಯಂತೆ ಕೂಡಿಸಿ, ಪೂಜಿಸಿ, ಅಲಂಕರಿಸುತ್ತಾರೆ. ಬಾಯಿಯಲ್ಲಿ ಅಕ್ಕಿಕಾಳು, ಮೂಗಿನಲ್ಲಿ, ಕಿವಿಯಲ್ಲಿ ಹತ್ತಿಯನ್ನು ಇಟ್ಟಿರುತ್ತಾರೆ. ನಂತರ ಪೂಜಾರಿಯು ಧೂಪ ಬೆಳಗುವಾಗ ನೆರೆದ ಭಕ್ತರೆಲ್ಲರೂ ಝೇಂಕಾರ ಹಾಕುತ್ತಾ, ಗೋವಿಂದ ಎಂದು ಭಕ್ತಿಯಿಂದ ಕಿರುಚ್ಚುತ್ತಾರೆ. ನಂತರ ಸತ್ತ ವ್ಯಕ್ತಿಗೆ ಪ್ರಾಣ ಬಂದು ಕೂಡಿಸಿದ ಸ್ಥಳದಿಂದ ಎತ್ತರಕ್ಕೆ ಜಿಗಿಯುತ್ತಾನೆ. ಎಲ್ಲರೂ ಪ್ರಾಣ ಬಂತು ಎಂದು ಆತನನ್ನು ಹೊತ್ತುಕೊಂಡು ರಂಗನಾಥನ ಗರ್ಭಗುಡಿಯಲ್ಲಿ ದೇವರ ಸಮ್ಮುಖದಲ್ಲಿ ಮಲಗಿಸುತ್ತಾರೆ. ಸ್ವಲ್ಪ ಸಮಯದ ನಂತರ ಅವನಿಗೆ ಪ್ರಜ್ಞೆ ಬರುತ್ತದೆ.

ಈ ಆಚರಣೆ ಪೂರ್ಣ ರೀತಿಯಲ್ಲಿ ಭಯ ಮತ್ತು ಭಕ್ತಿಯಿಂದ ನಡೆಯುವಂತ್ತದ್ದಾಗಿದೆ. ಈ ಸಂದರ್ಭದಲ್ಲಿ ನೆರೆದಿರುವ ನೂರಾರು ಭಕ್ತರಲ್ಲಿಯೂ ಆ ದಿನ ಭಯದ ವಾತಾವರಣ ತುಂಬಿರುತ್ತದೆ. ಪವಾಡಕ್ಕೆ ಒಳಗಾದ ವ್ಯಕ್ತಿಯನ್ನು ವಿಚಾರಿಸಿದಾಗ ಆತನು ತನಗೆ ಪ್ರಜ್ಞೆಯೇ ಇರುವುದಿಲ್ಲ ಎಂದು ಒಪ್ಪಿಕೊಳ್ಳುತ್ತಾನೆ. ಬಹುಶಃ ಇದು ಸತ್ಯ ಅಥವಾ ಸುಳ್ಳು ಎಂದು ಯಾರು ಪ್ರಶ್ನೇಯನ್ನೇ ಮಾಡುವುದಿಲ್ಲ ಮತ್ತು ಪರೀಕ್ಷಿಸಿಯು ನೋಡಿಲ್ಲ. ಕಾರಣ ಎಲ್ಲರಿಗೂ ದೇವರ ಮೇಲೆ ನಂಬಿಕೆ. ಪರಿಕ್ಷೀಸಿದರೆ ಎಲ್ಲಿ ತಮಗೆ ತಮ್ಮ ಕುಟುಂಬಕ್ಕೆ ಆಪತ್ತು ಬರುತ್ತದೆಂದು ಜನಸಮುದಾಯದಲ್ಲಿ ಆವರಿಸಿದೆ. ಆ ಉದ್ದೇಶದಿಂದಲೇ ಈ ಪರಂಪರೆ, ಆಚರಣೆಯು ಮುಂದುವರೆದುಕೊಂಡು ಬಂದಿದೆ. ಆದರೂ ಇದು ಗಮನಾರ್ಹವಾದ ಆಚರಣೆಯಾಗಿದೆ. ನೂರಾರು ಜನರನ್ನು ಆಕರ್ಷಿಸಿದೆ.

**ಗುಂಡಿನ ಸೇವೆ :**

ಪ್ರಸ್ತುತ ಆಚರಣೆಯು ಚಿತ್ರದುರ್ಗ ಜಿಲ್ಲೆಯ ಹೊಳಲಕೆರೆ ತಾಲೂಕಿನ ಹೊರಕೆರಿದೇವರಪುರದಲ್ಲಿ ಶ್ರೀ ಲಕ್ಷ್ಮೀರಂಗನಾಥಸ್ವಾಮಿ ಮತ್ತು ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ದೇವರ ಸಮ್ಮುಖದಲ್ಲಿ ನಡೆಯುತ್ತದೆ. ಪ್ರಾರಂಭದಲ್ಲಿ ಪ್ರತಿ ವರ್ಷ ಜಾತ್ರೆಯ ಸಂದರ್ಭದಲ್ಲಿ ನಡೆಯುತ್ತಿರುವ ಆಚರಣೆ ಪ್ರಸ್ತುತ ಸಂದರ್ಭದಲ್ಲಿ ೧೨ ವರ್ಷಗಳಿಗೊಮ್ಮೆ ನಡೆಯುತ್ತದೆ. ಈ ಆಚರಣೆಗೆ ಐತಿಹ್ಯವೇ

ಮೂಲವಾಗಿದೆ. ಇಲ್ಲಿ ರಂಗನಾಥನು ಶಿಕ್ಷಿಸುವ ದೈವವಾಗಿ ನೆಲೆಗೊಂಡಿದ್ದಾನೆ. ಭಕ್ತರು ತಪ್ಪನ್ನು ಮಾಡಿದರೆ, ಸುಳ್ಳು ಹೇಳಿದರೆ ದೇವರು ಶಿಕ್ಷಿಸುತ್ತದೆಂಬ ನಂಬಿಕೆ ಇದೆ.

ಈ ಕಾರ್ಯಕ್ಕೆ ಗುಂಡಿನ (ಕಲ್ಲು) ದಾಸಯ್ಯನನ್ನು ನೇಮಿಸಲಾಗಿದ್ದು ಪಟ್ಟದ ದಾಸಯ್ಯ, ಗುಂಡಿನ ದಾಸಯ್ಯ ಎಂದು ಕರೆಯುತ್ತಾರೆ. ದಾಸಯ್ಯ ವಂಶಸ್ಥರು ಪಕ್ಕದ ಗ್ರಾಮದ ನಂದನ ಹೊಸೂರಿನವರಾಗಿದ್ದು ಇವರ ಮನೆ ದೈವ ನಂದನ ಹೊಸೂರಿನ ಆಂಜನೇಯ ಸ್ವಾಮಿಯಾಗಿದೆ. ಗುಂಡಿನ ಸೇವೆ ಧಾರ್ಮಿಕ ಕಾರ್ಯಕ್ಕೆ ನೇಮಿಸುವ ಪ್ರತಿ ದಾಸಯ್ಯನು ತಮ್ಮ ಮನೆ ದೈವ ಆಂಜನೇಯ ಸ್ವಾಮಿಗೆ ಮೊದಲು ಪೂಜೆ ಸಲ್ಲಿಸಬೇಕು. ನಂತರ ೯ ದಿನಗಳ ಕಾಲ ಹಾಲು ಹಣ್ಣು ಸೇವನೆ ಮಾಡುತ್ತಾ ಶ್ರೀರಂಗನಾಥಸ್ವಾಮಿ ದೇವಾಲಯದಲ್ಲಿ ಉಳಿದುಕೊಂಡಿರುತ್ತಾನೆ. ನಂತರ ಗುಂಡಿನ ಸೇವೆ ಸಂದರ್ಭದಲ್ಲಿ ನೇಮಿಸಿದ ದಾಸಯ್ಯನನ್ನು ದೇವರ ಸಮ್ಮುಖದಲ್ಲಿ ಮಲಗಿಸುತ್ತಾರೆ. ಆತನ ಎದೆಯ ಮೇಲೆ ದೊಡ್ಡದಾದ (ಮಧ್ಯಮ ಗಾತ್ರದ ವೃತ್ತಾಕಾರದ) ಮೂರು ಗುಂಡುಕಲ್ಲುಗಳನ್ನು ಒಂದಾದ ಮೇಲೊಂದು ಇಟ್ಟು, ಕಬ್ಬಿಣದ ಚಮ್ಮಟಿಯಿಂದ ಒಂದೊಂದು ಗುಂಡಿಗೂ ಮೂರು ಏಟಿನಂತೆ ಹೊಡೆಯಲಾಗುತ್ತದೆ.

ಈ ರೀತಿಯ ಆಚರಣೆಗಳಿಗೆ ಅರ್ಥವನ್ನು ನೀಡುವುದು ಕಷ್ಟದ ಕೆಲಸ. ಇವು ದೇವರ ಹೆಸರಿನಲ್ಲಿ, ಮಹಿಮೆಯಲ್ಲಿ ನಡೆಯುವಂತವು. ಭಕ್ತರಿಗೂ ದೇವರ ಮೇಲೆ ಅಪಾರ ನಂಬಿಕೆ, ವಿಶ್ವಾಸ ಭಕ್ತಿ ಇರುವುದನ್ನು ತೋರಿಸುತ್ತದೆ. ಅಲ್ಲದೆ ತಪ್ಪು ಮಾಡಿದರೆ ದೇವರು ಶಿಕ್ಷೆಯನ್ನು ಕೊಡುತ್ತಾನೆ ಎನ್ನುವುದನ್ನು ಸಂಕೇತಿಸುವಲ್ಲಿ ಸಹಾಯಕವಾಗಿವೆ.

**ಮಣೇವು :**

ದೇವರಿಗೆ ಶರಣಾಗುವ, ಭಕ್ತಿಯಿಂದ ನಮಸ್ಕರಿಸುವ ಪದ್ಧತಿಯು ಮಣೇವು ಆಚರಣೆಯಲ್ಲಿ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಭಕ್ತರು ದೇವರಿಗೆ ಪೂಜೆಯನ್ನು ಸಲ್ಲಿಸಿದ ನಂತರ ಎಡೆ ಮಾಡುತ್ತಾರೆ. ಈ ಸಂದರ್ಭದಲ್ಲಿ ದಾಸಪ್ಪನು ಆ ಎಡೆಯನ್ನು ಪೂಜಿಸಿ, ಅದರ ಸುತ್ತಲು ಶಂಖ, ಜಾಗಟೆ, ಬಾರಿಸುತ್ತಾ ಪ್ರದಕ್ಷಿಣೆ ಹಾಕುತ್ತಾನೆ. ನಂತರ ಆ ಎಡೆಯ ಮುಂದೆ ರಂಗನಾಥನನ್ನು ಸ್ಮರಿಸುತ್ತಾ, ಮಲಗಿಕೊಂಡು ಆ ಎಡೆಯನ್ನು ತಿನ್ನುತ್ತಾನೆ. ತಿಂದು ಉಳಿದುದನ್ನು ಪ್ರಸಾದವೆಂದು ಭಕ್ತರಿಗೆ ಹಂಚುವರು. ಇದಾದ ನಂತರ ದಾಸಯ್ಯನಿಗೆ ಮೀಸಲು ಊಟ ಬಡಿಸಿ ದಕ್ಷಿಣೆಯಿಂದ ಸಂತೃಪ್ತಿ ಪಡಿಸುತ್ತಾರೆ. ಆಚರಣೆಯು ಜಾತಿ ಕಟ್ಟಲೆಯನ್ನು ಮೀರಿ ನಡೆಯುವಂತಾಗಿದೆ. ಆತನು ತಿಂದು ಬಿಟ್ಟಿರುವುದನ್ನು ಉಳಿದವರೆಲ್ಲರೂ ತಿನ್ನುವುದು ಭಕ್ತಿ, ನಂಬಿಕೆ ಮುಖ್ಯವಾದುದು ಎಂಬುದನ್ನು ತೋರ್ಪಡಿಸುತ್ತದೆ. ಅಲ್ಲದೇ ಇಲ್ಲಿ ದಾಸಯ್ಯ ಆ ಎಡೆಯನ್ನು ತಿನ್ನುವಾಗ ಮಲಗಿ ತಿನ್ನುವುದು ವಿಶೇಷವಾಗಿದೆ. ಅದು ನಾಯಿ ತಿನ್ನುವ ರೀತಿಯಲ್ಲಿ ಇರುತ್ತದೆ. ಈ ರೀತಿಯ

ಆಚರಣೆಯು ಮೈಲಾರ ಪಂಥದಲ್ಲಿ ದೋಣಿ ತುಂಬಿಸುವ ಆಚರಣೆಯಲ್ಲಿ ನಡೆಯುತ್ತದೆ. ಈ ಪದ್ಧತ್ತಿಯನ್ನು ರಂಗನಾಥ ಸಂಪ್ರದಾಯವು ರೂಢಿಸಿಕೊಂಡಿರುವುದನ್ನು ಸೂಚಿಸುತ್ತದೆ.

**ಪಂಜಿನ ಸೇವೆ :**

ಸಾಮಾನ್ಯವಾಗಿ ದೇವರುಗಳ ಆಚರಣೆಗಳಲ್ಲಿ ಪಂಜಿನ ಸೇವೆ ನಡೆಯುತ್ತದೆ. ಎರಡು ಕೈಗಳಲ್ಲಿ ಎರಡು ಪಂಜನ್ನು ಹಿಡಿದು ಒಂದು ವಿಧವಾಗಿ ನಮಸ್ಕರಿಸುವುದು ಇದರ ವೈಶಿಷ್ಟ್ಯ. ಇದನ್ನು ಜ್ಯೋತಿ ಸೇವೆ, ದಿವಟಿಗೆ ಸಲಾಮು ಎಂದು ಕರೆಯುತ್ತಾರೆ. ರಂಗನಾಥನ ಜಾತ್ರೆ ಆಚರಣೆಯಲ್ಲಿ ಪಂಜಿನ ಸೇವೆ ತಪ್ಪದೇ ನಡೆಯುತ್ತದೆ. ಪಂಜು ಹಿಡಿಯುವವರು ಮಡಿವಾಳ ಸಮುದಾಯದವರಾಗಿರುತ್ತಾರೆ. ಇದು ಅವರ ಕುಲಕಸಬು ಹೌದು. ಅದನ್ನು ವಂಶ ಪಾರಂಪರಿಕವಾಗಿ ಇಂದಿಗೂ ಮುಂದುವರಿಸಿಕೊಂಡು ಬಂದಿದ್ದಾರೆ. ಪ್ರಸ್ತುತ ಇದು ಅವರ ಹಕ್ಕಿನ ವಿಷಯವಾಗಿ ಪರಿಣಮಿಸಿದೆ. ಇಲ್ಲಿ ಅಗ್ನಿ ಶುಭ ಹಾಗೂ ಶಾಂತಿಯ ಸಂಕೇತ. ಜೊತೆಗೆ ದೇವರಿಗೆ ಗೌರವ ಸೂಚಕವಾಗಿ ಬಳಸಲಾಗುತ್ತದೆ. ಇದು ವಿಜಯನಗರ ಕಾಲದಲ್ಲಿ ಹೆಚ್ಚು ಪ್ರಚಲಿತಕ್ಕೆ ಬಂದಿರುವುದು ಕಂಡುಬರುತ್ತದೆ.

**ಉರಿಪಂಜಿನ ಸೇವೆ :**

ರಂಗನಾಥ ದೇವರಿಗೆ ಪಂಜಿನ ಸೇವೆಯ ಜೊತೆಗೆ ಉರಿಪಂಜಿನ ಸೇವೆಯು ಕಂಡುಬರುತ್ತದೆ. ಇದು ನೆರೆದ ಭಕ್ತರೆಲ್ಲರನ್ನು ಗಮನ ಸೆಳೆಯುವ ಸೇವೆಯಾಗಿದೆ. ಗರುಡಗಂಬದ ಬತ್ತಿಯಂಥಹ ಪುಟ್ಟ ಪಂಜುಗಳನ್ನು(ಬತ್ತಿಗಳು) ಎಣ್ಣೆಯಲ್ಲಿ ಅದ್ದಿ ಬೆಂಕಿಯಿಂದ ಉರಿಸುತ್ತಾ ಅವುಗಳನ್ನು ಸ್ವಾಮಿಗೆ ಬೆಳಗಿ ಬಾಯೊಳಗಿಟ್ಟುಕೊಳ್ಳುವ ಸೇವೆಯಾಗಿದೆ. ಹೆಚ್ಚಿನ ರಂಗನಾಥ ಸ್ವಾಮಿಯ ನೆಲೆಗಳಲ್ಲಿ ಈ ರೀತಿಯ ಆಚರಣೆಯು ಕಂಡುಬರುತ್ತದೆ. ಆದರೆ ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲೂಕಿನ ಗವಿರಂಗನಾಥಪುರದಲ್ಲಿ ವಿಶೇಷವಾಗಿ ಈ ಆಚರಣೆಯು ಕಂಡುಬರುತ್ತದೆ. ಇಲ್ಲಿ ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿಯ ದೇವಾಂಗದ ದಾಸಪ್ಪನು 'ಉರಿಪಂಜಿನ ಸೇವೆಯನ್ನು' ವಿಶೇಷ ರೀತಿಯ ಪೋಷಾಕನ್ನು ಧರಿಸಿ ಮಾಡುವುದು ಕಂಡುಬರುತ್ತದೆ. ಈತನು ಸೇವೆ ಸಲ್ಲಿಸುವ ಸಂದರ್ಭದಲ್ಲಿ ಕಾಲುಗಳು ಮತ್ತು ಕುತ್ತಿಗೆಗೆ ಕಬ್ಬಣದ ಸರಪಳಿ ಮತ್ತು ಕೊರಳಗತ್ತರಿ ಹಾಕಿಕೊಂಡಿರುತ್ತಾನೆ. ಈತನು ದೇಹವನ್ನು ಬಾಗಿಸಿಕೊಂಡೇ ಸೇವೆ ಸಲ್ಲಿಸಬೇಕು. ಸ್ವಲ್ಪ ತಲೆ ಎತ್ತಿದರೂ ಕೊರಳಗತ್ತರಿಯಿಂದ ನಂಜಾಗುವ (ವಿಷ ಗಾಯವಾಗುವ) ಸಾಧ್ಯತೆಯಿರುತ್ತದೆ. ಇದೇ ರೀತಿ ನಾಲ್ಕು ದಿಕ್ಕುಗಳಿಗೂ ಅವನು ಸೇವೆ ಸಲ್ಲಿಸುವನು.

**ಅನ್ನದ ಕೋಟೆ ಸೇವೆ :**

ಚಿತ್ರದುರ್ಗ ಜಿಲ್ಲೆಯ ಹೊಳಲಕೆರೆ ತಾಲೂಕಿನ ಹೊರಕೆರೆದೇವರಪುರ ಮತ್ತು ಹೊಸದುರ್ಗ ತಾಲೂಕಿನ ದುಗ್ಗಾವರದಲ್ಲಿ ವಿಶೇಷವಾಗಿ ಈ ಆಚರಣೆ ನಡೆಯುತ್ತದೆ. ಅನ್ನದ ಕೋಟೆ ಸೇವೆಯ

ಪ್ರಯುಕ್ತ ದೇವಾಲಯದಲ್ಲಿ ಭಕ್ತರು ಹೊತ್ತ ಹರಕೆಯಿಂದ ನೀಡಿದ ಅಕ್ಕಿಯಿಂದ ಅನ್ನವನ್ನು ಮಾಡುತ್ತಾರೆ. ನಂತರ ಅದಕ್ಕೆ ಬಾಳೆ ಹಣ್ಣು, ಮೊಸರು, ಕರಿಎಳ್ಳು, ಹಾಲು, ಬೆಣ್ಣೆ, ತುಪ್ಪ, ಜೇನುತುಪ್ಪ, ದ್ರಾಕ್ಷಿ, ಗೋಡಂಬಿ, ಉತ್ತುತ್ತಿ ಮೊದಲಾದ ಪದಾರ್ಥಗಳನ್ನು ಮಿಶ್ರಣಮಾಡಿ ಕೋಟೆಯನ್ನು ಹೋಲುವಂತೆ ಅನ್ನದ ಕೋಟೆಯನ್ನು ನಿರ್ಮಾಣ ಮಾಡುತ್ತಾರೆ. ಕೋಟೆ ನಿರ್ಮಿಸುವಾಗ ನಾಲ್ಕು ಮೂಲೆಯಲ್ಲೂ ಎತ್ತರವಾಗಿ ನಾಲ್ಕು ಮೂಲೆಗಳು ಬರುವಂತೆ ಚೌಕಾಕಾರದಲ್ಲಿ ನಿರ್ಮಿಸಿ ರಂಗನಾಥನನ್ನು ಪೂಜಿಸುತ್ತಾರೆ. ನಂತರ ಆ ಅನ್ನವನ್ನು ದೇವರ ಪ್ರಸಾದವೆಂದು ಕೈವಾಡದವರಿಗೆ ಮತ್ತು ಭಕ್ತರಿಗೆಲ್ಲ ವಿನಿಯೋಗಿಸಲಾಗುತ್ತದೆ.

ಪ್ರಸ್ತುತ ಆಚರಣೆಯು ವಿಜಯನಗರ ಕಾಲದ ರಾಮಾನುಜಕೂಟಗಳನ್ನು ಹೋಲುವಂತದ್ದಾಗಿದೆ. ರಾಮಾನುಜ ಕೂಟಗಳು ಪ್ರಸಾದ ನಿಲಯಗಳಾಗಿದ್ದು, ಇಲ್ಲಿ ಪರಸ್ಥಳದ ಹಾಗೂ ಸ್ಥಳೀಯ ಶ್ರೀವೈಷ್ಣವ ಪಂಥಾನುಯಾಯಿಗಳಿಗೆ ಉಚಿತ ಭೋಜನ ವ್ಯವಸ್ಥೆ ಮಾಡಲಾಗುತ್ತಿತ್ತು. ಈ ಕೂಟದಲ್ಲಿ ಸಿದ್ಧ ಪಡಿಸಲಾಗುತ್ತಿದ್ದ ಆಹಾರವನ್ನು ಶ್ರೀವೈಷ್ಣವರಿಗೆ 'ನೈವೇದ್ಯ' ವೆಂತಲು ಇತರರಿಗೆ ಪ್ರಸಾದವೆಂತಲು ವಿತರಿಸಲಾಗುತ್ತಿತ್ತು.[೪] ರಾಮಾನುಜ ಕೂಟಗಳು ಭೋಗಮಂಟಪ, ಪ್ರಸಾದ ನಿಲಯ, ಭೋಜನಾಶಾಲಾ ಈ ಬಗೆಯ ಕಟ್ಟಡ ಸ್ವರೂಪವನ್ನು ಹೊಂದಿದವುಗಳಾಗಿದ್ದರಿಂದ ಇಲ್ಲಿ ಅನ್ನದ+ಕೋಟೆ ಅಂದರೆ ಭೋಜನಾಲಯದ ಕಟ್ಟಡ, ಕೋಟೆ ಎಂದಾಗಿದ್ದು ಅನ್ನದ ಕೋಟೆ ಸೇವೆಯಾಗಿ ಪರಿವರ್ತನೆಗಳಾಗಿರಬಹುದು.

**ಅಂಬು :**

ವಿಜಯದಶಮಿಯ ಅಂಬಿನೋತ್ಸವದಲ್ಲಿ ರಂಗನಾಥನು ಪ್ರಮುಖವಾಗಿ ಭಾಗಿಯಾಗುತ್ತಾನೆ. ದೇವಾಲಯದಿಂದ ಸ್ವಾಮಿಯ ಉತ್ಸವವು ಸಕಲ ವಾದ್ಯ ಮೇಳದಿಂದ ಮೆರವಣಿಗೆಯ ಮೂಲಕ ಅಂಬು ನಡೆಯುವ ಸ್ಥಳಕ್ಕೆ ಬರುತ್ತದೆ. ಅಲ್ಲಿ ಸ್ವಾಮಿಯು ವಿಶೇಷ ಪೂಜೆಯನ್ನು ಸ್ವೀಕರಿಸುತ್ತದೆ. ನಂತರ ಶಮಿವೃಕ್ಷದ ಹತ್ತಿರ ದೇವರ ಪರಿಕರಗಳಾದ ಬಿಲ್ಲು, ಬಾಣ, ಕತ್ತಿ, ಕಠಾರಿ ಮೊದಲಾದ ಆಯುಧಗಳನ್ನು ಶಮಿ ಮರದ ಬುಡಕ್ಕೆ ಇಟ್ಟು ಪೂಜೆ ಮಾಡುತ್ತಾರೆ. ನಂತರ ದೇವರ ಪೂಜಾರಿಯು ಶಮೀವೃಕ್ಷಕ್ಕೆ ಮೂರು ಸಾರಿ ಅಂಬು (ಬಾಣ) ಹೊಡೆಯುತ್ತಾನೆ. ಬಿಲ್ಲಿಗೆ ಬಾಣ ಹೂಡಿ ಪೂರ್ವ, ಈಶಾನ್ಯ, ಹಾಗೂ ಆಗ್ನೇಯ ದಿಕ್ಕುಗಳಿಗೆ ಬಾಣವನ್ನು ಬಿಡುತ್ತಾನೆ. ಈ ಬಾಣಗಳು ನೇರವಾಗಿ ಬಿದ್ದರೆ ಉತ್ತಮ ಮಳೆ, ಬೆಳೆ ಸಮೃದ್ಧಿಯೆಂಬುದು ಹಾಗೂ ಬಾಣವೇನಾದರೂ ನೆಲಕ್ಕೆ ಬಿದ್ದ ಮೇಲೆ ತಿರುಗಿ ಹಿಮ್ಮುಖವಾಗಿ ಬಿದ್ದರೆ ತೊಂದರೆ ಎನ್ನುವ ನಂಬಿಕೆ ಜನಮನದಲ್ಲಿದೆ. ಅಲ್ಲದೆ ಈ ಸಂದರ್ಭದಲ್ಲಿ ಮೊಲ, ನರಿ ಪೂಜೆಮಾಡಿ ಬಿಡುವ ಸಂಪ್ರದಾಯವಿದೆ.

**ಬಿದಿರುಮೆಳೆ ಉತ್ಸವ :**

ಸೋಲಿಗರಲ್ಲಿ ನಡೆಯುವ ಒಂದು ವಿಲಕ್ಷಣವಾದ ಸಂಪ್ರದಾಯವನ್ನು ಅನುಸರಿಸುವ ಉತ್ಸವ ಇದಾಗಿದೆ. ಇದಕ್ಕೆ ಬಿದಿರುಮೆಳೆ ಉತ್ಸವ ಎಂದು ಕರೆಯುತ್ತಾರೆ. ತಮ್ಮ ಸಂಬಂಧಿ ಅಂದರೆ ಭಾವನಾದ ರಂಗನಾಥನ ಮನ ಸಂತೋಷಕ್ಕಾಗಿ ಈ ಉತ್ಸವ ಆಚರಿಸುತ್ತಿದ್ದೇವೆ ಎಂಬುವುದು ಸೋಲಿಗರ ಬಲವಾದ ನಂಬಿಕೆ.

ಪ್ರತಿವರ್ಷ ಮೇ ತಿಂಗಳಲ್ಲಿ ನಡೆಯುವ ಜಾತ್ರೆಯ ವೇಳೆ ದೇವಾಲಯದ ಆಸುಪಾಸಿನಲ್ಲಿ ಬಿದಿರು ಮೆಳೆ ಸೇವೆ ನಡೆಯುತ್ತದೆ. ಸೋಲಿಗರ ಜನಾಂಗಕ್ಕೆ ಸೇರಿದ ಮಹಿಳೆಯರು ಸುತ್ತಲೂ ಇರುವ ಬಿದಿರುಮೆಳೆಗಳ ಹಿಂಡಿನ ಮರೆಯಲ್ಲಿ ಅಪರಿಚಿತ ಪುರುಷರೊಂದಿಗೆ ಲೈಂಗಿಕ ಸಂಬಂಧ ಬೆಳೆಸುತ್ತಾರೆ. ಕೆಲವರು ಹರಕೆಯ ರೂಪದಲ್ಲಿಯೂ ಈ ಆಚರಣೆ ನಡೆಸುತ್ತಾರೆ. ಈ ಆಚರಣೆ ಯಾವ ಕಾಲದಿಂದ ಪ್ರಾರಂಭವಾಯಿತು ಎಂಬ ಬಗ್ಗೆ ನಿಖರವಾದ ಮಾಹಿತಿಯಿಲ್ಲ. ಇಲ್ಲಿ ಭಾಗವಹಿಸುವ ಮಹಿಳೆಯರು ಬರೇ ಸೋಲಿಗ ಜನಾಂಗದವರಾಗಿದ್ದರು ಅದು ಅವರ ಒಳಗೇ ನಡೆಯುವ ಅಚರಣೆಯಲ್ಲ. ಈ ಆಚರಣೆಯ ದುರ್ಲಾಭ ಪಡೆಯುವ ಪುರುಷರು ಬೇರೆ ಬೇರೆ ಜನಾಂಗಗಳಿಗೆ ಸೇರಿದವರಾಗಿರುತ್ತಾರೆ. ಈ ರೀತಿಯಿಂದ ಮಕ್ಕಳೇನಾದರು ಆದರೆ ಅವುಗಳಿಗೆ ಬಿಳಿಗಿರಿ ರಂಗನಾಥ ಸ್ವಾಮಿಯ ಪ್ರಸಾದ ಎಂದು ಭಾವಿಸಿ ಯಾವುದೇ ಬೇದ ಭಾವವಿಲ್ಲದೆ ಪೋಷಣೆ ಮಾಡುತ್ತಾರೆ. ಮೊದಲು ದೇವಾಲಯದ ಹತ್ತಿರದಲ್ಲಿ ನಡೆಯುತ್ತಿದ್ದುದು ಪ್ರಸ್ತುತ ಸಂದರ್ಭದಲ್ಲಿ ಸುಮಾರು ಎರಡು ಕಿ.ಮೀ. ಅಂತರದಲ್ಲಿ ನಡೆಯುವ ಆಚರಣೆಯಾಗಿದೆ.[೨]

**ಸರಾಯಿ ನೈವೇದ್ಯ ಜೊತೆಗೆ ಸೇವನೆ :**

ವಿಶೇಷವಾಗಿ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಕೆಲವಡಿ ಗ್ರಾಮದಲ್ಲಿ ಈ ಆಚರಣೆ ಕಂಡುಬರುತ್ತದೆ. ಇಲ್ಲಿಯ ರಂಗನಾಥ ಸ್ವಾಮಿಯ ದೇವಾಲಯದಲ್ಲಿ ದೇವರಿಗೆ ಸರಾಯಿಯನ್ನು ನೈವೇದ್ಯವಾಗಿ ಬಳಸುತ್ತಾರೆ. ಜೊತೆಗೆ ದಾಸಪ್ಪನು ಪ್ರತಿ ಮನೆಗೆ ಎಡೆ ತಿರಿಸಲು ಹೋದಾಗ ಅಲ್ಲಿ ಗೋವಿಂದನ ನಾಮವನ್ನು ಹೇಳುವುದರ ಮೂಲಕ ಮೂರು ಬಾರಿ ಪ್ರದಕ್ಷಣೆ ಮುಗಿಯುವವರೆಗೂ ಪ್ರತಿ ಬಾರಿ ಸರಾಯಿಯನ್ನು ಸೇವಿಸುತ್ತಾರೆ. ಪ್ರಸ್ತುತ ಆಚರಣೆಯಲ್ಲಿ ದಾಸಪ್ಪನ ಮೇಲೆ ಆದಿಚುಂಚನ ಗಿರಿಯ ಜೋಗಿಯ ಪ್ರಭಾವ ಬೀರಿರುವುದನ್ನು ಕಾಣಬಹುದು.

**ಚಾವಟಿ ಸೇವೆ :**

ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲೂಕಿನ ಬುರಡೆಕಟ್ಟೆ ಗ್ರಾಮದಲ್ಲಿ ಜಾತ್ರೆಯ ಸಂದರ್ಭದಲ್ಲಿ ಚಾವಟಿ ಸೇವೆ ಆಚರಣೆಯು ನಡೆಯುತ್ತದೆ. ಅರಿಶಿಣ ಕುಂಕುಮ ಬಳಿದಿರುವ ಸುಮಾರು ಐದು ಆರು ಅಡಿ ಉದ್ದದ ಚಾವಟಿಯನ್ನು ಪೂಜಾರಿಯು ಹಿಡಿದುಕೊಂಡು ಉರಿಮೆ ವಾದ್ಯದ ಗತ್ತಿಗೆ

ತಕ್ಕಂತೆ ಕುಣಿಯುತ್ತಾ, ಹಾಡುತ್ತಾ ಆವೇಶದಿಂದ ಮೈಮೇಲೆ ಬೀಸಿ ಬಾರಿಸಿಕೊಳ್ಳುವುದುಂಟು. ದೇವರ ಮೇಲಿನ ಭಕ್ತಿಯನ್ನು ತೋರ್ಪಡಿಸುವಲ್ಲಿ ಭಕ್ತರು ತಮ್ಮನ್ನು ತಾವೇ ಶಿಕ್ಷಿಸಿಕೊಳ್ಳುವ ಇಲ್ಲಿ ಭಕ್ತಿಯೇ ಪ್ರಧಾನವಾಗಿ ಗೋಚರಿಸುತ್ತದೆ.

**ಹೊನ್ನೇರು ಚಪ್ಪರ :**

ಪ್ರಸ್ತುತ ಆಚರಣೆಯು ರಾಮನಗರ ಜಿಲ್ಲೆ, ಕನಕಪುರ ತಾಲೂಕಿನ ಕಬ್ಬಾಳು ಗ್ರಾಮದಲ್ಲಿ ನಡೆಯುತ್ತದೆ. ಇಲ್ಲಿ ಗ್ರಾಮದೇವತೆಯಾದ ಕಬ್ಬಾಳಮ್ಮನ ಗಂಡನಾದ ರಂಗಸ್ವಾಮಿಗೆ ಹೊನ್ನೇರು ಚಪ್ಪರದ ಆಚರಣೆಯಲ್ಲಿ ರಂಗಸ್ವಾಮಿ ವಿಗ್ರಹದ ತಲೆಯ ಮೇಲೆ ಕೆಂಡ ಸುರಿಯುವ ಪದ್ಧತಿ ಅನುಸರಿಸುತ್ತಾರೆ. ಇದು ಐದು ದಿನಗಳ ನಿರಂತರವಾಗಿ ನಡೆಯುವ ಆಚರಣೆಯಾಗಿದೆ. ಐತಿಹ್ಯದ ಪ್ರಕಾರ ರಂಗನಾಥ ಸ್ವಾಮಿಯು ಕಬ್ಬಾಳಮ್ಮನ ಜೊತೆ ಪಂದ್ಯದಲ್ಲಿ ಸೋತಾಗ ಅವಳು ರಂಗಸ್ವಾಮಿಯ ತಲೆಮೇಲೆ ಮೂರು ಹಿಡಿ ಕೆಂಡ ಹೊಯ್ಯುವಳು. ಪ್ರಸ್ತುತ ಈ ಪದ್ಧತಿ ಇಂದಿಗೂ ಆಚರಣೆಯಲ್ಲಿದೆ.[೬]

**ರಂಗನಾಥಸ್ವಾಮಿಯ ಪಾದುಕೆಗಳು :**

ಎಲ್ಲ ರಂಗನಾಥ ದೇವಾಲಯಗಳಲ್ಲಿ ಕಡ್ಡಾಯವಾಗಿ ರಂಗನಾಥ ಸ್ವಾಮಿಯ ಪಾದುಕೆಗಳು ಎಂದು ಹೇಳುವ ಪಾದದ ಶಿಲ್ಪಗಳಿವೆ. ಇದು ಸ್ವಾಮಿಯು ಆಯಾ ಸ್ಥಳಗಳಲ್ಲಿ ನೆಲೆಸಲು ಇಚ್ಛೈಸಿ ಊರಿರುವ ಪಾದಗಳ ಗುರುತು ಎಂದು ಅಭಿಪ್ರಾಯಿಸುತ್ತಾರೆ. ಅಲ್ಲದೆ ದೊಡ್ಡ ಆಕಾರದ ಚರ್ಮದ ಚಪ್ಪಲಿಗಳನ್ನು ರಂಗನಾಥನಿಗೆ ಮಾಡಿಸಿಕೊಡುವ ಮತ್ತು ಅವುಗಳಿಂದ ಜನರು ತಲೆಯ ಮೇಲೆ ಹೊಡಿಸಿಕೊಳ್ಳುವ ಆಚರಣೆಯು ಕಂಡುಬರುತ್ತದೆ. ವಿಶೇಷವಾಗಿ ಚಾಮರಾಜನಗರ ಜಿಲ್ಲೆಯ ಬಿಳಗಿರಿ ರಂಗನ ಬೆಟ್ಟದಲ್ಲಿ ಈ ಆಚರಣೆಯು ಮಹತ್ವದಾಗಿದೆ. ಇಲ್ಲಿರುವ ಚಪ್ಪಲಿಗಳನ್ನು ಬಿಳಿಗಿರಿ ಬೆಟ್ಟಸಾಲಿನ ತಪ್ಪಲಲ್ಲೇ ಇರುವ ಯಳಂದೂರು ತಾಲೂಕಿನ ಸಮೀಪದ ಬೂದಿತಿಟ್ಟು ಗ್ರಾಮದ ಮಾದಿಗ ಸಮುದಾಯದ ಜವರಯ್ಯನ ಲಿಂಗಯ್ಯನ ಮನೆಯವರು ಮಾಡಿಕೊಡುತ್ತಾರೆ. ಬಿಳಿಗಿರಿ ರಂಗನಾಥನಿಗೆ ಅರ್ಪಿತವಾಗುವ ಈ ಚಮ್ಮಾವುಗೆಗಳು ಒಂದು ವೇಳೆ ಮಲೆ ಮಾದೇಶ್ವರ ಶ್ರವಣನ ಸಂಹಾರಕ್ಕೆ ಮಾಡಿಸಿತಂದ ಚಪ್ಪಲಿಗಳ ಅವಶೇಷ ರೂಪದ ಆಚರಣೆ ಇರಬಹುದೇ ಎಂಬುದನ್ನು ಊಹಿಸಬಹುದು.

**ಓಕುಳಿ ಸೇವೆ :**

ಇದೊಂದು ಬಗೆಯ ದೇವರಿಗೆ ಸಲ್ಲಿಸುವ ಸೇವೆಯಾಗಿದೆ. ಓಕುಳಿ ಹೋಳಿ ಹಬ್ಬಕ್ಕೆ ಮಾತ್ರ ಸೀಮಿತವಾದ ಸಂಪ್ರದಾಯವಲ್ಲ. ಕರ್ನಾಟಕದ ಹಲವು ಗ್ರಾಮ ದೇವತೆಗಳ ಹಬ್ಬಗಳು, ಜಾತ್ರೆಗಳು ಮುಕ್ತಾಯವಾಗುವ ಸಂದರ್ಭದಲ್ಲಿ ಓಕುಳಿ ಆಡಲಾಗುತ್ತದೆ. ಅದೇ ರೀತಿ

ರಂಗನಾಥಸ್ವಾಮಿಯ ಜಾತ್ರೆಯ ಕೊನೆಯಲ್ಲಿ ಓಕುಳಿ ಆಡುವ ಪದ್ಧತಿಯು ಪ್ರಚಲಿತದಲ್ಲಿದೆ. ಹೆಚ್ಚಿನ ರಂಗನಾಥ ದೇವಾಲಯಗಳಲ್ಲಿ ಈ ಆಚರಣೆಯು ಕಂಡುಬರುತ್ತದೆ. ಮುಖ್ಯವಾಗಿ ಓಕುಳಿ ಆಡುವಾಗ ಅರಿಶಿಣ, ಕುಂಕುಮ, ಹೂವಿನ ಮಿಶ್ರಣಗಳನ್ನು ಸೇರಿಸಿ ಒಬ್ಬರಿಗೊಬ್ಬರು ನೀರು ಎರಚುವುದರ ಮೂಲಕ ಓಕುಳಿ ಆಡುತ್ತಾರೆ. ಇದು ಒಂದು ರೀತಿಯ ಕಡ್ಡಾಯವಾದ ಆಚರಣೆಯಾಗಿ ಕಂಡುಬಂದಿದೆ. ರಾಯಚೂರು ಜಿಲ್ಲೆ ದೇವದುರ್ಗ ತಾಲೂಕಿನ ಜಾಲಹಳ್ಳಿಯಲ್ಲಿ ಕೇವಲ ನೀರಿನ ಓಕುಳಿ ಆಡುವ ಪದ್ಧತಿ ಇದೆ. ಓಕುಳಿ ಪದ್ಧತಿಯು ಹಿಂದಿನಿಂದಲೂ ಬಂದುದಾಗಿದೆ. ಈ ರಂಗನಾಟ ಒಂದು ವಿವಿಧ ಮದನಕ್ರೀಡೆ ಎಂಬ ಭಾವವಿದೆ. ಅದರಲ್ಲಿ ಭಾಗವಹಿಸುವ ಸ್ತ್ರೀ–ಪುರುಷರು ಅತೀ ಸ್ವೇಚ್ಛೇಯಿಂದ ವರ್ತಿಸುತ್ತಾರೆ. ಇಲ್ಲಿ ಲೈಂಗಿಕ ಪ್ರಚೋದನೆ ಹಾಗೂ ಸ್ವೇಚ್ಛಾಚಾರ ಪ್ರಮುಖವಾಗಿದೆ. ಇದಲ್ಲದೆ ಜನಪದರು ಪ್ರೀತಿ, ಸಂತೋಷ ಬಂಧುತ್ವವನ್ನು ಬಣ್ಣ ಹಾಕುವುದರ ಮೂಲಕ ತೋರಿಸಿಕೊಳ್ಳುತ್ತಾರೆ. ಮನದ ದ್ವೇಷ ಅಳಿಸಿ, ಪ್ರೀತಿ ಮೂಡಿಸುವಿಕೆ ಹಾಗೂ ಜಾತಿ, ಮತ, ಪಂಥಗಳ ತಾರತಮ್ಯ ನಿವಾರಣೆ ಆಚರಣೆಯ ಪ್ರಮುಖ ಹಿನ್ನಲೆಯಾಗಿದೆ. ಈ ಆಚರಣೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವುದಾದರೆ ಓಕುಳಿ ನೆಪದಲ್ಲಿ ಶ್ರೀಗಂಧ, ಕುಂಕುಮ, ಅರಿಶಿಣ ಇತ್ಯಾದಿ ನೈಸರ್ಗಿಕ ವಸ್ತುಗಳನ್ನು ಬೆರೆಸಿದ ನೀರನ್ನು ಮೈಮೇಲೆ ಸುರಿದುಕೊಂಡರೆ ಅದರಲ್ಲಿಯ ಔಷಧೀಯ ಗುಣ ಚರ್ಮದ ಸೋಂಕನ್ನು ತಡೆಗಟ್ಟುತ್ತದೆ ಎಂಬ ಅಭಿಪ್ರಾಯವಿದೆ. ಈ ಆಚರಣೆಯು ವಿಜಯನಗರ ಅರಸರ ಕಾಲದಲ್ಲಿ ಅದರಲ್ಲೂ ಶ್ರೀಕೃಷ್ಣದೇವರಾಯ ನ ಆಳ್ವಿಕೆಯ ಸಂದರ್ಭದಲ್ಲಿ ಓಕುಳಿ ಆಚರಣೆ ಜನಪ್ರೀಯವಾಗಿರುವುದು ಕಂಡುಬರುತ್ತದೆ. ಅರಸರು, ಮಂಡಲೀಕರು, ವಿಲಾಸಿನಿಯರು ಮತ್ತು ಪ್ರಜೆಗಳು ಓಕುಳಿಯಲ್ಲಿ ಭಾಗವಹಿಸಿ ಪರಸ್ಪರ ಹತ್ತಿರವಾಗುತ್ತಿದ್ದರು. ಪ್ರಸ್ತುತ ವಿಜಯನಗರ ಸಾಮ್ರಾಜ್ಯದ ಹಂಪಿಯಲ್ಲಿರುವ ಹೊಂಡಗಳು, ಜಲಕಾರಂಜಿಗಳು ಇದಕ್ಕೆ ಆಧಾರವೆನಿಸಿವೆ. ಪುರುಷರಿಗಷ್ಟೇ ಸೀಮಿತವಾಗಿದ್ದ ಹೋಳಿಹಬ್ಬದಲ್ಲಿ ಇಂದು ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವುದು ಕಂಡುಬಂದಿದೆ. ಇದರ ಉದ್ದೇಶಗಳು ಭಿನ್ನವಾಗಿದ್ದರೂ, ರಂಗನಾಥ ಸಂಪ್ರದಾಯದಲ್ಲಿ ಈ ಪದ್ಧತಿಯು ಆಚರಣೆಯಲ್ಲಿದೆ.

**ವಾದ್ಯಗಳು :**

ರಂಗನಾಥಸ್ವಾಮಿ ಜಾತ್ರೆಯಲ್ಲಿ ಹತ್ತಾರು ಬಗೆಯ ವಾದ್ಯಗಳಾದ ಕಹಳೆ, ಜಾಗಟೆಗಳು, ಶಂಖ, ತಮಟೆ, ಗಂಟೆಗಳು, ಢಮರುಗಳು, ಕರಡೇವು, ವಾಲಗ, ಶೃತಿ, ನಗಾರಿ ಮುಂತಾದವುಗಳನ್ನು ಬಾರಿಸುತ್ತಾರೆ. ದೇವರು ಹೊರಟಾಗ ಯಾವಾಗಲೂ ಮುಂದೆ ಎತ್ತಿನ ಮೇಲೆ ನಗಾರಿ ಕಡ್ಡಾಯವಾಗಿ ಇರಲೇಬೇಕು. ಈ ನಗಾರಿಯನ್ನೂ ಬಾರಿಸುವ ವ್ಯಕ್ತಿಯು ಅದೇ ಎತ್ತಿನ ಗಾಡಿಯ ಮೇಲೆ ಕೂತಿರುತ್ತಾನೆ. ಎತ್ತನ್ನು ನಿಯಂತ್ರಿಸುವವರು ಪಕ್ಕದಲ್ಲಿ ನಡೆಯುತ್ತಿರುತ್ತಾರೆ. ದೂರದ

ಸ್ಥಳಗಳಿಗೆ ರಂಗನಾಥ ದೇವರನ್ನು ವಾದ್ಯಗಳ ಸಮೇತ ಕಾಲ್ನಡಿಗೆಯಲ್ಲಿ ಹೊತ್ತುಕೊಂಡು ಕರೆದೋಯ್ಯುತ್ತಾರೆ. ಸಾವಿರಾರು ಜನರಿಡುವ ಗೋವಿಂದ ಸ್ಮರಣೆಯ ಜಯಜಯಕಾರಗಳ ಕೂಗು ಇವೆಲ್ಲವುಗಳ ಮೊಳಗುವಿಕೆಯು ಕಂಡುಬರುತ್ತದೆ. ಇದು ಬೃಹತ್‌ರಣಾಂಗದಲ್ಲಿನ ಬೃಹತ್ ಸೇನಾಸಮೂಹಗಳದ್ವಯಗಳ ರಣಾವೇಶದ ಗದ್ದಲದಂತೆ ರೋಮಾಂಚನಗೊಳಿಸುತ್ತದೆ.

**ಜನಸಮುದಾಯ :**

ಜನಪದರ ನಿತ್ಯದ ಬದುಕಿನ ಆರಂಭ ಹಾಗೂ ಅಂತ್ಯವಾಗುವುದೇ ದೇವತೆಯ ಅಥವಾ ದೈವದ ಸ್ಮರಣೆಯಿಂದ. ಪ್ರಸ್ತುತ ರಂಗನಾಥನು ಇದಕ್ಕೆ ಹೊರತಾಗಿಲ್ಲ. ಜಾತಿ, ಜನಾಂಗ, ಮೇಲು, ಕೀಳು, ಮಡಿ, ಮೈಲಿಗೆ ಎಂಬ ಭೇದವನ್ನು ಮೀರಿ ಎಲ್ಲ ಜನಸಮುದಾಯದ ಜನರು ರಂಗನಾಥನ ಆರಾಧನೆಯಲ್ಲಿ ಸಕ್ರೀಯವಾಗಿ ಭಾಗವಹಿಸಿ ಆನಂದವನ್ನು ಪಡೆಯುವರಾಗಿದ್ದಾರೆ. ರಂಗನಾಥ ತನ್ನ ಐದು ಹಂತದಲ್ಲಿಯೂ ಎಲ್ಲ ವರ್ಗದ ಜನರ ಆರಾಧನಾ ಭಾಗವಾಗಿದ್ದಾನೆ. ರಂಗನಾಥನ ಹೆಸರಿನಲ್ಲಿ ನಡೆಯುವ ಜಾತ್ರೆಗಳು ಮಹತ್ವ ಪಡೆದವುಗಳಾಗಿವೆ. ಈ ಜಾತ್ರೆಗಳು ಧಾರ್ಮಿಕ ಆಚರಣೆಯ ನೆಲೆಯಲ್ಲಿ ಇಡೀ ರಂಗನಾಥ ಸಂಪ್ರದಾಯವನ್ನು ಕಟ್ಟುವ ಮತ್ತು ಜೀವಂತವಾಗಿಡುವ ನೆಲೆಯಲ್ಲಿ ಆಚರಿಸಲ್ಪಡುತ್ತವೆ. ಮುಖ್ಯವಾಗಿ ಸ್ಥಳೀಯ ಜನಪದರ ಬದುಕನ್ನು ಮತ್ತು ಅದರ ವಿಶೇಷತೆಯನ್ನು ಮೈಗೂಡಿಸಿಕೊಂಡು ರಂಗನಾಥನ ಜಾತ್ರೆಯು ಅನನ್ಯತೆಯ ಸಂಕೇತವಾಗಿ ಬೆಳೆದು ಬಂದಿದೆ. ಅಲ್ಲದೆ ರಂಗನಾಥನ ಆರಾಧನೆಯು ತಲತಲಾಂತರದಿಂದ ಸಾವಿರಾರು ಜನಪದರ ಸಮ್ಮಿಲನದ ಬಹುಸಂಸ್ಕೃತಿಯ ಆಗರವಾಗಿದೆ.

ಮುಖ್ಯವಾಗಿ ಸಮಾಜದ ಎಲ್ಲ ವರ್ಗದವರು ರಂಗನಾಥನ ಆರಾಧಕರಾಗಿದ್ದರೂ, ಜಾತ್ರೆಯ ಸಂದರ್ಭದಲ್ಲಿ ಪ್ರತಿಯೊಂದು ಜಾತಿಯ ಜನರು ಜಾತ್ರೆಗಳಲ್ಲಿ ಒಂದಲ್ಲ ಒಂದು ರೀತಿಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಶಿಷ್ಟ ಸಂಪ್ರದಾಯ ಪರಂಪರೆಯ ದೇವಾಲಯದ ಪೂಜಾ ಕಾರ್ಯದಲ್ಲಿ ಬ್ರಾಹ್ಮಣರು ಪೂಜೆ ಮತ್ತು ಅರ್ಚಕರು ಎರಡು ಕೆಲಸವನ್ನು ನಿಭಾಯಿಸುತ್ತಾರೆ. ಆದರೆ ಅನೇಕ ರಂಗನಾಥ ದೇವಾಲಯಗಳಲ್ಲಿ ಬೇರೆ ವರ್ಗದ ಜನರು ಅರ್ಚಕ ಮತ್ತು ಪೂಜಾರಿಕೆಯ ಕೆಲಸವನ್ನು ಮಾಡುತ್ತಿದ್ದಾರೆ. ಮುಖ್ಯವಾಗಿ ವೀರಶೈವ, ಗೊಲ್ಲ, ಕುಂಚಿಟಿಗರು, ಒಕ್ಕಲಿಗರು, ಬೇಡರು, ಕರಡಿಗೊಲ್ಲರು, ಸಾತಾನಿಗಳು, ಓಷ್ಠಮರು, ಉಪ್ಪಾರರು, ಕಾಡುಗೊಲ್ಲರು ಹೀಗೆ ಅನೇಕ ವರ್ಗದ ಜನರು ತಮ್ಮ ಪರಿಸರದಲ್ಲಿರುವ ರಂಗನಾಥ ದೇವಾಲಯಗಳಿಗೆ ಅರ್ಚಕರಾಗಿದ್ದಾರೆ. ಶ್ರೀರಂಗಪಟ್ಟಣದ ರಂಗನಾಥ ದೇವಾಲಯಕ್ಕೆ ಅಪಾರವಾದ ಭಕ್ತವೃಂದವಿದೆ. ಅದರಲ್ಲೂ ಶ್ರೀವೈಷ್ಣವರು, ಮಾಧವ ಸಂಪ್ರದಾಯಿಗಳು, ಭಾಗವತ ಸ್ಮಾರ್ತರು ಶಿಷ್ಟಸಂಪ್ರದಾಯದ ಭಕ್ತವರ್ಗವಾಗಿ ಕಂಡುಬಂದರೆ ವೈಶ್ಯರು, ಕ್ಷತ್ರಿಯರು ಈ ದೇವಾಲಯಕ್ಕೆ

ಭಕ್ತರಾಗಿದ್ದಾರೆ. ಅಲ್ಲದೆ ನಾಯಿದ ವರ್ಗದ ಹಲವು ಮನೆತನಗಳು ರಂಗನಾಥನನ್ನು ಮನೆದೇವರಾಗಿ ಹೊಂದಿರುವುದು ಕಂಡುಬರುತ್ತದೆ. ಮಂಡ್ಯ, ಮೈಸೂರು ಜಿಲ್ಲೆಯ ಸಾಧು ಒಕ್ಕಲಿಗರು ರಂಗನಾಥನನ್ನು ಕುಲದೇವರಾಗಿ ಹೊಂದಿರುವುದು ತಿಳಿದುಬರುತ್ತದೆ. ಅಲ್ಲದೆ ಕೆಲವು ಕುಂಚಿಟಿಗರು ಶಿರಾ ಪ್ರದೇಶದಿಂದ ಗಂಜಾಂಗೆ ವಲಸೆ ಬಂದು ಈ ಪ್ರದೇಶದಲ್ಲಿ ನೆಲೆನಿಂತು ನಂತರ ಶ್ರೀರಂಗಪಟ್ಟಣದ ರಂಗನಾಥನನ್ನು ತಮ್ಮ ಆರಾಧ್ಯ ದೈವವಾಗಿ ಪೂಜಿಸಲು ಪ್ರಾರಂಭಿಸಿದ್ದಾರೆ. ಇಂತಹ ನೂರಾರು ಮನೆತನಗಳು ಇಂದಿಗೂ ಕಂಡುಬರುತ್ತವೆ. ಇದಲ್ಲದೆ ಶೂದ್ರ ವರ್ಗದ ಹಲವಾರು ಜಾತಿಯ ಜನರಿಗೆ ರಂಗನಾಥನು ಆರಾಧ್ಯ ದೈವವಾಗಿದ್ದಾನೆ. ಅಲ್ಲದೆ ಶ್ರೀರಂಗಪಟ್ಟಣ ಮತ್ತು ಮೇಲುಕೋಟೆಯ ಆಗಮಿಕರು ಮತ್ತು ಅರ್ಚಕವೃಂದ ಬೇಲೂರಿನ ದೇವಾಲಯದ ಅರ್ಚಕವೃಂದದವರು ಅನ್ಯೋನ್ಯತೆಯ ಸಂಬಂಧ ಹೊಂದಿರುವುದು ಕಂಡುಬರುತ್ತದೆ. ಇವರು ತಮ್ಮ ಕುಟುಂಬಗಳಲ್ಲಿ ಸಂಭವಿಸುವ ಹುಟ್ಟು ಸಾವು ಮುಂತಾದ ಸಂದರ್ಭಗಳಲ್ಲಿ ದೈವಕೈಕಂರ್ಯ ನಿಲ್ಲಬಾರದೆಂಬ ಮಹತ್ವದ ಉದ್ದೇಶದಿಂದ ಅಂತಹ ಸಂದರ್ಭಗಳಲ್ಲಿ ಪರಸ್ಪರ ಸಹಾಯಕರಾಗಿ ಈ ಮನೆತನಗಳು ಇಂದಿಗೂ ನಡೆದುಕೊಂಡು ಬರುತ್ತಿರುವುದು ದೇವರ ಬಗೆಗಿನ ಅವರ ಶ್ರದ್ಧೆ, ನಂಬಿಕೆ ಮತ್ತು ಸಂಸ್ಕೃತಿಯ ಆಚರಣೆಯಲ್ಲಿನ ಮುಂದುವರಿಕೆಯನ್ನು ಕಾಣಬಹುದಾಗಿದೆ. ಹೀಗಾಗಿ ಶಿಷ್ಟ ಸಂಪ್ರದಾಯವು ಇಂದಿಗೂ ತನ್ನ ಪರಂಪರೆಯನ್ನು ಬಿಟ್ಟುಕೊಟ್ಟಿಲ್ಲವೆಂದು ಖಚಿತಪಡಿಸುತ್ತದೆ.

ವಿಶೇಷವಾಗಿ ವಾದ್ಯ ಮೇಳಕ್ಕೆ ಭಜಂತ್ರಿಗಳು, ದೀವಟಿಗೆ ಹಿಡಿಯುವ ಮತ್ತು ಮಡಿ ಹಾಸಲು ಮಡಿವಾಳರು, ರಥಕಟ್ಟಲು ವಿಶ್ವಕರ್ಮದವರು ಭಾಗವಹಿಸುತ್ತಾರೆ. ದೇವರಿಗೆ ಸಂಬಂಧಿಸಿದ ಕೆಲಸಗಳನ್ನು ಮಾಡಲು ಮುಖ್ಯವಾಗಿ ದಾಸಯ್ಯನು ಇರುತ್ತಾನೆ. ಚಿತ್ರದುರ್ಗ ಜಿಲ್ಲೆ ಹೊರಕೆರೆದೇವರಪುರದ ರಂಗನಾಥ ಜಾತ್ರೆಯಲ್ಲಿ ವಿಶೇಷ ಪೂಜಾ ಸಂದರ್ಭದಲ್ಲಿ ಕಂಚೀಪುರದ ದೇವಾಂಗ ಭಕ್ತರು ದೀವಟಿಗೆ ಸೇವೆ ಮಾಡುತ್ತಾರೆ. ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ದೇವಾಂಗದ ದಾಸಪ್ಪನು ಉರಿಪಂಜಿನ ಸೇವೆಯನ್ನು (ವಿವಿಧ ರೀತಿಯ ಪೋಷಾಕು ಧರಿಸಿ) ಮಾಡುವುದು ಆಚರಣೆಯಲ್ಲಿ ಇದೆ. ಅಲ್ಲದೆ ಮಾಗೋಡು ಕಂಬದ ರಂಗನಾಥ ರಥೋತ್ಸವ ಮೆರವಣಿಗೆ ಹಾಗೂ ದೇವರು ಬೇರೆ ಗ್ರಾಮಗಳಿಗೆ ಹೋಗುವಾಗ ಚಾಮರ ಬೀಸುವ ಹಾಗೂ ಗರುಡ ಮತ್ತು ಆಂಜನೇಯ ಲಾಂಛನವನ್ನುಳ್ಳ ಪತಾಕೆಯನ್ನು ಹಿಡಿದು ಇಬ್ಬರು ಯುವಕರು ದೇವರ ಮುಂದೆ ನಿಂತಿರುತ್ತಾರೆ. ಈ ದೇವರ ಜಾತ್ರಾ ಉತ್ಸವದಲ್ಲಿ ಎಲ್ಲ ಕೆಲಸ ಕಾರ್ಯಗಳಲ್ಲಿ ತೊಡಗುವವರು ಕಾಡುಗೊಲ್ಲ ಜನಾಂಗದವರು ಮಾತ್ರ, ತೋಟಿ–ತಳವಾರರಿಗೆ ಇಲ್ಲಿ ಗಮನವನ್ನು ನೀಡಿರುವುದು ಕಂಡುಬರುವುದಿಲ್ಲ. ದರ್ಜಿ ಹಾಗೂ ಸಾದರ ಜನಾಂಗದವರು ಸಹಾಯ, ಸಲಹೆಗಳನ್ನು ನೀಡುವರಾಗಿದ್ದಾರೆ. ಈ ಮೂಲಕ ಅವರಿಗೂ ಜಾತ್ರೆಯಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ. ಅಲ್ಲದೆ ವಾದ್ಯಮೇಳದವರಿಗೆ, ಪಾಲಕಿ ಹೊರುವವರಿಗೆ, ರಾಜಾಂಗಣ ಶುಚಿ

ಮಾಡುವವರಿಗೆ, ಅರ್ಚಕರಾದ ಉಪ್ಪಾರ ಬಂಧುಗಳಿಗೆ ವಿವಿಧ ಗ್ರಾಮಗಳಲ್ಲಿ ಭೂಮಿಯನ್ನು ದಾನ ಕೊಟ್ಟಿರುವುದು ಕಂಡುಬರುತ್ತದೆ.

ಜಿಗಳಿ ರಂಗನಾಥ ದೇವಾಲಯದ ಜಾತ್ರೆಯ ಸಂದರ್ಭದಲ್ಲಿ ಮೊದಲಿಗೆ ಜಿಗಳಿ ಗ್ರಾಮದ ಸಮೀಪವಿರುವ ಜಿ. ಬೇವಿನಹಳ್ಳಿ ಗ್ರಾಮದ ಜನರು ಬಂದು ರಥಕ್ಕೆ ಎಣ್ಣೆ ಬಳಿದು ಹೋಗುವ ಸಂಪ್ರದಾಯವಿದೆ. ನಂತರ ಜಿಗಳಿ ನಾಯಕ ಜನಾಂಗದವರು ರಥದ ಕಳಸಾರೋಹಣ ಮಾಡುತ್ತಾರೆ. ಆಗ ಉತ್ಸವ ಪ್ರಾರಂಭವಾಗುತ್ತದೆ. ಈ ರಥೋತ್ಸವದಂದು ಜಿ. ಬೇವಿನಹಳ್ಳಿ ಆಂಜನೇಯ ರಥ ಏರಿದ ಮೇಲೆ ಜಿಗಳಿಯ ರಂಗನಾಥ ಹಾಗೂ ಯಲವಟ್ಟಿ ಆಂಜನೇಯ ದೇವರುಗಳು ರಥ ಏರುವುದು ಈಗಲೂ ರೂಢಿಯಲ್ಲಿದೆ. ನಂತರ ಗ್ರಾಮದ ಗೌಡ್ರ ಮನೆಯವರು ದೇವಾಲಯದ ಹತ್ತಿರದಲ್ಲಿ ಅಡುಗೆ ಮಾಡಿಸಿ (ಬಲೆಬಾಣ) ಎಡೆ ಮಾಡುತ್ತಾರೆ. ತುಮಕೂರು ಜಿಲ್ಲೆಯ ಸಿರಾ ತಾಲೂಕಿನ ಬಂಡಿರಂಗನಾಥ ಜಾತ್ರೆಯಲ್ಲಿ ಬ್ರಾಹ್ಮಣ ಸಮುದಾಯದ ಒಕ್ಕಲುಗಳು ಸೇರುವುದು ವಿಶೇಷವಾಗಿದೆ. ರಾಯಚೂರು ಜಿಲ್ಲೆಯ ಮಾನಸಗಲ್ ರಂಗನಾಥಸ್ವಾಮಿ ಜಾತ್ರೆಯಲ್ಲಿ ರಥೋತ್ಸವವಾದಿ ಕಾರ್ಯಕ್ರಮಗಳಲ್ಲಿ ದೇವದುರ್ಗದ ದೊರೆ ಮನೆತನದವರ ನೇತೃತ್ವದಲ್ಲಿ, ರಾಜಗುರುಗಳು, ಕುಲಕರ್ಣಿಯವರು, ಮೇಟಿಯವರು ಮತ್ತು ಸುತ್ತಲಿನ ಗ್ರಾಮಸ್ಥರು ಭಕ್ತಿ ಪೂರ್ವಕ ಭಾಗವಹಿಸುವಿಕೆಯಿಂದ ಜರುಗುವುದು.

ಕರ್ನಾಟಕದಲ್ಲಿ ಎಲ್ಲ ರಂಗನಾಥ ದೇವಾಲಯಗಳಲ್ಲಿ ಪ್ರತಿ ವರ್ಷವು ಜಾತ್ರೆಯು ನಡೆಯುತ್ತದೆ. ವಿಶೇಷವಾಗಿ ಭಾರತ ಹುಣ್ಣಿಮೆ (ಜನವರಿ/ಫೆಬ್ರುವರಿ), ಮಾರ್ಚ್ ತಿಂಗಳು ಶಿವರಾತ್ರಿ ನಂತರ, ಯುಗಾದಿ ದಿನ, ಯುಗಾದಿಯ ನಂತರ ಐದನೆ ದಿನ, ಯುಗಾದಿ ನಂತರ ಒಂಭತ್ತನೇ ದಿನ, ದವನದ ಹುಣ್ಣಿಮೆಗೆ, ರಾಮನವಮಿಗೆ, ಏಪ್ರಿಲ್ ತಿಂಗಳುಗಳಲ್ಲಿ ಹೀಗೆ ವರ್ಷ ಪೂರ್ತಿಯೂ ವಿಶೇಷ ಪೂಜೆ, ಜಾತ್ರೆ ಕಾರ್ಯಕ್ರಮಗಳನ್ನು ಜನಸಮುದಾಯದವರು ಕೈಗೊಳ್ಳುತ್ತಾರೆ. ವಿಶೇಷವಾಗಿ ದೊಡ್ಡ ಜಾತ್ರೆಗಳು ರಾಮನವಮಿಗೆ ಹೆಚ್ಚಾಗಿ ನಡೆಯುತ್ತವೆ. ಜಾತ್ರೆಗಳು ನಡೆಯಬೇಕಾದರೆ ಗ್ರಾಮದ ಹಿರಿಯರು ಮತ್ತು ಮುಜರಾಯಿ ಇಲಾಖೆಯ ಅಧಿಕಾರಿಗಳೆಲ್ಲರೂ ಸೇರಿ ಶುಭ ಮೂಹೂರ್ತದ ದಿನವನ್ನು ನಿಗದಿಪಡಿಸುತ್ತಾರೆ. ಆ ದಿನದಿಂದಲೇ ಜಾತ್ರೆಗೆ ಸಂಬಂಧಿಸಿದ ಯೋಜಿತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಪ್ರಮುಖವಾಗಿ ಜಾತ್ರೆಯ ಸಂದರ್ಭದಲ್ಲಿ ನಡೆಸುವ ವಿವಿಧ ರಥೋತ್ಸವಗಳಿಗಾಗಿ ರಥದ ಮನೆಯಲ್ಲಿ ನಿಲ್ಲಿಸಿರುವ ದೊಡ್ಡತೇರು, ಪುಷ್ಪದ ತೇರು ಹಾಗೂ ಕಿರುತೇರುಗಳನ್ನು ಹೊರಗಡೆ ತೆಗೆಯಲಾಗುತ್ತದೆ. ಜಾತ್ರೆ ಎರಡು ಮೂರು ದಿನಗಳಿರುವ ಸಮಯಕ್ಕೆ ತೇರುಗಳನ್ನು ಕಟ್ಟುವ ಕೆಲಸಕ್ಕೆ ಆಚಾರ್ಯರ ಜಾತಿಯವರು ಸೇರಿಕೊಳ್ಳುತ್ತಾರೆ. ಜಾತ್ರೆಯು ಮುಖ್ಯವಾಗಿ ರಂಗನಾಥನ ಪರಿವಾರಕರಾದ ಪೂಜಾರಿ, ಒಕ್ಕಲುಗಳ ಮುಂತಾದವರ

ನಾಯಕತ್ವದಲ್ಲಿ ನಡೆಯುವುದು. ಅಲ್ಲದೆ ಜಾತ್ರೆಯಲ್ಲಿ ಇತರೆ ಸಮುದಾಯಗಳ ದೈವಗಳೊಂದಿಗೆ ಸಮೀಕರಣಗೊಂಡು ಸೌಹಾರ್ದಯುತವಾಗಿ ಆಚರಣೆಳು ನಡೆಯುತ್ತವೆ.

ಮುಖ್ಯವಾಗಿ ಶಿಷ್ಟ ಮತ್ತು ಪರಿಶಿಷ್ಟ ಎರಡು ದೇವಾಲಯಗಳಲ್ಲಿ ಜಾತ್ರೆಯ ಸಂದರ್ಭದಲ್ಲಿ ಆಗಮಿಕರಿಂದ ಪಂಚರಾತ್ರಾಗಮ ರೀತ್ಯ ಕಾರ್ಯಕ್ರಮಗಳು ಜರುಗುವವು. ಅಂಕುರಾರ್ಪಣ, ಉತ್ಸವ ಮೂರ್ತಿಗೆ ಪಂಚಾಮೃತ ಅಭಿಷೇಕ, ಭೇರಿತಾಡನ, ಯಾಗಶಾಲೆ ಪ್ರವೇಶ, ಹಂಸಾರೋಹಣ ಉತ್ಸವ, ಅನಂತಪೀಠಾರೋಹಣ, ಸಿಂಹವಾಹನ, ಅಶ್ವಾರೋಹಣ, ಪುಷ್ಪಮಂಟಪ, ಗರುಡೋತ್ಸವ, ಪ್ರಹ್ಲಾದ ಪರಿಪಾಲನೋತ್ಸವ, ಉಪನಯನೋತ್ಸವ, ಕಾಶೀಯಾತ್ರೋತ್ಸವ, ಲಕ್ಷ್ಮೀಕಲ್ಯಾಣೋತ್ಸವ, ಅಮ್ಮನವರಿಗೆ ಕಲ್ಯಾಣೋತ್ಸವ, ಅರವಂಟಿಕೆಸೇವೆ, ತೇರುತ್ಸವ, ಅನ್ನಸಂತರ್ಪಣೆ, ಉರಿಪಂಜಿನ ಸೇವೆ, ವಸಂತಸೇವೆ, ಧೂಳೋತ್ಸವ, ನರಾಂಧೋಳಿಕೋತ್ಸವ, ಉಯ್ಯಾಲೆ ಉತ್ಸವ, ಸಂಧಾನ ಸೇವೆ, ಅವಭೃತ ಸೇವೆ, ಆಂಜನೇಯ, ಕೈಯಡ್ಡೆ, ಗರುಡ ಪಾರ್ಥಸಾರಥಿ, ಕೀಲುಕುದುರೆ ಉತ್ಸವ, ಮಹಾಭಿಷೇಕ, ರಾಸಕ್ರೀಡೆಯ ಉತ್ಸವ, ಗಜಾರೋಹಣ, ಧೂಪದ ಸೇವೆ, ದೇವರ ಉಯ್ಯಾಲೆ, ಭಕ್ತಮಂಡಳಿ ಸಂತರ್ಪಣೆ ಮುಂತಾದ ಉತ್ಸವಗಳು ಎಲ್ಲ ರಂಗನಾಥಸ್ವಾಮಿ ಜಾತ್ರೆಯಲ್ಲಿ ಕಂಡುಬರುತ್ತವೆ. ವಿಶೇಷವಾಗಿ ವೈಕುಂಠ ಏಕಾದಶಿ ಸಂದರ್ಭದಲ್ಲೂ ಐದು ದಿನಗಳ ಕಾಲ ಉತ್ಸವ ನಡೆಯುವುದು ಮತ್ತು ಶ್ರಾವಣ ಮಾಸದಲ್ಲಿ ಸ್ವಾಮಿಗೆ ದಿನವೂ ಉತ್ಸವಗಳು ಜರುಗುತ್ತವೆ. ಸಂಕ್ರಾಂತಿಯ ಸಂದರ್ಭದಲ್ಲಿ ಕೆಲವು ದೇವಾಲಯಗಳಲ್ಲಿ ಸೂರ್ಯನ ಕಿರಣ ನೇರವಾಗಿ ರಂಗನಾಥ ಮೂರ್ತಿಶಿಲ್ಪದ ಮೇಲೆ, ಪಾದಗಳ ಮೇಲೆ ಬೀಳುವುದು ಕಂಡುಬರುತ್ತದೆ. ಇದು ವಿಶೇಷವೆಂದು ಭಕ್ತರು ಭಾವಿಸಿದ್ದಾರೆ. ಉತ್ಸವಗಳಲ್ಲಿ ಮುಖ್ಯವಾಗಿ ಲೋಹ ಶಿಲ್ಪಗಳ ಮೇಲೆ ಅಂದರೆ ವಾಹನಗಳ ಮೇಲೆ ರಂಗನಾಥಸ್ವಾಮಿಯ ಮೆರವಣಿಗೆ ನಡೆಯುವುದು ವಿಶೇಷವಾಗಿದೆ. ಎಲ್ಲ ದೇವಾಲಯಗಳಲ್ಲೂ ಇದೇ ಮಾದರಿಯು ಕಂಡುಬರುತ್ತದೆ. ಈ ಲೋಹಶಿಲ್ಪಗಳು ಮನುಷ್ಯಗಾತ್ರದ ಕಂಚಿನ ಶಿಲ್ಪಗಳಾಗಿರುತ್ತವೆ.

ತುಮಕೂರು ಜಿಲ್ಲೆಯ ಶಿರಾ ತಾಲೂಕಿನ ಮಾಗೋಡು ರಂಗನಾಥನ ಜಾತ್ರೆ ವಿಶೇಷವಾಗಿ ನಡೆಯುತ್ತದೆ. ಮಾಗೋಡು ರಂಗನಾಥನ ಪ್ರಮುಖ ಯಾತ್ರಾಸ್ಥಳವಾಗಿದೆ. ಇಲ್ಲಿಯ ರಂಗನಾಥ ಕಂಬದ ರಂಗಪ್ಪ, ಕಂಬದಯ್ಯ, ಮಾಗೋಡು ರಂಗ ಎಂಬ ಹೆಸರುಗಳಿಂದ ಶಿರಾ ತಾಲೂಕಿನಲ್ಲಿ ಮಾತ್ರವಲ್ಲದೆ ಕರ್ನಾಟಕದಲ್ಲಿಯೂ ಪರಿಚಿತವಾಗಿದೆ. ಮುಖ್ಯವಾಗಿ ಮಾಗೋಡುವಿನಲ್ಲಿ ಕಾಡುಗೊಲ್ಲರ ಹಟ್ಟಿಯ ಒಳಗೆ ಮುಳ್ಳು ಬೇಲಿಯ ಸುತ್ತ ವಿಸ್ತಾರವಾದ ರಂಗನಾಥಸ್ವಾಮಿ ದೇವಾಲಯವಿದೆ. ಇಲ್ಲಿಯ ಜಾತ್ರೆಯು ತುಮಕೂರು ಜಿಲ್ಲೆಯ ಜನಗಳ ಜಾತ್ರೆಯಲ್ಲಿಯೇ ಅತೀ ದೊಡ್ಡ ಜಾತ್ರೆಯಾಗಿದೆ. ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರಗಳಿಂದಲೂ ಸುಮಾರು ಒಂದು ಲಕ್ಷಕ್ಕೂ ಅಧಿಕ ಜನ

ಭಕ್ತರು ಈ ಜಾತ್ರೆಯಲ್ಲಿ ಸೇರುತ್ತಾರೆ. ಪ್ರಧಾನವಾಗಿ ಮಾಗೋಡು ಕಾಡುಗೊಲ್ಲರ ಒಡೆತನದಲ್ಲಿದ್ದರೂ ಹರಿಜನ ಗಿರಿಜನರೂ ಸೇರಿದಂತೆ ಸಮಾಜದ ಪ್ರತಿಯೊಂದು ವರ್ಗದ ಜನಾಂಗವೂ ಬೇರೆಯುವ ವಿಶಿಷ್ಠ ನೆಲೆಯಾಗಿದೆ. ಜಾತ್ರೆಯಲ್ಲಿ ಮುಖ್ಯವಾಗಿ ಮೂರನೇ ದಿನ ನಡೆಯುವ ಹೂವಿನ ರಥೋತ್ಸವವು ವಿಶೇಷವಾಗಿದೆ. ಅನೇಕ ಭಕ್ತರು ಅಂದು ಉಪವಾಸ ಇರುವುದುಂಟು. ಬೆಳಿಗ್ಗೆ ಸ್ವಾಮಿಯ ರಥೋತ್ಸವಕ್ಕೆ ಅಧಿಕ ಪ್ರಮಾಣದಲ್ಲಿ ಹೂಮಾಲೆ ಹಾಕುವ ವಿಶಿಷ್ಠ ಆಚರಣೆ ನಡೆಯುತ್ತದೆ. ಇಲ್ಲಿ ಭಕ್ತರು ಹೂ ಹಾಕುವದಕ್ಕಾಗಿ ಉಪವಾಸ ಇರುತ್ತಾರೆ. ಇದೊಂದು ಸಂಪ್ರದಾಯವಾಗಿ ನಡೆದುಕೊಂಡು ಬಂದಿದೆ. ಮಕ್ಕಳ ಫಲವಂತಿಕೆಗಾಗಿ, ಕುರಿ ದನಗಳಿಗೆ ಬರುವ ಕಾಯಿಲೆ ಮೊದಲಾದ ಸಂಕಷ್ಟವನ್ನು ದೂರು ಮಾಡುವುದಕ್ಕಾಗಿ ಈ ಹರಕೆಯನ್ನು ಒಪ್ಪಿಸುವ ಪದ್ಧತಿ ವ್ಯಾಪಕವಾಗಿ ನಂಬಿಕೆ ರೂಪದಲ್ಲಿ ಆಚರಣೆಯಲ್ಲಿದೆ. ಜಾತ್ರೆಯ ಸಂದರ್ಭದಲ್ಲಿ ಉಯ್ಯಾಲೋತ್ಸವದಿಂದ ಕಂಬದ ರಂಗನಾಥ ಸ್ವಾಮಿಯನ್ನು ನೇರವಾಗಿ ಅಲಂಕೃತಗೊಂಡ ತೇರಿನ ಮೇಲೆ ಕೂಡಿಸಲಾಗುತ್ತದೆ. ರಥದಲ್ಲಿಯ ಸ್ವಾಮಿಯ ಪೂಜೆ ಮೊದಲಾದ ಎಲ್ಲ ಕಾರ್ಯಗಳು ಬ್ರಾಹ್ಮಣರಿಂದಲೇ ನಡೆಯುತ್ತವೆ. ಆದರೆ ಈ ಸಮಯದಲ್ಲಿ ಮಾತ್ರ ಪ್ರತಿನಿತ್ಯ ಪೂಜಾ ಕಾರ್ಯ ನಡೆಸುವ ಕಾಡುಗೊಲ್ಲರಿಗೆ ರಥದ ಮೇಲೆ ಕುಳಿತು ಪೂಜಾಕಾರ್ಯ ನೇರವೇರಿಸುವ ಪದ್ಧತಿಯು ಇರುವುದಿಲ್ಲ. ಈ ರೀತಿಯ ಪದ್ಧತಿಯು ಅನೇಕ ರಂಗನಾಥ ದೇವಾಲಯಗಳಲ್ಲಿ ಜಾತ್ರೆಯ ಸಂದರ್ಭದಲ್ಲಿ ಮಾತ್ರ ಕಂಡುಬರುತ್ತದೆ. ಕಾರಣ ಸ್ವಾಮಿಗೆ ಭಕ್ತರ ಇಚ್ಛೇಯಂತೆ ಅಥವಾ ದೇವಾಲಯದವರೇ ವರ್ಷದಲ್ಲಿ ಒಂದು ಸಾರಿ ಸ್ವಾಮಿಯ ಪೂಜಾಕಾರ್ಯಗಳನ್ನು ಬ್ರಾಹ್ಮಣರಿಂದ ಮಾಡಿಸುವ ಪರಿಪಾಠವನ್ನು ಬೆಳೆಸಿಕೊಂಡಿರುವುದು ಕಂಡುಬರುತ್ತದೆ. ವಿಶೇಷವಾಗಿ ರಥದ ಮುಂದೆ ಪಂಜಿನ ಸೇವೆ, ಎದೆ ಶೂಲ, ಮುಳ್ಳಿನ ಪಾಲಿಕೆಯ ಆಚರಣೆಗಳು ನಡೆಯುತ್ತವೆ. ಸ್ವಾಮಿಯ ರಥೋತ್ಸವದಲ್ಲಿ ಮಧ್ಯಾಹ್ನ ಸಮಯದಲ್ಲಿ ಮೊದಲ ತೇರು ಹರಿಯುತ್ತದೆ. ಇದನ್ನು ಮಡಿ ತೇರು ಎಂದು ಕರೆಯುತ್ತಾರೆ. ಇದನ್ನು ದೇವಾಲಯದ ರಥ ಬೀದಿಯಲ್ಲಿ ಸುಮಾರು ಅರ್ಧಪರ್ಲಾಂಗು ದೂರ ಎಳೆದಿರುತ್ತಾರೆ. ನಂತರ ರಾತ್ರಿ ಮತ್ತೇ ತೇರನ್ನು ದೇವಸ್ಥಾನದ ಹತ್ತಿರಕ್ಕೆ ಎಳೆದು ತರುತ್ತಾರೆ. ಇದನ್ನು ಮೈಲಿಗೆ ತೇರು ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ರಥದ ಮೇಲೆ ಬ್ರಾಹ್ಮಣ ಪೂಜಾರಿ ಇರುವುದಿಲ್ಲ. ಬದಲಿಗೆ ಮೂಲ ಸ್ಥಾನದಲ್ಲಿ ಪೂಜೆ ಮಾಡುವ ಅರ್ಚಕ ರಥ ಏರಿ ಪೂಜೆ ಮಾಡುವುದು ಕಂಡುಬರುತ್ತದೆ. ಇಲ್ಲಿ ಬೆಳಗಿನಿಂದ ಸಂಜೆಯವರೆಗೆ ಉಪವಾಸ ಇದ್ದವರು ಈಗ ಉಪವಾಸ ಬೀಡುವ ಶಾಸ್ತ್ರ ಮಾಡುತ್ತಾರೆ. ಜಾತ್ರೆಯ ಕೊನೆಯ ದಿನ ಮರು ಪೂಜೆ ಉತ್ಸವ ವಿಶೇಷವಾಗಿ ನಡೆಯುತ್ತದೆ. ಅದು ಶನಿವಾರವೇ ಕಡ್ಡಾಯವಾಗಿ ನಡೆಯುವುದಾಗಿದೆ. ಈ ಸಂದರ್ಭದಲ್ಲಿ ಗ್ರಾಮದ ಉಳಿದ ದೇವರುಗಳಾದ ಚಿತ್ರದೇವರು, ಭೂತಪ್ಪ, ಎಲ್ಲಮ್ಮ, ಆಂಜನೇಯ ಇವರುಗಳನ್ನು

ಮೆರವಣಿಗೆಯಲ್ಲಿ ಹೊತ್ತು ರಥದ ಸಮಸಮಕ್ಕೆ ನಡೆಯುತ್ತಾರೆ. ಬೆಳ್ಳಿಕೋಲು, ಗಣಿ, ಕಂಚಿನ ಕುದುರೆ, ಹರಿಗೆ, ದಾಸಪ್ಪಗಳ ಕುಣಿತ, ಹೇಳುಪದ, ಸೋಬಾನೆ ಪದ ಮುಂತಾದವುಗಳನ್ನು ಹೆಂಗಸರು ಗಂಡಸರು ಹಾಡುತ್ತಾರೆ. ಇದು ಜಾತ್ರೆಯ ಕಡೆಯ ದಿನ ರಾತ್ರಿ ನಡೆಯುವ ಉತ್ಸವವಾಗಿದೆ. ಹೀಗಾಗಿ ಅಕ್ಕಪಕ್ಕದ ಗ್ರಾಮಸ್ಥರು ಅಧೀಕ ಸಂಖ್ಯೆಯಲ್ಲಿ ಸೇರಿರುತ್ತಾರೆ. ರಾತ್ರಿ ಪೂರ್ತಿ ಉತ್ಸವ, ಪೂಜೆ ನಡೆದು ಬೆಳಗಿನ ಜಾವ ದೇವರನ್ನು ಗುಡಿ ತುಂಬಿಸುವುದರ ಮೂಲಕ ಜಾತ್ರೆಗೆ ಮುಕ್ತಾಯವನ್ನು ನೀಡಲಾಗುತ್ತದೆ.

ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯವು ಪ್ರಾರಂಭದಲ್ಲಿ ಭಾಗವತ ಸಂಪ್ರದಾಯದ್ದಾಗಿದ್ದು, ಅನಂತರ ಪಾಂಚರಾತ್ರಾಗಮ ಪದ್ಧತಿಗೆ ಬದಲಾವಣೆಗೊಂಡಿರುವುದು ಸ್ಪಷ್ಟಗೊಳ್ಳುತ್ತದೆ. ಇದು ರಾಮಾನುಜಾಚಾರ್ಯರ ಪ್ರಭಾವಕ್ಕೆ ಒಳಗಾಗಿ ಈ ದೇವಾಲಯವು ಪಾಂಚರಾತ್ರ ಆರಾಧನ ಪದ್ಧತಿ ಮತ್ತು ಶ್ರೀವೈಷ್ಣವ ಆರಾಧನೆಯ ಪ್ರಮುಖ ಕೇಂದ್ರವಾಗಿ ಮಾರ್ಪಟ್ಟಿರುವುದು ಕಂಡುಬರುತ್ತದೆ. ಇದರಿಂದಾಗಿ ದಕ್ಷಿಣ ಭಾರತದಲ್ಲಿ ತ್ರಿ ರಂಗಕ್ಷೇತ್ರಗಳು ಪ್ರಸಿದ್ಧಿಗೆ ಬಂದಿವೆ. ಮುಖ್ಯವಾಗಿ ರಂಗನಾಥಸ್ವಾಮಿಗೆ ಅನೇಕ ರೀತಿಯ ಅರ್ಚನೆಗಳು ಭಕ್ತರಿಂದ ನಡೆಯುತ್ತವೆ. ವಿಶೇಷವಾಗಿ ಬೆಣ್ಣೆ ಅಲಂಕಾರ, ಧಾನ್ಯ ಅಲಂಕಾರ, ಹಣ್ಣಿನ ಅಲಂಕಾರ, ವಿವಿಧ ಫಲ–ಪುಷ್ಪಗಳ ಅಲಂಕಾರ ಮಾಡಿ ಪೂಜೆ ಸಲ್ಲಿಸುವರು. ಅಲ್ಲದೆ ರಂಗನಾಥ ಸ್ವಾಮಿಗೆ ಹಾಲು ತುಪ್ಪ, ಜೇನು, ಎಳೆನೀರು, ಅರಿಶಿಣ ನೀರು, ಕಲ್ಲುಸಕ್ಕರೆ, ಇವುಗಳಿಂದ ಪಂಚಾಮೃತ ಅಭಿಷೇಕ ಮಾಡುವರು. ಸ್ವಾಮಿಗೆ ತುಳಸಿ ಪತ್ರೆ ತುಂಬಾ ಪ್ರೀಯವಾದುದಾಗಿದೆ. ಆದ್ದರಿಂದ ಸ್ವಾಮಿಯ ಪೂಜೆಗೆ ಬರುವ ಭಕ್ತರು ವಿಶೇಷವಾಗಿ ತುಳಸಿ ಹಾರಗಳನ್ನು, ತುಳಸಿ ಪತ್ರೆಗಳನ್ನು ತಂದು ಒಪ್ಪಿಸುವರು. ಮೂಲ ಸ್ವಾಮಿಯನ್ನು ಯಥೇಚ್ಚವಾಗಿ ತುಳಸಿಯ ಪತ್ರೆ ಮತ್ತು ಹಾರಗಳಿಂದ ವಿಶೇಷ ಅಲಂಕಾರ ಮಾಡುವುದನ್ನು ನಿತ್ಯವು ಕಾಣಬಹುದಾಗಿದೆ. ರಂಗನಾಥ ಇಬ್ಬರು ಪತ್ನಿಯರಲ್ಲಿ ತುಳಸಮ್ಮ ಒಬ್ಬಳಾಗಿರುವುದರಿಂದ ತುಳಸಿಯನ್ನು ಮುಡಿಯಲು ಸ್ವಾಮಿ ಇಚ್ಛೀಸುವನೆಂಬುದು ಜನರ ನಂಬಿಕೆಯಾಗಿದೆ.

ರಂಗನಾಥನ ಜಾತ್ರೆಯಲ್ಲಿ ಮುಖ್ಯವಾಗಿ ಕಂಡುಬರುವ ಒಂದು ಆಚರಣೆ ದನಗಳ ಜಾತ್ರೆ. ಈ ರೀತಿಯ ಆಚರಣೆ ಬೇರೆ ದೇವರುಗಳ ಜಾತ್ರೆಯಲ್ಲಿ ಕಂಡುಬಂದರು ಇಲ್ಲಿ ವಿಶೇಷವಾಗಿ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ತಮ್ಮ ಜಾನುವಾರುಗಳನ್ನು ವಿಶೇಷವಾಗಿ ಅಲಂಕರಿಸಿ ರಂಗನಾಥನ ಸನ್ನಿಧಿಗೆ ಕರೆದುಕೊಂಡು ಬಂದು ಪೂಜಿಸುತ್ತಾರೆ. ಇದು ಪುರುಷ ಪ್ರಧಾನ ದೇವತೆಗಳ ಜಾತ್ರೆಯಲ್ಲಿ ದನಗಳ ಜಾತ್ರೆಯು ಪಿತೃಪ್ರಧಾನ ವ್ಯವಸ್ಥೆಯ ಪ್ರತೀಕಗಳೇ ಆಗಿವೆ. ಮುಖ್ಯವಾಗಿ ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲೂಕಿನ ಬಿಲ್ಲೇನಹಳ್ಳಿ ರಂಗನಾಥ ದೇವಾಲಯದಲ್ಲಿ

ವ್ಯಾಪಕವಾಗಿ ಕಂಡುಬರುತ್ತದೆ. ಇಲ್ಲಿಯ ಸಂಕ್ರಾತಿಯ ಸಂದರ್ಭದಲ್ಲಿ ಪ್ರತಿವರ್ಷ ದನಗಳ ಜಾತ್ರೆಯು ನಡೆಯುತ್ತದೆ. ಇದೊಂದು ವಿಶೇಷ ರೀತಿಯ ಆಚರಣೆಯಾಗಿ ಬೆಳೆದುಬಂದಿದೆ. ಎಲ್ಲ ದೇವರುಗಳ ಜಾತ್ರೆಯಲ್ಲಿ ದನಗಳ ಜಾತ್ರೆಯು ಕಂಡುಬಂದಂತೆ, ರಂಗನಾಥ ಇದಕ್ಕೆ ಹೊರತಾಗಿಲ್ಲ. ಆದರೆ ಮುಖ್ಯವಾಗಿ ರಂಗನಾಥನು ಪಶುಪಾಲಕರ ಆರಾಧ್ಯ ದೈವನಾಗಿದ್ದು, ಜಾನುವಾರುಗಳ ರಕ್ಷಕನಾಗಿ ನೆಲೆಗೊಂಡಿದ್ದಾನೆ. ಹೀಗಾಗಿ ರಂಗನಾಥನ ಆರಾಧನೆಯ ಸಂಪ್ರದಾಯದಲ್ಲಿ ಜಾನುವಾರುಗಳಿಗೂ ವಿಶೇಷಸ್ಥಾನ ದೊರೆತಿದೆ. ಇಲ್ಲಿ ಗವಿರಂಗನ ಗುಡ್ಡದ ಅಕ್ಕಪಕ್ಕದ ಗ್ರಾಮದವರೆಲ್ಲ ತಮ್ಮ ದನಕರುಗಳ ಮೈ ತೊಳೆದು ಕೊಂಬುಗಳಿಗೆ ಬಣ್ಣ ಹಚ್ಚಿ ಅಲಂಕರಿಸಿ ಗುಡ್ಡದ ಬಳಿಗೆ ಹೊಡೆದುಕೊಂಡು ಹೋಗಿ ಗವಿಗೆ ಪ್ರದಕ್ಷಿಣೆ ಹಾಕಿಸುತ್ತಾರೆ. ಭಕ್ತರು ತಮ್ಮ ದನಕರುಗಳ ಕ್ಷೇಮಕ್ಕಾಗಿ ಹರಕೆ ಹೊತ್ತವರೇ ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲಿಗೆ ಬರುತ್ತಾರೆ. ಪ್ರಥಮವಾಗಿ ಕರುವನ್ನು ಹಾಕಿದಾಗ ಹಸು, ಎಮ್ಮೆಯ ಗಿಣ್ಣಿನ ಬುತ್ತಿ ತಂದು ನೈವೇದ್ಯ ನೀಡುತ್ತಾರೆ. ಹರಕೆ ಹೊತ್ತವರು ಇಲ್ಲಿಗೆ ಬಂದು ಕುರಿ, ಕೋಳಿಯನ್ನು ಬಲಿಕೊಟ್ಟು ಮಾಂಸದ ಅಡಿಗೆ ಮಾಡಿ ನೈವೇದ್ಯ ಸಲ್ಲಿಸಿ ಊಟ ಮಾಡಿ ಹೋಗುವುದು ಪ್ರಚಲಿತದಲ್ಲಿದೆ.

**ಭೂತಪ್ಪನ ಆಚರಣೆ :**

ರಂಗನಾಥ ಸಂಪ್ರದಾಯದಲ್ಲಿ ಭೂತಪ್ಪನ ಆಚರಣೆಯು ವ್ಯಾಪಕವಾಗಿ ಕಂಡುಬರುತ್ತದೆ. ಭೂತಪ್ಪ ಮೊದಲು ಬೇರೆ ದೇವರುಗಳಲ್ಲಿಗೆ ಹೋಗಿ ತನ್ನನ್ನು ಸೇವಕನನ್ನಾಗಿ ಮಾಡಿಕೊಂಡು, ದಿನದ ಪೂರ್ತಿ ಬೇಕಾಗುವಷ್ಟು ಆಹಾರವನ್ನು ಒದಗಿಸಬೇಕೆಂದು ಬೇಡಿಕೊಂಡುವಂತೆ. ನಂತರ ಈ ಭೂತಪ್ಪಗಳನ್ನು ಯಾವ ದೇವರೂ ಭಂಟನನ್ನಾಗಿರಿಸಿಕೊಳ್ಳಲು ಒಪ್ಪಲಿಲ್ಲ. ಆಗ ರಂಗನಾಥನು ಈ ಭೂತಪ್ಪಗಳನ್ನು ತನ್ನ ಸೇವಕರನ್ನಾಗಿ ಒಪ್ಪಿಕೊಂಡು, ತಾನು ನೆಲೆಸಿರುವ ನೆಲೆಯಲ್ಲಿಯೇ ನೆಲೆಸಲು ಅನುಮತಿಯನ್ನು ಕೊಟ್ಟನು. ಜೊತೆಗೆ ಭಕ್ತರು ದಿನವೂ ಸಲ್ಲಿಸುವ 'ದೊಡ್ಡ ಎಡೆ' ಗಳನ್ನು ಭಕ್ಷಿಸಿಕೊಂಡಿರುವಂತೆ ಅಪ್ಪಣೆ ಮಾಡಿದನೆಂದು ಪ್ರತೀತಿ ಇದೆ. ಪ್ರತಿ ರಂಗನಾಥಸ್ವಾಮಿ ದೇವಾಲಯಗಳಲ್ಲಿಯೂ ಶ್ರೀಕೆಂಚರಾಯ ಮತ್ತು ಶ್ರೀಕಾಡರಾಯ ಎಂಬ ಇಬ್ಬರು ಭೂತಗಳಿರುವ ಸಣ್ಣ ಗುಡಿಗಳಿವೆ. ಇವುಗಳು ನಿರಾಕಾರ, ಅಮೂರ್ತ. ಕೇವಲ ಒಂದು ಕಲ್ಲುಗುಂಡು ಇಟ್ಟು ಪೂಜಿಸಲಾಗುತ್ತದೆ. ಜೊತೆಗೆ ಭೂತಪ್ಪ ರಂಗನಾಥ ದೇವಾಲಯದಲ್ಲಿ ಇರುವುದು ಕಡ್ಡಾಯವಾಗಿದೆ. ಇವರು ರಂಗನಾಥನ ಪ್ರಥಮ ಗಣಗಳೆಂದು ಕರೆಯುತ್ತಾರೆ. ಈ ಭೂತಪ್ಪಗಳಿಗೆ ಎಲ್ಲ ವರ್ಗದ ಜನರು ಹರಕೆ ಹೊತ್ತುಕೊಂಡು ಕೋಳಿ, ಆಡು, ಕುರಿ ಬಲಿಕೊಡುವ ಸಂಪ್ರದಾಯವು ಆಚರಣೆಯಲ್ಲಿದೆ. ಈ ಆಚರಣೆಯು ಭೂತಪ್ಪನಿಗೆ ಸಂಬಂಧಿಸಿದ್ದಾದರು, ರಂಗನಾಥ ದೇವಾಲಯದ ಪರಿಸರದಲ್ಲಿ ನಡೆಯುವುದು ವಿಶೇಷವಾಗಿದೆ. ಮೊದಲು ರಂಗನಾಥನಿಗೂ ಮಾಂಸಹಾರದ

ಆಚರಣೆಗಳು ನಡೆಯುತ್ತಿದ್ದವು, ಆದರೆ ಕಾಲಾನಂತರದಲ್ಲಿ ಶಿಷ್ಟಗೊಂಡು ನೆಲೆನಿಂತಿರುವುದರಿಂದ ಈ ಆಚರಣೆಯು ಭೂತಪ್ಪನಿಗೆ ಮಾತ್ರ ಸೀಮಿತವಾಗಿ ನಿಂತಿದೆ. ಆದರೂ ತುಮಕೂರು, ಚಿತ್ರದುರ್ಗ ಮತ್ತು ವಿವಿಧ ಜಿಲ್ಲೆಗಳಲ್ಲಿ ರಂಗನಾಥನಿಗೂ ಮಾಂಸಾಹಾರದ ನೈವೇದ್ಯ ಮಾಡುವ ಪದ್ಧತಿ ಕಂಡುಬರುತ್ತದೆ. ಪ್ರಸ್ತುತ ಭೂತಪ್ಪನು ರಂಗನಾಥನ ಜೊತೆ ವರ್ಷಪೂರ್ತಿಯು ಪೂಜೆಗೊಳ್ಳುತ್ತಾನೆ. ಅಷ್ಟೇ ಅಲ್ಲದೆ ರಂಗನಾಥನ ದೇವಾಲಯದಲ್ಲಿ ಎರಡು ಭೂತನಾಲಿಗೆಗಳು(ಹರಿಗೆಗಳು) ಇರುವುದು ಕಡ್ಡಾಯವಾಗಿದೆ. ರಂಗನಾಥನ ಪ್ರತಿ ಆಚರಣೆಯಲ್ಲೂ ಭೂತಗಳ ಹರಿಗೆ ಕುಣಿತ ಇರುವುದು ವಿಶೇಷವಾಗಿದೆ. ಭೂತಪ್ಪನು ಸ್ವಾಮಿಯ ಸೇವಕನಾಗಿದ್ದಾನೆ. ಅಲ್ಲದೆ ಸ್ವಾಮಿಯ ಆಜ್ಞಾಪಾಲಕನಾಗಿದ್ದಾನೆ. ಸ್ವಾಮಿಯ ಆದೇಶದ ಮೇರೆಗೆ ಭಕ್ತರಿಗೆ ದುಷ್ಟ ಶಕ್ತಿಗಳಿಂದ ಬರುವ ತೊಂದರೆಗಳನ್ನು ನಿವಾರಿಸುವವನಾಗಿದ್ದಾನೆ. ಭೂತದ ಹರಿಗೆಗಳು ಮರದಿಂದ ಮಾಡಲಾಗಿರುತ್ತದೆ. ಸುತ್ತಲೂ ಹಳದಿ ಬಣ್ಣವನ್ನು ಬಳಿಯಲಾಗಿದ್ದು, ಭೂತದ ನಾಲಿಗೆಗೆ ಕೆಂಪು ಬಣ್ಣ ಬಳಿಯಲಾಗಿರುತ್ತದೆ. ಇವು ಮುಖ್ಯವಾಗಿ ಬೇಟೆ, ಬಲಿಯನ್ನು ಸೂಚಿಸುವ ಸಂಕೇತಗಳಾಗಿ ಆಚರಣೆಯಲ್ಲಿ ಬಳಕೆಯಾಗುತ್ತವೆ.

**ದಾಸಯ್ಯ :**

ಕರ್ನಾಟಕದ ಜನಪದ ಸಂಪ್ರದಾಯದಲ್ಲಿ ವೈಷ್ಣವ ಪಂಥಕ್ಕೆ ಸೇರಿದ ಧಾರ್ಮಿಕ ವ್ಯಕ್ತಿಯೇ ದಾಸಪ್ಪ. ದಾಸಯ್ಯಗಳನ್ನು ಮಾಡುವುದರಲ್ಲಿ ಶ್ರೀವೈಷ್ಣವಧರ್ಮ ಪ್ರಮುಖ ಪಾತ್ರವಹಿಸಿರುವುದನ್ನು ಕಾಣುತ್ತೇವೆ. ಶ್ರೀವೈಷ್ಣವಧರ್ಮದ ಪ್ರಸಾರಕರಾದ ಶ್ರೀರಾಮಾನುಜಚಾರ್ಯರು ತಳಸಮುದಾಯದ ಎಲ್ಲ ವರ್ಗದವರಿಗೂ 'ಪಂಚಸಂಸ್ಕಾರದ ದೀಕ್ಷೆ' ಕೊಟ್ಟು ಅವರನ್ನು ತನ್ನ ಧರ್ಮದ ನೆರಳಿನಲ್ಲಿ ಮುನ್ನಡೆಯುವಂತೆ ಮಾಡಿದರು. ಅಲ್ಲದೆ ಅವರನ್ನು ತಮ್ಮ ದಾಸರನ್ನಾಗಿಯೇ ನೆಲೆಗೊಳಿಸಿದರು. ಜೊತೆಗೆ ಅವರಿಗೆ ತಮ್ಮ ಧರ್ಮದ ಚಿಹ್ನೆಗಳಾದ ಶಂಖ, ಚಕ್ರದ ಮುದ್ರೆಗಳನ್ನು ನೀಡಿದರಲ್ಲದೆ, ಜಾಗಟೆ, ಭವನಾಸಿ ನೀಡಿ ಧರ್ಮದ ಪ್ರಸಾರಕ್ಕೆ ಅವರನ್ನು ನೇಮಿಸಿಕೊಂಡಂತೆ ನಡೆಸಿಕೊಂಡರು. ಹೀಗೆ ಶ್ರೀವೈಷ್ಣವಧರ್ಮದ ಪ್ರಭಾವಕ್ಕೆ ಒಳಗಾದ ತಳಸಮುದಾಯಗಳು ಶ್ರೀವೈಷ್ಣವಧರ್ಮದಲ್ಲಿ ಗುರುತಿಸಿಕೊಂಡರು ತಮ್ಮ ನಂಬಿಕೆ, ಆಚರಣೆಗಳನ್ನು ಚಾಚು ತಪ್ಪದೇ ನಡೆಸಿಕೊಂಡು ಬಂದಿದ್ದಾರೆ.

ಪ್ರಸ್ತುತ ಇಲ್ಲಿ ದೀಕ್ಷೆಯೆಂದರೆ ಯಾವುದಾದರೊಂದು ಧಾರ್ಮಿಕ ಕ್ರಿಯೆಗೆ ಸಿದ್ಧ ಸಂಕಲ್ಪನಾಗಿ, ಬಳಿಕ ಶ್ರದ್ಧೆಯಿಂದ ನಿಯಮ ಪಾಲನೆಯ ಔಪಚಾರಿಕ ವಿಧಿಯನ್ನು ತೋರ್ಪಡಿಸಿಕೊಳ್ಳುವ ಹಂತದ ಸ್ವೀಕಾರ ಎಂದು ಅರ್ಥ. ಹೀಗೆ ಈತನು ಶ್ರೀವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾದವನು. ಮೂಲತಹ ರಂಗನಾಥನ ಆರಾಧಕರಾದ ಜನಪದರು ಈ ಸಂಪ್ರದಾಯವನ್ನು ಬಿಡದೆ ಆಚರಿಸಿಕೊಂಡು, ಮುಂದುವರೆಸಿಕೊಂಡು ಬಂದಿರುವುದು ಕಂಡುಬರುತ್ತದೆ.

ಮೂಲರಂಗನಾಥನು ಶ್ರೀವೈಷ್ಣವ ಧರ್ಮದಿಂದ ವೈಷ್ಣವೀಕರಣಗೊಂಡು ನೆಲೆಗೊಂಡವನಾಗಿದ್ದರಿಂದ, ಈತನ ಆರಾಧನೆಯಲ್ಲಿ ಈ ದಾಸಪ್ಪಗಳ ಪಾತ್ರ ಮುಖ್ಯವಾಗಿ ಕಂಡುಬರುತ್ತದೆ. ಜನಪದರಿಗೆ ದಾಸಪ್ಪ ಮುಖ್ಯವಾದ ವ್ಯಕ್ತಿಯಾಗಿದ್ದಾನೆ. ಒಂದರ್ಥದಲ್ಲಿ ರಂಗನಾಥನ ಪ್ರತಿರೂಪವೇ ದಾಸಯ್ಯನಾಗಿದ್ದಾನೆ. ಮುಖ್ಯವಾಗಿ ದಾಸಪ್ಪನಾಗಲು ಯಾವ ಜಾತಿಯ ಅವಶ್ಯಕತೆಯು ಇಲ್ಲ, ನಿರ್ಬಂಧವು ಇಲ್ಲ. ಯಾವ ವರ್ಗದವರು ದಾಸಯ್ಯಗಳಾಗಬಹುದು. ರಂಗನಾಥನಿಗೆ ಸಂಬಂಧಿಸಿದ ಎಲ್ಲ ಸೇವೆಗಳಲ್ಲಿಯೂ, ಕೆಲಸಗಳಲ್ಲಿಯೂ, ಆರಾಧನೆಯಲ್ಲಿಯೂ ದಾಸಯ್ಯನ ಪಾತ್ರ ಮಹತ್ವದ್ದಾಗಿದೆ. ಈತನು ಹಾಜರು ಇದ್ದಾಗಲೇ ಎಲ್ಲ ಕೆಲಸಗಳು ಪ್ರಾರಂಭವಾಗುತ್ತವೆ. ಅಲ್ಲದೆ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಶುಭ ಸಮಾರಂಭಗಳಲ್ಲಿ ಈತನ ಪಾತ್ರವು ಮುಖ್ಯವಾಗಿರುತ್ತದೆ.

**ಒಕ್ಕಲು ಅಥವಾ ಕೈವಾಡದವರು :**

ರಂಗನಾಥನ ಸಂಪ್ರದಾಯದಲ್ಲಿ ಒಕ್ಕಲುಗಳ ಪಾತ್ರ ಮಹತ್ವದ್ದಾಗಿದೆ. ಪ್ರತಿ ದೇವಾಲಯಕ್ಕೂ ೧೨ ಮನೆತನದವರು ಒಕ್ಕಲುಗಳಿರುತ್ತಾರೆ. ಇವರು ರಂಗನಾಥನ ಆರಾಧನೆಯಲ್ಲಿ ಮುಖಂಡತ್ವವನ್ನು ವಹಿಸಿಕೊಂಡಿರುತ್ತಾರೆ. ದೇವರಿಗೆ ಸಂಬಂಧಿಸಿದ ಪ್ರತಿಯೊಂದು ಕಾರ್ಯದಲ್ಲಿ ಭಾಗಿಯಾಗುತ್ತಾರೆ. ಈ ಒಕ್ಕಲುಗಳನ್ನು ಆಯಾ ಗ್ರಾಮದವರೇ ನೇಮಿಸಿಕೊಳ್ಳುತ್ತಾರೆ. ಇಲ್ಲಿಯೂ ಎಲ್ಲ ವರ್ಗದ ಜನರಿಗೂ ಸಮಾನವಾದ ಅವಕಾಶಗಳಿರುವುದು ಕಂಡುಬರುತ್ತದೆ. ಅಲ್ಲದೆ ಇವರಿಗೆ ಅಣ್ಣತಮ್ಮಂದಿರುಗಳೆನ್ನುವರು. ವಿಶೇಷವಾಗಿ ರಂಗನಾಥಸ್ವಾಮಿ ಅರ್ಚಕರು ಅಯ್ಯಂಗಾರರು, ಕೆಂಚರಾಯ–ಕಾಡರಾಯರ ಪೂಜಾರರು ಕುರುಬರು, ದೊಡ್ಡ ಎಡೆಗೆ ಕುರುಬ ದಾಸಪ್ಪಗಳು, ವಾದ್ಯಗಾರರು ತಳವಾರರು(ನಾಯಕರು) ಮತ್ತು ಕೊರಮರು, ದೀವಟಿಗೆಯವರು ಮಡಿವಾಳಶೆಟ್ಟರು ಹಾಗೂ ಗೌಡ್ರು ಮುಂತಾದರು ಭಾಗಿಯಾಗುತ್ತಾರೆ. ಮುಖ್ಯವಾಗಿ ದೇವರ ಕೆಲಸ ಕಾರ್ಯಗಳ ಹೊಣೆ ಹೊರುವ ಸುಮಾರು ೧೦, ೨೦, ೫೦ ಜನ ಸದಸ್ಯರಿರುವ ಕಾರ್ಯಕಾರಿ ಸಮಿತಿ ಇದ್ದು, ಎಲ್ಲ ಜಾತಿಗಳ ಜನಸಮುದಾಯಗಳಿಗೂ ಇಲ್ಲಿ ಪ್ರಾತಿನಿಧ್ಯವಿರುತ್ತದೆ. ಅಷ್ಟೇ ಅಲ್ಲದೆ ಹಲವಾರು ರಂಗನಾಥ ದೇವಾಲಯಗಳಲ್ಲಿ ಕಾರ್ಯಕಾರಿ ಸಮಿತಿಯಲ್ಲದೆ, ಒಬ್ಬ ಕನ್ವೀನರ್ ಹಾಗೂ ಹನ್ನೊಂದು ಜನ ಧರ್ಮದರ್ಶಿಗಳನ್ನೊಳಗೊಂಡ 'ದೇವಸ್ಥಾನ ಧರ್ಮದರ್ಶಿ ಸಮಿತಿ' ಯೊಂದನ್ನು ಹೊಂದಿದವುಗಳಾಗಿವೆ. ಈ ಸಮಿತಿಯಲ್ಲಿ ವಿಶೇಷವಾಗಿ ದೇವಾಂಗದ ಇಬ್ಬರು, ಲಿಂಗಾಯತರು ಇಬ್ಬರು, ಕುರುಬರು ಇಬ್ಬರು, ವೈಶ್ಯರು ಇಬ್ಬರು, ಹರಿಜನರು ಇಬ್ಬರು, ನಾಯಕರು ಒಬ್ಬರು, ಉಪ್ಪಾರರು ಒಬ್ಬರು, ಭೋವಿ ಒಬ್ಬರು ಪ್ರಧಾನ ಅರ್ಚಕರು ಒಬ್ಬರು ಇರುವುದು ಕಂಡುಬರುತ್ತದೆ.

**ದೇವದಾಸಿ ಪದ್ಧತಿ :**

ಚಾರಿತ್ರಿಕ ಕಾಲದ ದೇವಾಲಯಗಳಲ್ಲಿ ದೇವದಾಸಿಯರ ಪಾತ್ರವು ಮುಖ್ಯವಾಗಿ ಕಂಡುಬರುತ್ತದೆ. ಈ ಪದ್ಧತಿಗೆ ಎಲ್ಲ ಅರಸು ಮನೆತನಗಳು ಪ್ರೋತ್ಸಾಹ ನೀಡಿರುವುದು ಶಾಸನಗಳಿಂದ ಕಂಡುಬರುತ್ತದೆ. ಮುಖ್ಯವಾಗಿ ದೇವಾಲಯದ ನೃತ್ಯ, ಸಂಗೀತ, ನಾಟಕ ಇತ್ಯಾದಿ ರಂಗಭೋಗದ ಸೇವೆಗಾಗಿಯೇ ಇವರು ಮೀಸಲಾಗಿದ್ದರು. ಇದರ ಜೊತೆಗೆ ದೇವರಿಗೆ ಚಾಮರ ಬೀಸುವುದು, ದೇವಾಲಯವನ್ನು ಸ್ವಚ್ಛಗೊಳಿಸುವ, ರಂಗೋಲಿಯನ್ನು ಇಡುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಪ್ರಸ್ತುತವಾಗಿ ಈ ಪದ್ಧತಿಯು ಆಚರಣೆಯಲ್ಲಿ ಇಲ್ಲದಿದ್ದರು, ರಂಗನಾಥನ ದೇವಾಲಯದ ಎರಡು ಸ್ಥಳಗಳಲ್ಲಿ ಕಂಡುಬಂದಿದೆ. ಮುಖ್ಯವಾಗಿ ರಾಯಚೂರ ಜಿಲ್ಲೆಯ ದೇವದುರ್ಗ ತಾಲೂಕಿನ ಜಾಲಹಳ್ಳಿ ರಂಗನಾಥ ದೇವಾಲಯ ಮತ್ತು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲೂಕಿನ ಗಿಲಕೇನಹಳ್ಳಿ ಗ್ರಾಮಗಳಲ್ಲಿ ಕಂಡುಬರುತ್ತದೆ. ಗಿಲಕೇನಹಳ್ಳಿಯಲ್ಲಿ ಈ ಪದ್ಧತ್ತಿಯು ವಿಶೇಷವಾಗಿ ದೇವರ ಜಾತ್ರೆಯ ಸಂದರ್ಭದಲ್ಲಿ ಕಂಡುಬರುತ್ತದೆ. ಜಾತ್ರೆಯ ಕೊನೆ ದಿನ ರಂಗನಾಥಸ್ವಾಮಿಯು ನೇಮಕಗೊಂಡ ದೇವದಾಸಿಯ ಮನೆಗೆ ಹೋಗಿ ವಿಶೇಷ ಪೂಜೆಯನ್ನು ನೆರವೇರಿಸಿಕೊಂಡು ಬರುತ್ತಾನೆ. ಇದು ಕಡ್ಡಾಯವಾಗಿದೆ. ಪ್ರಸ್ತುತ ಈ ಮನೆಯ ಹೆಂಗಸು ಇಂಜಿನಿಯರ್ ಪದವಿಧರೆ ಯಾದರು ಈ ಪದ್ಧತ್ತಿಯಲ್ಲಿ ಭಾಗಿಯಾಗುವುದು ವಿಶೇಷವಾಗಿದೆ.

## ಅಡಿ ಟಿಪ್ಪಣಿಗಳು

೧. ಬೇವಿನಕಟ್ಟಿ ಮಂಜುನಾಥ., ೨೦೦೭, ಕನ್ನಡ ಜನಪದ ನಂಬಿಕೆಗಳು, ಪು.೩೫.

೨. ನಾಗೇಗೌಡ ಎಚ್. ಎಲ್., ೧೯೭೮, ಕನ್ನಡ ಜಾನಪದ ಕೋಶ, ಪು.೭೦೩.

೩. ಮಹದೇವ ಶಂಕನಪುರ., ೨೦೦೧, ಮಾರಿ ಹಬ್ಬಗಳು, ಪು.೧೩೯.

೪. ಲಕ್ಷ್ಮಣ ತೆಲಗಾವಿ., ೨೦೦೯, ವಿಜಯನಗರ ಕಾಲದ ರಾಮಾನುಜ ಕೂಟಗಳು, ಪು.೯.

೫. ಸೋಸಲೆ ಚಿನ್ನಸ್ವಾಮಿ ಎನ್., ೨೦೧೨, ದಲಿತರ ಬದುಕು-ಮೆಲುಕು, ಪು.೧೬೨.

೬. ಬಸವರಾಜ ಬಿ.ಎಸ್., ೨೦೧೪, ಕಬ್ಬಾಳು : ಸಂಕಥನ (ಅಪ್ರಟಿತ ಪಿಎಚ್. ಡಿ., ಮಹಾಪ್ರಬಂಧ), ಜನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೨೬.

# ಗುಂಟಿಕೆ ಪವಾಡ











ಉತ್ಸವ ಮೂರ್ತಿ



ಬೇಟೆ ಸೊಪ್ಪು



ದಾಸಪ್ಪ



ಹೂ ಅಪ್ಪಣೆ ಕೇಳುವುದು



ರಥ



ಉಯ್ಯಾಲೆ ಉತ್ಸವ



ದಾಸಪ್ಪನಿಗೆ ಮುದ್ರೆ ಹಾಕುವುದು



ದೊಡ್ಡ ಎಡೆ ತಟ್ಟೆ

# ಅಧ್ಯಾಯ–ಏಳು

# ಸಮಾರೋಪ

ವಿವಿಧ ಚಾರಿತ್ರಿಕ ಕಾಲಘಟ್ಟಗಳಲ್ಲಿ ಬೇರೆ–ಬೇರೆ ಪಂಥ, ಸಂಪ್ರದಾಯಗಳು ಹುಟ್ಟಿ ನಾಡಿನ ಉದ್ದಗಲಕ್ಕೂ ವ್ಯಾಪಿಸಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ರಂಗನಾಥ ಸಂಪ್ರದಾಯವು ಒಂದಾಗಿದ್ದು, ರಂಗನಾಥನು ಶಿಷ್ಟ ಮತ್ತು ಪರಿಶಿಷ್ಟ (ಜನಪದ) ನೆಲೆಯಲ್ಲಿ ನೆಲೆಗೊಂಡಿದ್ದಾನೆ. ರಂಗನಾಥ ಸಂಪ್ರದಾಯ ಕುರಿತು ಈ ವರೆಗೆ ವಿವರವಾದ ಅಧ್ಯಯನಗಳು ನಡೆದಿರುವುದು ಕಂಡುಬಂದಿಲ್ಲ. ಪ್ರಸ್ತುತ ಅಧ್ಯಯನದ ಮೂಲಕ ಅಂತಹ ಒಂದು ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದೆ. ರಂಗನಾಥ ಸಂಪ್ರದಾಯವನ್ನು ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮಕವಾಗಿ ಕಟ್ಟಿಕೊಡುವ ಹಿನ್ನೆಲೆಯಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದ ಮೂಲಕ ರಂಗನಾಥ ಸಂಪ್ರದಾಯಕ್ಕೆ ಸಂಬಂಧಿಸಿದ ಪ್ರಾಗಿತಿಹಾಸ ಕಾಲದ ನೆಲೆಗಳು, ಚಾರಿತ್ರಿಕ ಕಾಲಘಟ್ಟದ ದೇವಾಲಯಗಳು, ಮೂರ್ತಿಶಿಲ್ಪಗಳು, ಶಾಸನಗಳು, ಐತಿಹ್ಯ, ನಂಬಿಕೆ ಮತ್ತು ಆಚರಣೆಗಳನ್ನು ಕುರಿತು ಅಧ್ಯಯನ ನಡೆಸಲಾಯಿತು. ಒಟ್ಟಿನಲ್ಲಿ ಈ ಸಂಪ್ರದಾಯವನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಸಮಗ್ರವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಅಧ್ಯಾಯವು ಸಮಾರೋಪವಾಗಿದ್ದು, ಇದರಲ್ಲಿ ಮುಖ್ಯ ಅಧ್ಯಯನದ ಅಧ್ಯಾಯವಾರು ಪ್ರಮುಖ ವಿಷಯಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಹಾಗೂ ಕೊನೆಯಲ್ಲಿ ಅಧ್ಯಯನದ ಫಲಿತಗಳನ್ನು ವಿವರಿಸಲಾಗಿದ್ದು, ಅವು ಕೆಳಗಿನಂತಿದೆ.

ಮೊದಲನೆ ಅಧ್ಯಾಯವು ಪ್ರಸ್ತಾವನೆ. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ವಿಧಾನ ಹಾಗೂ ಅಧ್ಯಯನದ ಸ್ವರೂಪ ಇವೇ ಮೊದಲಾದ ಉಪಶೀರ್ಷಿಕೆಗಳಡಿಯಲ್ಲಿ ವಿವರಿಸಲ್ಪಟ್ಟಿದೆ. ಪ್ರಸ್ತಾವನೆಯಲ್ಲಿ ದೈವಾರಾಧನೆಯ ಹುಟ್ಟು, ಬೆಳವಣಿಗೆ

ಕುರಿತು ವಿವರಿಸಲಾಗಿದೆ. ಮುಖ್ಯವಾಗಿ ಸಂಪ್ರದಾಯ ಪದದ ಅರ್ಥವಿವರಣೆ, ಅದರ ಮಹತ್ವವನ್ನು ತಿಳಿಸುವುದರ ಜೊತೆಗೆ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ ರೂಪಗೊಂಡಿರುವುದರ ಬಗೆಗೆ ತಿಳಿಸಲಾಗಿದೆ. ಹಾಗೆಯೇ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯಲ್ಲಿ ರಂಗನಾಥ ಸಂಪ್ರದಾಯ ಕುರಿತು ನಡೆದ ಅಧ್ಯಯನಗಳನ್ನು ಸಮೀಕ್ಷೆ ಮಾಡಲಾಗಿದೆ. ಹಾಗೂ ಅವುಗಳಲ್ಲಿನ ಮಿತಿಗಳನ್ನು ಹೇಳಿದ್ದು ಮತ್ತು ಅವುಗಳಲ್ಲಿನ ಕೊರತೆಯನ್ನು ನಿಗೀಸಲು ಪ್ರಸ್ತುತ ಅಧ್ಯಯನದ ಶೀರ್ಷಿಕೆಯನ್ನು ಆಯ್ದುಕೊಂಡಿದ್ದರ ಕುರಿತು ಹೇಳಲಾಗಿದೆ. ಪ್ರಸ್ತುತ ಅಧ್ಯಯನದ ಉದ್ದೇಶದಲ್ಲಿ ಇಟ್ಟುಕೊಂಡ ಉದ್ದೇಶದಂತೆ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯವನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕವಾಗಿ ಕಟ್ಟಿಕೊಡುವ ಪ್ರಧಾನ ಆಶಯದೊಂದಿಗೆ ಕರ್ನಾಟಕದಲ್ಲಿ ೨೨ ಜಿಲ್ಲೆಗಳಲ್ಲಿ ಹರಡಿಕೊಂಡಿರುವ ರಂಗನಾಥನ ಆರಾಧನಾ ನೆಲೆಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ. ಅಲ್ಲದೇ ಆರಾಧನೆಯ ಮೂಲ, ಬೆಳವಣಿಗೆ ಕುರಿತು ಅಧ್ಯಯನ ಮಾಡುವುದರ ಜೊತೆಗೆ ೨೨ ಜಿಲ್ಲೆಗಳನ್ನೊಳಗೊಂಡ ವಿಶಾಲ ಪ್ರದೇಶದ ವ್ಯಾಪ್ತಿಯನ್ನು ಆಯ್ದುಕೊಂಡಿದ್ದೇನೆ. ಅವುಗಳ ವ್ಯಾಪ್ತಿಯಲ್ಲಿ ಕಂಡುಬರುವ ೨೭೪ ಗ್ರಾಮಗಳಲ್ಲಿನ ರಂಗನಾಥ ದೇವಾಲಯಗಳನ್ನು ಕ್ಷೇತ್ರಕಾರ್ಯ ಮಾಡುವುದರ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನಲೆಯನ್ನು ವಿವರಿಸಲಾಗಿದೆ. ಭೌಗೋಳಿಕ ಹಿನ್ನಲೆಯಲ್ಲಿ ಕರ್ನಾಟಕದ ಒಟ್ಟು ಭೌಗೋಳಿಕ ಸ್ವರೂಪ ಕುರಿತು ವಿವರಿಸಲಾಗಿದೆ. ಜೊತೆಗೆ ಆ ಭೌಗೋಳಿಕ ಪರಿಸರದಲ್ಲಿ ರಂಗನಾಥ ಸಂಪ್ರದಾಯ ಹರಡಿಕೊಂಡಿರುವ ಪರಿಸರದ ಸ್ವರೂಪ ಕುರಿತು ತಿಳಿಸಲಾಗಿದೆ. ಪ್ರಸ್ತುತ ರಂಗನಾಥನ ಆರಾಧನಾ ನೆಲೆಗಳು ಪ್ರಾಚೀನವಾಗಿದ್ದು, ಅಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ಕಾಲದ ನೆಲೆಗಳನ್ನು ಪಟ್ಟಿ ಮಾಡಿಕೊಳ್ಳಲಾಗಿದೆ. ಈಗಾಗಲೇ ದಾಖಲಾಗಿರುವ ಪ್ರಾಗೈತಿಹಾಸಿಕ ಕಾಲದ ನೆಲೆಗಳಲ್ಲಿ ರಂಗನಾಥನ ಆರಾಧನಾ ನೆಲೆಗಳು ಕಂಡುಬರುತ್ತಿದ್ದು, ಜೊತೆಗೆ ಕ್ಷೇತ್ರಕಾರ್ಯದಲ್ಲಿ ದೊರೆತಿರುವ ನೆಲೆಗಳನ್ನು ಬಳಸಿಕೊಂಡು ವಿವರಿಸಲಾಗಿದೆ. ಪ್ರಾಗೈತಿಹಾಸಿಕ ನೆಲೆಗಳ ಪರಿಸರಕ್ಕೂ ರಂಗನಾಥನ ಪ್ರಾಚೀನ ಪೂಜಾ ಎಡೆಗಳಿಗೂ ಸಂಬಂಧವಿರುವ ಸಾಧ್ಯತೆಗಳನ್ನು ಕಂಡುಕೊಂಡು ವಿವರಿಸಲಾಗಿದೆ. ನಂತರ 'ರಂಗ' ಪದದ ಅರ್ಥ ವಿವರಣೆ ನೀಡುವುದರ ಜೊತೆಗೆ 'ರಂಗ' ಪದಕ್ಕೂ ಪ್ರಸ್ತುತ ಅಧ್ಯಯನದ 'ರಂಗ', 'ರಂಗನಾಥ' ನಿಗೂ ಇರುವ ಸಂಬಂಧವನ್ನು ಕಂಡುಕೊಳ್ಳಲಾಗಿದೆ. ಪರಿಶಿಷ್ಟ ಮತ್ತು ಶಿಷ್ಟ ಸಂಪ್ರದಾಯದಲ್ಲಿ ನೆಲೆಗೊಂಡಿರುವ ರಂಗನಾಥನ ಸಂಪ್ರದಾಯ ಬೆಳೆದು ಬಂದಿರುವ ಹಂತಗಳನ್ನು ಗುರುತಿಸಿ ಆಹಾರ ಸಂಗ್ರಹಣೆ ಮತ್ತು ಬೇಟೆ, ಪಶುಪಾಲನೆ, ಕೃಷಿ ಮತ್ತು ಶಿಷ್ಟ ಸಂಪ್ರದಾಯ ಎಂಬ ಐದು ಹಂತಗಳ ಅಡಿಯಲ್ಲಿ ವಿಸ್ತೃತವಾಗಿ ವಿವರಿಸಲಾಗಿದೆ. ಆಯಾ ಹಂತಗಳ ಜೊತೆಗೆ ರಂಗನಾಥನು ಬೇಟೆರಂಗ, ಗವಿರಂಗಪ್ಪ, ರಂಗಸ್ವಾಮಿ, ರಂಗನಾಥ ಎಂಬ ನಾಮಗಳನ್ನು

ಪಡೆದುಕೊಂಡು ನೆಲೆಸಿರುವುದನ್ನು ಹೇಳಲಾಗಿದೆ. ಈ ಐದು ಹಂತಗಳನ್ನು ಗುರುತಿಸುವಲ್ಲಿ ಪುರಾತತ್ವ, ಸಾಹಿತ್ಯಿಕ ಮತ್ತು ಮೌಖಿಕ ಆಕರಗಳು ಜೊತೆಗೆ ನಂಬಿಕೆ ಮತ್ತು ಆಚರಣೆಗಳನ್ನು ಬಳಸಿಕೊಳ್ಳುವುದರ ಮೂಲಕ ವಿವರಿಸಲಾಗಿದೆ ಮತ್ತು ಸ್ಪಷ್ಟಪಡಿಸಲಾಗಿದೆ. ಪರಿಶಿಷ್ಟ ಸಂಪ್ರದಾಯದಲ್ಲಿ ನಾಲ್ಕು ಹಂತದ ರಂಗನಾಥ ವೈಷ್ಣವ ಧರ್ಮದ ಪ್ರಭಾವದಿಂದಾಗಿ ವೈಷ್ಣವೀಕರಣಗೊಂಡು ನೆಲೆಗೊಂಡಿದ್ದರ ಕುರಿತು ವಿವರಿಸಲಾಗಿದೆ. ಜೊತೆಗೆ ಶಿಷ್ಟ ರಂಗನಾಥನಿಗೆ ಆಶ್ರಯ ನೀಡಿ ಪ್ರೋತ್ಸಹಿಸಿದ ವಿವಿಧ ರಾಜ ಮನೆತನಗಳ ಕುರಿತು, ಅವರು ನೀಡಿರುವ ಕೊಡುಗೆಗಳ ಕುರಿತು ವಿವರಿಸಲಾಗಿದೆ. ಹೀಗೆ ಅನಾದಿ ಕಾಲದಿಂದ ಇತಿಹಾಸ ಕಾಲದವರೆಗೂ ರಂಗನಾಥ ಸಂಪ್ರದಾಯ ಬೆಳೆದು ಬಂದಿರುವ ಆಯಾಮಗಳನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಐತಿಹ್ಯಗಳ ಕುರಿತು ವಿವರಿಸಲಾಗಿದೆ. ಪ್ರಸ್ತುತ ತಿಳಿಯಪಡಿಸಿರುವ ಐದು ಹಂತದ ರಂಗನಾಥ ಸಂಪ್ರದಾಯವನ್ನು ಕಟ್ಟಿಕೊಡುವಲ್ಲಿ ಐತಿಹ್ಯಗಳು ಪ್ರಮುಖ ಪಾತ್ರ ವಹಿಸಿರುವುದನ್ನು ಕಂಡುಕೊಳ್ಳಲಾಗಿದೆ. ೨೨ ಜಿಲ್ಲೆಗಳಲ್ಲಿಯೂ ವ್ಯಾಪಕವಾದ ಕ್ಷೇತ್ರಕಾರ್ಯಕೈಗೊಂಡು ಬಹುಸಂಖ್ಯಾತ ಜನಸಮುದಾಯಗಳ ಮನದಲ್ಲಿರುವ ಅವರ ಮಧ್ಯ ಪ್ರಚಲಿತದಲ್ಲಿರುವ ಐತಿಹ್ಯಗಳನ್ನು ಸಂಗ್ರಹಿಸಿ ದಾಖಲಿಸಿಕೊಂಡು ಅವುಗಳನ್ನು ಆರು ಹಂತಗಳಲ್ಲಿ ವಿಶ್ಲೇಷಣೆಗೆ ಒಳಪಡಿಸಿ ವಿವರಿಸಲಾಗಿದೆ. ಮುಖ್ಯವಾಗಿ ರಂಗನಾಥ ಸಂಪ್ರದಾಯದ ಮೂಲ, ಬೆಳವಣಿಗೆ, ಹರಡಿರುವ ಪರಿಸರ, ಮತ್ತು ಹಂತ ಹಂತವಾಗಿ ಬದಲಾವಣೆಗೊಂಡಿರುವ ನೆಲೆಗಳನ್ನು ಕಂಡುಕೊಳ್ಳುವಲ್ಲಿ ಐತಿಹ್ಯಗಳು ಸಹಾಯಕವಾಗಿದ್ದು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ರಂಗನಾಥ ದೇವಾಲಯಗಳ ಕುರಿತದ್ದಾಗಿದೆ. ಈ ಅಧ್ಯಾಯವು ಸಂಪೂರ್ಣವಾಗಿ ಕ್ಷೇತ್ರಕಾರ್ಯ ಅವಲಂಬಿತವಾದದ್ದು. ಮುಖ್ಯವಾಗಿ ದೇವಾಲಯಗಳು, ಸಾಂಸ್ಕೃತಿಕ ಚರಿತ್ರೆಯ ಪುನರ್ ನಿರ್ಮಾಣದ ಬಹುಮುಖ್ಯ ಆಕರಗಳಾಗಿವೆ. ಇವುಗಳು ಧಾರ್ಮಿಕ ಪೂಜಾ ಕೇಂದ್ರಗಳಾಗಿ ಬೆಳೆದು ಬಂದಿರುವ ಮೂಲಕ ಸಾಂಸ್ಕೃತಿಕ ಜೀವನದಲ್ಲಿ ವಹಿಸುವ ಪಾತ್ರ ಅದ್ವಿತೀಯವಾದುದ್ದು. ರಂಗನಾಥ ಸಂಪ್ರದಾಯವನ್ನು ಕಟ್ಟಿಕೊಡುವಲ್ಲಿ ದೇವಾಲಯಗಳು ಮಹತ್ವದ ಪಾತ್ರವಹಿಸಿವೆ. ಇವು ಕರ್ನಾಟಕದ ೨೨ ಜಿಲ್ಲೆಗಳಲ್ಲಿ ನೆಲೆಗೊಂಡಿದ್ದು ಒಟ್ಟು ೨೭೪ ದೇವಾಲಯಗಳನ್ನು ಕ್ಷೇತ್ರಕಾರ್ಯ ಕೈಕೊಂಡು ಅವುಗಳ ಸ್ವರೂಪ, ಬೆಳೆದಿರುವ ಪರಿಸರವನ್ನು ವಿವರಿಸಲಾಗಿದೆ. ಹಾಗೂ ರಂಗನಾಥ ಸಂಪ್ರದಾಯದ ಐದು ಹಂತಗಳನ್ನು ಗುರುತಿಸಿಕೊಡುವಲ್ಲಿ ದೇವಾಲಯಗಳು ಪ್ರಮುಖ ಪಾತ್ರವಹಿಸಿರುವುದನ್ನು ಹೇಳಲಾಗಿದೆ. ರಂಗನಾಥನನ್ನು ನಿರಾಕಾರ ಅಥವಾ ಅಮೂರ್ತ ರೂಪದಲ್ಲಿ ಪೂಜಿಸುವ ೧೨೨ ರಂಗನಾಥ ದೇವಾಲಯಗಳು, ಬೃಹತ್ ಬಂಡೆಗಳಿಂದ ಆವೃತವಾದ ಗವಿಯಲ್ಲಿರುವ ೧೧ ರಂಗನಾಥ ದೇವಾಲಯಗಳು, ಸ್ಥಾನಕ ಮೂರ್ತಿಶಿಲ್ಪ

ಅದರಲ್ಲೂ ಶಂಖ, ಚಕ್ರ, ಬಿಲ್ಲು ಬಾಣ ಹಿಡಿದಿರುವ ೨೦ ರಂಗನಾಥ ದೇವಾಲಯಗಳು, ಸ್ಥಾನಕ ಮೂರ್ತಿಶಿಲ್ಪ ಅದರಲ್ಲೂ ಶಂಖ, ಚಕ್ರ, ಗದೆ, ಪದ್ಮ, ಅಭಯ, ವರದ ಲಕ್ಷಣಗಳನ್ನು ಒಳಗೊಂಡಿರುವ ೧೦೨ ರಂಗನಾಥ ದೇವಾಲಯಗಳು, ಶಯನ ಮೂರ್ತಿಶಿಲ್ಪಗಳನ್ನು ಒಳಗೊಂಡಿರುವ ೩೦ ರಂಗನಾಥ ದೇವಾಲಯಗಳ ಲಕ್ಷಣಗಳನ್ನು ಒಂದುಗೂಡಿಸಿ ವಾಸ್ತು ಲಕ್ಷಣದಡಿಯಲ್ಲಿ ವಿವರವಾಗಿ ವಿವರಿಸಲಾಗಿದೆ. ಇಲ್ಲಿನ ದೇವಾಲಯಗಳು ೯ ನೇ ಶತಮಾನದಿಂದ ಆರಂಭವಾದರು ಹೆಚ್ಚಿನ ದೇವಾಲಯಗಳು ವಿಜಯನಗರ ಮತ್ತು ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ. ವಿಜಯನಗರೋತ್ತರ ಕಾಲಘಟ್ಟದಲ್ಲಿನ ಹೆಚ್ಚಿನ ದೇವಾಲಯಗಳು ಪಾಳೆಯಗಾರರ ಕಾಲದಲ್ಲಿ ನಿರ್ಮಾಣ ಮತ್ತು ಜೀರ್ಣೋದ್ಧಾರವಾಗಿದ್ದು, ದ್ರಾವಿಡ ವಾಸ್ತು ಶೈಲಿಯಲ್ಲಿ ನಿರ್ಮಾಣವಾಗಿದೆ. ಹೆಚ್ಚಾಗಿ ಏಕಕೂಟ ದೇವಾಲಯಗಳಾಗಿದ್ದು, ಗರ್ಭಗುಡಿ ರಚನೆಯಲ್ಲಿ ವೃತ್ತಾಯತ, ಚೌಕಾಕಾರ, ಆಯತಕಾರದ ಗರ್ಭಗುಡಿ ಹೊಂದಿದ್ದು, ವೃತ್ತಾಯತ ಗರ್ಭಗುಡಿಗೆ ರಂಗಸ್ಥಳದ ರಂಗನಾಥ ದೇವಾಲಯ ಉದಾಹರಣೆಯಾಗಿದೆ.

ಅಧ್ಯಾಯ ಐದು ರಂಗನಾಥ ಮೂರ್ತಿಶಿಲ್ಪಗಳಿಗೆ ಮೀಸಲಾಗಿದೆ. ಈ ಅಧ್ಯಾಯವು ಸಂಪೂರ್ಣವಾಗಿ ಕ್ಷೇತ್ರಕಾರ್ಯ ಅವಲಂಬಿತವಾದುದ್ದು. ಕರ್ನಾಟಕದಲ್ಲಿ ಕಂಡುಬರುವ ರಂಗನಾಥನ ಒಟ್ಟು ಶಿಲ್ಪಗಳನ್ನು ಕ್ಷೇತ್ರಕಾರ್ಯದ ಮೂಲಕ ದಾಖಲಿಸಿಕೊಂಡು ಅವುಗಳ ಹುಟ್ಟು, ಸ್ವರೂಪ, ಬೆಳವಣಿಗೆಯ ಕುರಿತು ವಿವರವಾಗಿ ವಿವರಿಸಲಾಗಿದೆ. ಜೊತೆಗೆ ಅವುಗಳಲ್ಲಿನ ಭಿನ್ನ ಪ್ರಕಾರಗಳು, ಶಿಲ್ಪ ಪ್ರತಿಮಾ ಲಕ್ಷಣಗಳು, ಶೈಲಿ, ಬಳಸಿದ ಸಾಮಗ್ರಿ ಅಲಂಕರಣೆಗಳ ಕುರಿತು ಅಧ್ಯಯನ ಮಾಡಲಾಗಿದೆ. ಮುಖ್ಯವಾಗಿ ರಂಗನಾಥ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಶಿಷ್ಟ ಮತ್ತು ಪರಿಶಿಷ್ಟ ನೆಲೆಯಲ್ಲಿ ಮೂರ್ತಿಶಿಲ್ಪಗಳು ನೆಲೆಗೊಂಡಿರುವುದನ್ನು ಗುರುತಿಸಲಾಗಿದೆ. ಶಿಷ್ಟ ಪರಂಪರೆಯಲ್ಲಿ ಶಯನ, ಸ್ಥಾನಕ ಮೂರ್ತಿಶಿಲ್ಪಗಳು (ಶಂಖ, ಚಕ್ರ, ಬಿಲ್ಲು, ಬಾಣ) ಮತ್ತು ಸ್ಥಾನಕ ಮೂರ್ತಿಶಿಲ್ಪ (ಶಂಖ, ಚಕ್ರ, ಗದ, ಪದ್ಮ, ಅಭಯ, ವರದ) ಗಳು ಕಂಡುಬಂದರೆ, ಪರಿಶಿಷ್ಟ ಪರಂಪರೆಯಲ್ಲಿ ಹುಟ್ಟುಬಂಡೆ, ಉದ್ಭವಕಲ್ಲು, ಗುಂಡುಕಲ್ಲು ಮುಂತಾದ ಮೂರ್ತಿಶಿಲ್ಪಗಳ ಕುರಿತು ವಿವರವಾಗಿ ಚರ್ಚಿಸಲಾಗಿದೆ. ಪ್ರಸ್ತುತ ಎಲ್ಲ ಬಗೆಯ ೨೭೪ ಮೂರ್ತಿಶಿಲ್ಪಗಳು ರಂಗನಾಥನ ಸಂಪ್ರದಾಯದ ಐದು ಹಂತಗಳನ್ನು ಗುರುತಿಸುವಲ್ಲಿ ಮತ್ತು ಕಟ್ಟಿಕೊಡುವಲ್ಲಿ ಹೇಗೆ ಸಹಾಯಕವಾಗಿವೆ ಎಂಬುದನ್ನು ವಿಸ್ತಾರವಾಗಿ ವಿವರಿಸಲಾಗಿದೆ.

ಆರನೆಯ ಅಧ್ಯಾಯವು ನಂಬಿಕೆ ಮತ್ತು ಆಚರಣೆಗಳು. ಪ್ರಸ್ತುತ ಅಧ್ಯಾಯವು ಸಂಪೂರ್ಣವಾಗಿ ಕ್ಷೇತ್ರಕಾರ್ಯ ಅವಲಂಬಿತವಾದದ್ದು. ರಂಗನಾಥ ಸಂಪ್ರದಾಯವನ್ನು ಕಟ್ಟಿಕೊಡುವಲ್ಲಿ ಪ್ರಸ್ತುತ ಅನಾದಿ ಕಾಲದಿಂದಲೂ ಹಂತ ಹಂತವಾಗಿ ಬೆಳೆದು, ಬದಲಾವಣೆಗೊಳಗಾಗುತ್ತಾ ಬಂದಿರುವ

ಆಚರಣೆಗಳೇ ಜೀವಂತ ಸಾಕ್ಷಿಯಾಗಿವೆ. ಹೀಗಾಗಿ ಇವುಗಳ ಮಹತ್ವವನ್ನು ಮನಗೊಂಡು ವರ್ಷದುದ್ದಕ್ಕೂ ನಡೆಯುವ ಎಲ್ಲ ಆಚರಣೆಗಳಲ್ಲಿ ಭಾಗಿಯಾಗಿ ಮಾಹಿತಿಯನ್ನು ಸಂಗ್ರಹಿಸಿ, ದಾಖಲಿಸಿಕೊಂಡು ವಿವರಣೆ ಮತ್ತು ವಿಶ್ಲೇಷಣೆಯ ಮೂಲಕ ತಿಳಿಸಲಾಗಿದೆ. ಇವು ರಂಗನಾಥನ ಐದು ಹಂತಗಳನ್ನು ಗಟ್ಟಿಗೊಳಿಸುವಲ್ಲಿ ಆಧಾರಗಳಾಗಿ ಬಳಸಿಕೊಂಡು ವಿವರಿಸಲಾಗಿದೆ. ಜೊತೆಗೆ ಕರ್ನಾಟಕದಲ್ಲಿ ನೆಲೆಗೊಂಡಿರುವ ಎಲ್ಲ ಸಮುದಾಯಗಳು ರಂಗನಾಥನನ್ನು ಕಾಣುವ ಬಗೆ, ದೈವದ ಜೊತೆ ಅವರ ಒಡನಾಟ, ನಂಬಿಕೆ, ಆರಾಧನೆಯ ಕುರಿತು ವಿವರಿಸಲಾಗಿದೆ. ಹಾಗೂ ರಂಗನಾಥನ ಸಂಪ್ರದಾಯದಲ್ಲಿ ದಾಸಯ್ಯನ ಪಾತ್ರ, ಭೂತಪ್ಪಗಳ, ದೇವದಾಸಿಯರ ಪಾತ್ರಗಳ ಕುರಿತು ವಿವರಿಸಲಾಗಿದೆ.

**ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನದ ಫಲಿತಗಳು ಈ ಕೆಳಗಿನಂತಿವೆ.**

ಮೊದಲ ಬಾರಿಗೆ ಶಿಷ್ಟ ಮತ್ತು ಪರಿಶಿಷ್ಟ ರಂಗನಾಥ ಸಂಪ್ರದಾಯವನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಕಟ್ಟಿಕೊಡುವ ವಿವರಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನ ಪ್ರಸ್ತುತ ಮಹಾಪ್ರಬಂಧದಲ್ಲಿ ಮಾಡಲಾಗಿದೆ.

ಮೊದಲ ಬಾರಿಗೆ ಈ ಸಂಪ್ರದಾಯದ ವ್ಯಾಪ್ತಿಯನ್ನು ಗುರುತಿಸಲ್ಪಡುವ ಪ್ರಯತ್ನ ಮಾಡಲಾಗಿದ್ದು, ಇದು ಕರ್ನಾಟಕದ ೨೨ ಜಿಲ್ಲೆಗಳನ್ನು ಒಳಗೊಂಡಿರುವುದು ಅಧ್ಯಯನದಿಂದ ಸ್ಪಷ್ಟಗೊಂಡಿದೆ.

ಕರ್ನಾಟಕದ ೨೨ ಜಿಲ್ಲೆಗಳಲ್ಲಿ ಹರಡಿಕೊಂಡಿರುವ ಒಟ್ಟು ೨೭೪ ದೇವಾಲಯಗಳನ್ನು ಜೊತೆಗೆ ಮೂರ್ತಿಶಿಲ್ಪ, ಮೌಖಿಕ ಆಕರಗಳು, ನಂಬಿಕೆ ಮತ್ತು ಆಚರಣೆಗಳನ್ನು ಕ್ಷೇತ್ರಕಾರ್ಯದ ಮೂಲಕ ಸಮಗ್ರವಾಗಿ ಸಂಗ್ರಹಿಸಿ, ದಾಖಲಿಸಿಕೊಂಡು, ವಿಶ್ಲೇಷಿಸಿ ಪ್ರಥಮವಾಗಿ ಪ್ರಸ್ತುತ ಅಧ್ಯಯನವನ್ನು ಕಟ್ಟಿಕೊಡಲಾಗಿದೆ.

ಇಲ್ಲಿಯವರೆಗೂ ನಿರ್ಲಕ್ಷಕ್ಕೆ ಒಳಗಾಗಿದ್ದ ರಂಗನಾಥ ಸಂಪ್ರದಾಯವನ್ನು ಕಟ್ಟಿಕೊಡುವುದರ ಜೊತೆಗೆ ಕರ್ನಾಟಕದಲ್ಲಿ ನೆಲೆಗೊಂಡಿರುವ ಮೈಲಾರ, ಬೀರಪ್ಪ, ಜುಂಜಪ್ಪ, ಮಲೆಮಾದೇಶ್ವರ, ಮಂಟೇಸ್ವಾಮಿ ಮುಂತಾದ ಸಮಕಾಲೀನ ಸಂಪ್ರದಾಯಗಳ ಜೊತೆಗೆ ಈ ಸಂಪ್ರದಾಯವು ಅಸ್ತಿತ್ವದಲ್ಲಿತ್ತು ಎನ್ನುವುದನ್ನು ಮೊದಲ ಬಾರಿಗೆ ಬೆಳಕಿಗೆ ತರಲಾಗಿದೆ.

ಪ್ರಸ್ತುತ ರಂಗನಾಥನೆಂದು ಗುರುತಿಸಿಕೊಂಡಿರುವ ದೈವ ಅನಾದಿ ಮಾನವನ ಜೊತೆ ಸಂಬಂಧವನ್ನು ಬೆಸೆದುಕೊಂಡು ನಿರಂತರವಾಗಿ ಬದಲಾವಣೆಗೆ ಒಳಗಾಗುತ್ತಾ ಹಂತ ಹಂತವಾಗಿ ಬೇಟೆರಂಗ, ಗವಿರಂಗಪ್ಪ, ರಂಗಸ್ವಾಮಿ, ರಂಗನಾಥ ಎಂಬ ವಿವಿಧ ಹೆಸರುಗಳನ್ನು ಪಡೆದುಕೊಂಡು ನೆಲೆಸಿರುವುದು ಅಧ್ಯಯನದಿಂದ ಸ್ಪಷ್ಟಗೊಂಡಿದೆ.

ಮಾನವ ಸಂಸ್ಕೃತಿಯ ವಿಕಾಸದಲ್ಲಿ ಗುರುತಿಸಿರುವ ಹಂತಗಳಲ್ಲಿ ಆಹಾರ ಸಂಗ್ರಹಣೆ ಮತ್ತು ಬೇಟೆ ಹಂತದಲ್ಲಿ ಬೇಟೆರಂಗನಾಗಿ, ಪಶುಪಾಲನೆ ಹಂತದಲ್ಲಿ ಗವಿರಂಗಪ್ಪನಾಗಿ, ಕೃಷಿ ಹಂತದಲ್ಲಿ ರಂಗಸ್ವಾಮಿಯಾಗಿ, ಶಿಷ್ಟ ಸಂಪ್ರದಾಯದಲ್ಲಿ ರಂಗನಾಥನಾಗಿ ನೆಲೆಗೊಂಡಿರುವ ರಂಗನಾಥ ಎಲ್ಲ ಹಂತಗಳನ್ನು ಒಳಗೊಂಡು ಮುಂದುವರೆದು ಬಂದಿರುವುದು ಕಂಡುಬರುತ್ತದೆ.

ಮುಖ್ಯವಾಗಿ 'ರಂಗ' ಅಂದರೆ ನಿರಾಕಾರ, ಅಮೂರ್ತ ಸ್ವರೂಪ. ಇದಕ್ಕೆ ಯಾವುದೇ ಆಕಾರವಿಲ್ಲ. ರೂಪವಿಲ್ಲ. ರಂಗ ಎನ್ನುವ ನಾಮ ಒಂದೇ ಮೂಲ ಮತ್ತು ಆಧಾರ ಎಂಬುವುದು ಅಧ್ಯಯನದಿಂದ ಖಚಿತಗೊಂಡಿದೆ.

ಪರಿಶಿಷ್ಟ ಸಂಪ್ರದಾಯದ ರಂಗನಾಥ ಅನಾದಿ ಮಾನವನ ಕಾಲದಿಂದಲೂ ಬಂದವನಾಗಿದ್ದಾನೆ. ಆದರೆ ಚಾರಿತ್ರಿಕ ದೃಷ್ಟಿಯಿಂದ ಶಿಷ್ಟ ರಂಗನಾಥ ಸಂಪ್ರದಾಯ ೯ ನೇ ಶತಮಾನದಿಂದ ಅಸ್ತಿತ್ವದಲ್ಲಿದ್ದದ್ದು ಕಂಡುಬರುತ್ತದೆ.

ಈವರೆಗೂ ವಿದ್ವಾಂಸರು ಬೇಟೆರಂಗನ ಕಾಲಾವಧಿಯನ್ನು ಮಧ್ಯಕಾಲಘಟ್ಟ ಎಂದು ಗುರುತಿಸಲಾಗಿದ್ದು, ಪ್ರಸ್ತುತ ಅಧ್ಯಯನದಿಂದ ಬೇಟೆರಂಗನ ಕಾಲಾವಧಿಯನ್ನು ಮತ್ತಷ್ಟು ಹಿಂದಕ್ಕೆ ತೆಗೆದುಕೊಂಡು ಅನಾದಿ ಮಾನವನ ಜೊತೆ ಆತನ ಸಂಬಂಧವಿರುವುದನ್ನು ಸ್ಪಷ್ಟಗೊಳಿಸಲಾಗಿದೆ.

ರಂಗನಾಥ ಸಂಪ್ರದಾಯದಲ್ಲಿ ಒಂದು ಮಹತ್ವದ ಘಟ್ಟ ಅದು ವೈಷ್ಣವ ಧರ್ಮದ ಪ್ರಭಾವದಿಂದಾಗಿ ವೈಷ್ಣವೀಕರಣ ಗೊಂಡಿರುವುದು. ಮೂಲದಿಂದಲೂ ಯಾವ ಮತ, ಪಂಥ, ಧರ್ಮಕ್ಕೂ ಸೇರದ ರಂಗನಾಥ ಸಂಪ್ರದಾಯವನ್ನು ವೈಷ್ಣವಧರ್ಮ ಒಳಗುಮಾಡಿಕೊಂಡು ತನ್ನ ತೆಕ್ಕೆಗೆ ತೆಗೆದುಕೊಂಡಿರುವುದು ಅಧ್ಯಯನದಿಂದ ಸ್ಪಷ್ಟಗೊಂಡಿದೆ.

ಒಂದೆ ಕಾಲಘಟ್ಟದಲ್ಲಿ ವೈಷ್ಣವಧರ್ಮ ಬೇಟೆ ಮತ್ತು ಕಾಡಿನ ಮೂಲದಿಂದ ಬಂದ ರಂಗಪ್ಪ ಮತ್ತು ತಿಮ್ಮಪ್ಪನನ್ನು ತನ್ನ ಧರ್ಮದ ಅಡಿಯಲ್ಲಿ ಗುರುತಿಸಿಕೊಳ್ಳುವ ಪ್ರಯತ್ನವನ್ನು ಮಾಡಿರುವುದರ ಜೊತೆಗೆ ಯಶಸ್ಸನ್ನು ಕಂಡಿರುವುದು ಕೂಡಾ ತಿಳಿದುಬರುತ್ತದೆ.

ಶಿಷ್ಟ ರಂಗನಾಥ ಸಂಪ್ರದಾಯದ ಹುಟ್ಟಿಗೆ ಮೂಲ ಕಾರಣ ವೈಷ್ಣವಧರ್ಮದ ಪ್ರಭಾವ. ಅದು ಹೆಚ್ಚು ವ್ಯಾಪಕ ವಿಸ್ತಾರ ಜೊತೆಗೆ ಮಹತ್ವ ಪಡೆದಿದ್ದು ಶ್ರೀವೈಷ್ಣವಧರ್ಮದ ರಾಮಾನುಜಾಚಾರ್ಯರಿಂದ ಎಂಬುವುದು ತಿಳಿದುಬರುತ್ತದೆ. ಹೀಗಾಗಿ ಶ್ರೀ ರಾಮಾನುಜರ ಕಾರ್ಯಕ್ಷೇತ್ರವಾದ ಹೊಯ್ಸಳ ನಾಡಿನಲ್ಲಿ ಶ್ರೀರಂಗಪಟ್ಟಣ ಮತ್ತು ಶಿವನಸಮುದ್ರದ ರಂಗನಾಥ ದೇವಾಲಯಗಳು ಶಿಷ್ಟ ಸಂಪ್ರದಾಯದಿಂದ ಹೆಚ್ಚು ಪ್ರಸಿದ್ಧಿಗೆ ಬಂದವು ಎಂಬುದು ಅಧ್ಯಯನದಿಂದ ಸ್ಪಷ್ಟಗೊಂಡಿದೆ.

ಮೂಲದಲ್ಲಿ ಜನಸಾಮಾನ್ಯರಿಂದ, ತಳಸಮುದಾಯದಿಂದ ಹುಟ್ಟಿ ಬೆಳೆದುಕೊಂಡು ಬಂದ ಪರಿಶಿಷ್ಟ ರಂಗನಾಥ ಸಂಪ್ರದಾಯ, ವೈಷ್ಣವ ಧರ್ಮದ ಆಶ್ರಯದಲ್ಲಿ ಶಿಷ್ಟಗೊಂಡು ನೆಲೆಸಿ ಮುಂದುವರೆದಿರುವುದು ಕಂಡುಬರುತ್ತದೆ.

ಶಿಷ್ಟ ಮತ್ತು ಪರಿಶಿಷ್ಟ ರಂಗನಾಥ ಸಂಪ್ರದಾಯಗಳಿಗೆ ವಿಜಯನಗರ ಕಾಲಾವಧಿಯಲ್ಲಿ ರಾಜಾಶ್ರಯ ದೊರೆಕ್ಕಿತ್ತಲ್ಲದೆ, ಈ ಎರಡು ಸಂಪ್ರದಾಯಗಳು ಹೆಚ್ಚು ವ್ಯಾಪಕವಾಗಿ ಬೆಳೆದು ಬಂದಿರುವುದು ಶಾಸನಗಳಿಂದ ಸ್ಪಷ್ಟಗೊಂಡಿದೆ. ಜೊತೆಗೆ ಪಾಳೆಯಗಾರರ ಕಾಲದಲ್ಲಿ ಮತ್ತಷ್ಟು ವ್ಯಾಪಕವಾಗಿ ಹರಡಿಕೊಂಡಿರುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಅಸ್ತಿತ್ವದಲ್ಲಿರುವ ರಂಗನಾಥ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ರಂಗನಾಥ ಸಂಪ್ರದಾಯದ ಐದು ಹಂತಗಳನ್ನು ಗುರುತಿಸುವಲ್ಲಿ ಜೀವಂತ ನಿದರ್ಶನಗಳಾಗಿವೆ. ಅಲ್ಲದೆ ಮೂರ್ತಿಶಿಲ್ಪದಲ್ಲಿ ವಿಶೇಷವಾಗಿ ಬದಲಾವಣೆಗೊಂಡಿರುವುದು ಸ್ಪಷ್ಟಗೊಂಡಿದೆ.

ಈ ಮೊದಲು ನಾಲ್ಕು ಹಂತದ ರಂಗನಾಥ ಮೂರ್ತಿಶಿಲ್ಪಗಳು ನಿರಾಕಾರ, ಅಮೂರ್ತ ಸ್ವರೂಪದ್ದಾಗಿದ್ದು, ಶಿಷ್ಟ ಸಂಪ್ರದಾಯದಲ್ಲಿ ಶಯನ, ಸ್ಥಾನಕ ಮೂರ್ತಿಶಿಲ್ಪಗಳು ಬೆಳೆದು ಬಂದಿರುವುದನ್ನು ಗುರುತಿಸಲಾಗಿದೆ.

ಬೇಟೆರಂಗನೆಂದು ಕರೆದಿರುವ ಬಿಲ್ಲು, ಬಾಣ, ಶಂಖ, ಚಕ್ರ ಹಿಡಿದು ಚತುರ್ಭುಜನಾಗಿರುವ ಮೂರ್ತಿ ಶಿಲ್ಪ ಮುಖ್ಯವಾಗಿ ವಿಜಯನಗರ ಕಾಲಾವಧಿಯಲ್ಲಿಯೇ ಪ್ರಾರಂಭವಾಗಿರುವುದು ಕಂಡುಬರುತ್ತದೆ. ಮೊದಲ ಬಾರಿಗೆ ಸಂಗಮ ಕಾಲದ ಹಜಾರರಾಮ ದೇವಾಲಯದಲ್ಲಿ ಗರ್ಭಗೃಹದ ಹಿಂಭಾಗದಲ್ಲಿ, ಬಲಭಾಗದಲ್ಲಿ ಕಂಡುಬಂದಿದ್ದು, ಇದು ವಿಶೇಷವಾಗಿದೆ.

ರಂಗನಾಥ ಎಂಬ ದೈವ ಮುಖ್ಯವಾಗಿ ಜನಸಮುದಾಯದ ನಂಬಿಕೆಯಿಂದಲೇ ಹುಟ್ಟಿರುವುದು ಸ್ಪಷ್ಟಗೊಳ್ಳುತ್ತದೆ. ಈ ನಂಬಿಕೆಗಳೇ ಆತನ ಸಂಪ್ರದಾಯವನ್ನು ಮುಂದುವರೆಸಿವೆ. ಜೊತೆಗೆ ಆಚರಣೆಗಳು ಅನಾದಿ ಬೇಟೆರಂಗನಿಂದ ಹಿಡಿದು ಶಿಷ್ಟ ರಂಗನಾಥ ಇಬ್ಬರನ್ನೂ ಜೊತೆಯಾಗಿಸಿ ಗಾಢ ಸಂಬಂಧವನ್ನು ಏರ್ಪಡಿಸುವಲ್ಲಿ ಸಹಾಯಕವಾಗಿ ನೆಲೆಗೊಂಡಿವೆ.

ಮುಖ್ಯವಾಗಿ ರಂಗನಾಥನು ಯಾವ ಮತ ಪಂಥವನ್ನು ಸಂಕೇತಿಸುವವನಲ್ಲ. ಆ ಯಾವ ಉದ್ದೇಶವು ಆತನಿಗೆ ಇರದಿರುವುದು ಆತನು ಬೆಳೆದು ಬಂದ ಸಂಪ್ರದಾಯದಿಂದ ಕಂಡುಬರುತ್ತದೆ. ಪ್ರಸ್ತುತ ರಂಗನಾಥ ಅಸ್ತಿತ್ವದಲ್ಲಿರುವ ಮೈಲಾರ, ಭೈರವ, ಜುಂಜಪ್ಪ, ಮಲೆಮಾದೇಶ್ವರ, ಮಂಟೇಸ್ವಾಮಿ ಮುಂತಾದ ಮತ ಪಂಥಗಳ ಜೊತೆಗೂ ಘರ್ಷಣೆಗೊಳ್ಳದೆ ಸಾಮರಸ್ಯ, ಸಮನ್ವಯದಿಂದ ಬಂದವನಾಗಿದ್ದಾನೆ. ಜೊತೆಗೆ ಆಯಾ ಮತ ಪಂಥಗಳ ಕೆಲವು ನಂಬಿಕೆ ಮತ್ತು ಆಚರಣೆಗಳನ್ನು ತನ್ನದಾಗಿಸಿಕೊಂಡು, ಜನಸಾಮಾನ್ಯರ ಬೇಕು ಬೇಡಿಕೆಗಳನ್ನು ಪೂರೈಸುವ ದೈವವಾಗಿ ನೆಲೆಗೊಂಡಿದ್ದಾನೆ.

ರಂಗನಾಥ ಸಂಪ್ರದಾಯದ ಒಂದು ಮುಖ್ಯ ಅಂಶ ಲಿಂಗ ಮತ್ತು ರಂಗನಲ್ಲಿ ಸಮಾನತೆ, ಸಾಮರಸ್ಯವಿದ್ದು, ಹರಿಹರ ಸಮಾನತೆಯನ್ನು ತೋರ್ಪಡಿಸುತ್ತದೆ. ಜನಸಾಮಾನ್ಯರಿಗೆ ಲಿಂಗನು ಅವನೇ, ರಂಗನು ಅವನೇ ಆಗಿ ನೆಲೆಗೊಂಡಿದ್ದಾನೆ.

ಶಿಷ್ಟ ಸಂಪ್ರದಾಯದ ಪ್ರಭಾವದಿಂದಾಗಿ ಪ್ರಸ್ತುತ ದೇವಾಲಯಗಳಲ್ಲಿ ಆಗಮೋಕ್ತ ಪೂಜೆಗಳು ನೆರವೇರುತ್ತಿವೆ. ಆದರೆ ಐದು ಹಂತದ ರಂಗ, ರಂಗನಾಥನನ್ನು ಒಳಗೊಂಡ ಆರಾಧನೆ, ಸಂಪ್ರದಾಯವು ಪ್ರಸ್ತುತ ಎಲ್ಲ ದೇವಾಲಯಗಳಲ್ಲಿ ನಡೆಯುವ ವಿವಿಧ ಆಚರಣೆಗಳು ಸ್ಪಷ್ಟಗೊಳಿಸುತ್ತವೆ.

ಮಾನವನ ಸಂಸ್ಕೃತಿಯ ವಿಕಾಸದ ಹಂತದಿಂದಲೇ ರಂಗನಾಥ ಸಂಪ್ರದಾಯವನ್ನು ಸಮಗ್ರವಾಗಿ ಕಟ್ಟಲು ಸಾಧ್ಯವಿದೆ ಎಂಬುದು ಅಧ್ಯಯನದಿಂದ ಸ್ಪಷ್ಟಗೊಂಡಿದೆ.

ರಂಗನಾಥನು ಎಲ್ಲ ವರ್ಗದ ಜನರಿಗೂ, ಜನ ಸಮುದಾಯಗಳಿಗೂ ಆರಾಧ್ಯ ದೈವವಾಗಿದ್ದಾನೆ. ಇತನು ಮನೆದೈವ, ಕುಲದೈವ, ಇಷ್ಟ ದೈವವಾಗಿದ್ದಾನೆ. ಅಲ್ಲದೇ ಪವಾಡ ಪುರುಷನಾಗಿ ಮತ್ತು ಸಾಂಸ್ಕೃತಿಕ ನಾಯಕನಾಗಿ ನೆಲೆಗೊಂಡಿದ್ದಾನೆ. ಇತನಿಗೆ ಎಲ್ಲ ವರ್ಗದ ಜನರು ಅರ್ಚಕರಾಗಿದ್ದಾರೆ. ಅದರಲ್ಲೂ ತಳಸಮುದಾಯದವರ ರಕ್ಷಿಸುವ, ಕರುಣಿಸುವ ದೈವನಾಗಿ ನೆಲೆಗೊಂಡಿದ್ದಾನೆ. ಮುಖ್ಯವಾಗಿ ರಂಗನಾಥ ಸಂಪ್ರದಾಯದಲ್ಲಿ ಉಚ್ಚ ವರ್ಗದ ಬ್ರಾಹ್ಮಣರಿಂದ ಪೂಜಾಕ್ರಿಯೆ ಜೊತೆಗೆ ತಳಸಮುದಾಯದ ಹೊಲೆ ಮಾದಿಗರಿಗೂ ಸಮಾನ ಸ್ಥಾನಮಾನ ದೊರೆತಿರುವುದು ಕರ್ನಾಟಕದಲ್ಲಿ ಕಂಡುಬಂದಿದೆ.

ರಂಗನಾಥನ ಸಂಪ್ರದಾಯದಲ್ಲಿ ದಾಸಯ್ಯನು ಪ್ರಮುಖ ಪಾತ್ರ ವಹಿಸಿರುವುದು ಕಂಡುಬರುತ್ತದೆ. ಮೂಲದಲ್ಲಿ ಇತನು ರಂಗನಾಥ ದೈವದ ಆರಾಧಕನಾಗಿದ್ದು, ಶ್ರೀವೈಷ್ಣವ ಧರ್ಮದ ದೀಕ್ಷೆಯಿಂದ ದಾಸಯ್ಯನಾಗಿ ಶಂಖ, ಚಕ್ರ, ಜಾಗಟೆ, ಭವನಾಸಿ, ನಾಮ ಹೊಂದಿರುವುದು ಕಂಡುಬರುತ್ತದೆ. ಇದು ಸ್ಪಷ್ಟವಾಗಿ ಶ್ರೀವೈಷ್ಣವಧರ್ಮ ತನ್ನ ಪ್ರಭಾವ ಬೀರಿ ಒಳಗುಮಾಡಿಕೊಂಡು, ತನ್ನ ಮತವನ್ನು ಸ್ಥಾಪಿಸಿರುವುದು ಕಂಡುಬರುತ್ತದೆ.

ಶೈವ ಮೂಲದಿಂದ ಬಂದ ಇತರ ಮತ ಪಂಥಗಳು ಬಹುಶಃ ವೈಷ್ಣವ ಧರ್ಮದಲ್ಲಿ ಸ್ಪರ್ಧೆ ಏರ್ಪಡಿಸಿದಂತೆ ಗೋಚರವಾಗುತ್ತದೆ. ಹೀಗಾಗಿ ಶೈವ ಧರ್ಮದ ಮತ ಪಂಥಗಳ ಜೊತೆ ವೈಷ್ಣವ ಧರ್ಮ ರಂಗನಾಥ ಮತ್ತು ತಿರುಪತಿ ತಿಮ್ಮಪ್ಪ ಎಂಬ ಪಂಥಗಳನ್ನು ಹುಟ್ಟು ಹಾಕಿರುವ ಸಾಧ್ಯತೆಯನ್ನು ಅಧ್ಯಯನವು ತಿಳಿಸುತ್ತದೆ.

ಅನುಬಂಧಗಳು

**ದೇವಾಲಯಗಳ ಪಟ್ಟಿ**

**ಗ್ರಂಥಸೂಚಿ**

**ಪದಕೋಶ**

**ವಕ್ತ್ರಗಳ ಪಟ್ಟಿ**

**ನಕ್ಷೆಗಳು**

**ಛಾಯಾಚಿತ್ರಗಳು**

# ಕರ್ನಾಟಕದ ೨೦ ಜಿಲ್ಲೆಗಳಲ್ಲಿರುವ ರಂಗನಾಥ ದೇವಾಲಯಗಳು

| ಕ್ರಸಂ. | ಜಿಲ್ಲೆ | ತಾಲೂಕು | ಊರು | ಸ್ಮಾರಕದ ಹೆಸರು | ಮೂರ್ತಿಶಿಲ್ಪ | ತಳವಿನ್ಯಾಸ |
|---|---|---|---|---|---|---|
| ೦೧ | ಹಾವೇರಿ | ಹಿರೇಕೆರೂರು | ಚನ್ನಹಳ್ಳಿ | ಶ್ರೀ ರಂಗನಾಥ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ನವರಂಗ |
| | | | ಕಳಗೊಂಡ | ಶ್ರೀ ರಂಗನಾಥ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | | ಹಳ್ಳೂರ | ಶ್ರೀ ರಂಗನಾಥ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ನವರಂಗ, ತೆರೆದ ಮುಖಮಂಟಪ |
| | | ಹಾನಗಲ್ಲ | ಕೂಸನೂರು | ಶ್ರೀ ರಂಗನಾಥೇಶ್ವರ ದೇವಸ್ಥಾನ | ಸ್ಥಾನಕ ವಿಷ್ಣು, ಶಿವಲಿಂಗ (ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಪದ್ಮ, ಕೆಳ ಎಡಗೈಯಲ್ಲಿ ಗದೆ) (ವಾಸುದೇವ) | ಗರ್ಭಗೃಹ, ನವರಂಗ |
| | | ಸವಣೂರು | ಸಿದ್ಧಾಪುರ | ಶ್ರೀ ರಂಗನಾಥ ದೇವಸ್ಥಾನ | ಸ್ಥಾನಕ ವಿಷ್ಣು, (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಗದೆ, ಕೆಳ ಎಡಗೈಯಲ್ಲಿ ಕಟಿ ಹಸ್ತ, ಪ್ರಭಾವಳಿಯಲ್ಲಿ ದಶಾವತಾರ) | ಗರ್ಭಗೃಹ, ಅಂತರಾಳ, ಮುಖಮಂಟಪ |

| | | | | | |
|---|---|---|---|---|---|
| | ರಾಣೆಬೆನ್ನೂರು | ತಿರುಮಲೆದೇವರಕೊಪ್ಪ | ಶ್ರೀ ರಂಗನಾಥ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ನವರಂಗ, ತೆರೆದ ಮುಖಮಂಟಪ, ದೇವಾಲಯದ ಸುತ್ತಲೂ ಪ್ರಾಕಾರವಿದೆ. |
| | | ಕೋಣನತಲೆ | ಶ್ರೀ ರಂಗನಾಥ ದೇವಸ್ಥಾನ | ಸ್ಥಾನಕ ವಿಷ್ಣು, (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ |
| | ಶಿಗ್ಗಾಂವಿ | ಬಂಕಾಪುರ | ಶ್ರೀ ರಂಗನಾಥ ದೇವಸ್ಥಾನ | ಭಗ್ನಗೊಂಡಿವೆ | ----- |
| | | ಬಾಡ | ಶ್ರೀ ರಂಗನಾಥ ದೇವಸ್ಥಾನ | ಭಗ್ನಗೊಂಡಿವೆ | ----- |
| ೦೨ ಚಿತ್ರದುರ್ಗ | ಚಳ್ಳಕೆರೆ | ಜೋಗಿಹಟ್ಟಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಬಿದರಿನ ಬುಟ್ಟಿಯಲ್ಲಿ ವಿಷ್ಣುವಿನ ವಿಗ್ರಹ ಇಟ್ಟು ಕೆಂಪು ಬಟ್ಟೆಯಿಂದ ಕಟ್ಟಿರುವ ಬುಟ್ಟಿ | ಗರ್ಭಗೃಹ, ತೆರೆದ ಮುಖಮಂಟಪ |
| | | ಗೌಡಗೆರೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಬಿದರಿನ ಬುಟ್ಟಿಯಲ್ಲಿ ವಿಷ್ಣುವಿನ ವಿಗ್ರಹ ಇಟ್ಟು ಕೆಂಪು ಬಟ್ಟೆಯಿಂದ ಕಟ್ಟಿರುವ ಬುಟ್ಟಿ | ಗರ್ಭಗೃಹ, ಸಭಾಮಂಟಪ |
| | | ನಾಯಕನಹಟ್ಟಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ವಿಗ್ರಹವಿಲ್ಲ. ಗರ್ಭಗೃಹದಲ್ಲಿ ಆಂಜನೇಯ ಶಿಲ್ಪ | ಗರ್ಭಗೃಹ, ಸಭಾಮಂಟಪ |
| | | ದುರ್ಗಾವರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ವಿಗ್ರಹವಿಲ್ಲ. ಗುಂಡನೆಯ ತಗ್ಗು ಹಿತ್ತಾಳೆಯ ಉತ್ಸವ ಮೂರ್ತಿ | ಗರ್ಭಗೃಹ, ಸಭಾಮಂಟಪ |
| | | ಗೋಪನಹಳ್ಳಿ | ಶ್ರೀ ಲಕ್ಷ್ಮೀ ರಂಗನಾಥಸ್ವಾಮಿ ದೇವಸ್ಥಾನ ದೇವಸ್ಥಾನ | ಶ್ರೀ ಭೂದೇವಿ ಸಮೇತ ಸ್ಥಾನಕ ವಿಷ್ಣು (ಚತುರ್ಭುಜ ವಿಷ್ಣು. ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಸಭಾಮಂಟಪ |

| | | | | | |
|---|---|---|---|---|---|
| | | ಬೆಳಗೆರೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಪದ್ಮ, ಕೆಳ ಎಡಗೈಯಲ್ಲಿ ಗದೆ) (ವಾಸುದೇವ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | ಹಿರಿಯೂರು | ಕಳವಿಬಾಗಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ೧. ಉದ್ಭವ ಮೂರ್ತಿ (ಹುಟ್ಟು ಕಲ್ಲು)<br>೨. ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | ಅಂಬಲಗೆರೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಗದೆ, ಕೆಳ ಎಡಗೈಯಲ್ಲಿ ಅಭಯ) | ಗರ್ಭಗೃಹ, ಅಂತರಾಳ, ನವರಂಗ, ತೆರೆದ ಮುಖಮಂಟಪ, ಪ್ರಾಕಾರವಿದೆ. |
| | | ಧರ್ಮಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | ಅಬ್ಬಿನಹೊಳೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಬಂಡೆ ಕಲ್ಲು) | ಗರ್ಭಗೃಹ, ಅಂತರಾಳ, ಸಭಾಮಂಟಪ, ತೆರೆದಮುಖಮಂಟಪ |
| | | ಗವಿರಂನಾಥಪುರ ಅಥವಾ ರಂಗನಾಥಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ತುಳಸಿ ಬೃಂದಾವನ | ಗರ್ಭಗೃಹ, ನವರಂಗ |

| | | | | | |
|---|---|---|---|---|---|
| | | ಬಬ್ಬೂರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಿಲ್ಲು, ಕೆಳ ಎಡಗೈಯಲ್ಲಿ ಬಾಣ) | ಗರ್ಭಗೃಹ, ಸಭಾಮಂಟಪ, ಮುಖಮಂಟಪ |
| | | ಮರಡಿಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ವಿಗ್ರಹವಿಲ್ಲ (ನೂತನ ಶಿಲಾಯುಗ ಆಯುಧ) | ಗರ್ಭಗೃಹ |
| | | ಮಲ್ಲಪ್ಪನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಬೃಂದಾವನ | ಗರ್ಭಗೃಹ, ತೆರೆದ ಮುಖಮಂಟಪ |
| | | ಕಂಬದಹಳ್ಳಿ (ಅಮ್ಮನಹಟ್ಟಿ) | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | ಗರ್ಭಗೃಹ |
| | | ಹಾರಣಕಣಿವೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | ಗರ್ಭಗೃಹ, ಅಂತರಾಳ, ತೆರೆದ ಮುಖಮಂಟಪ, ದೇವಾಲಯ ಸುತ್ತಲೂ ಪ್ರಾಕಾರವಿದೆ |
| | | ಆದಿವಾಲ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ತೆರೆದ ಮುಖಮಂಟಪ |
| | ಹೊಸದುರ್ಗ | ಅಂಚಿಬಾರಿಹಟ್ಟಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಬಿದರಿನ ಬುಟ್ಟಿಯಲ್ಲಿ ವಿಷ್ಣುವಿನ ವಿಗ್ರಹ ಇಟ್ಟು ಕೆಂಪು ಬಟ್ಟೆಯಿಂದ ಕಟ್ಟಿರುವ ಬುಟ್ಟಿ | ಗರ್ಭಗೃಹ, ತೆರೆದ ಮುಖಮಂಟಪ |

| | | | | | |
|---|---|---|---|---|---|
| | | ಮಾರಬಗಟ್ಟ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಸಭಾಮಂಟಪ |
| | | ಕಬ್ಬಳ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಸಭಾ ಮಂಟಪ ಮತ್ತು ತೆರೆದ ಮುಖಮಂಟಪ |
| | | ಗವಿರಂಗಾಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಬೆಟ್ಟ, ಗರ್ಭಗೃಹ, ಅಂತರಾಳ |
| | | ಎಸ್. ನೆರಲಕೆರೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) ಶ್ರೀ ಭೂದೇವಿ | ಗರ್ಭಗೃಹ, ಅಂತರಾಳ, ನವರಂಗ, ತೆರಎದ ಮುಖಮಂಟಪ, ಪ್ರಾಕಾರ |
| | | ಶ್ರೀರಂಗಾಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ | ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ, |
| | | ದುಗ್ಗಾವರ | ಕಲ್ಲುಕೋಟೆ ರಂಗನಾಥ ದೇವಸ್ಥಾನ | ಉದ್ಭವ | ಗರ್ಭಗೃಹ, ಅಂತರಾಳ, ಮುಖಮಂಟಪ, |
| | | ಮತ್ತೋಡು | ಬಾಣದ ರಂಗದೇವ | ಸ್ಥಾನಕ( ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ , ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಬಿಲ್ಲು, ಕೆಳ ಎಡಗೈಯಲ್ಲಿ ಬಾಣ) | ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ, |
| | | ಬುರಡೆಕಟ್ಟೆ | ರಂಗನಾಥ ದೇವಾಲಯ | ಉದ್ಭವ | ಗರ್ಭಗೃಹ, ಮುಖಮಂಟಪ, |
| | ಹೊಳಲಕೆರೆ | ಲೊಕದೊಳಲು | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ |

| | | | | |
|---|---|---|---|---|
| | ಮಲ್ಲಾಡಿಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | ಆರ್. ನೂಲೆನೂರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉಯ್ಯಾಲೆಯಲ್ಲಿ ಶ್ರೀ ಭೂದೇವಿ ಸಮೇತ ಉತ್ಸವ ಮೂರ್ತಿ | ಗರ್ಭಗೃಹ, ಮುಖಮಂಟಪ |
| | ರಂಗಾಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | ತುಪ್ಪದಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ |
| | ಸಿಂಗೇನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಕೋಟೆಯೊಳಗಿದೆ. ಗರ್ಭಗೃಹ, ಮುಖಮಂಟಪ |
| | ಗೀಲಕೇನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು, ಉದ್ಭವ ಮೂರ್ತಿ (ಹುಟ್ಟು ಕಲ್ಲು) (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | ಗರ್ಭಗೃಹ, ಅಂತರಾಳ, ಸಭಾ ಮಂಟಪ, ತೆರೆದ ಮುಖಮಂಟಪ |
| | ಶಿವಗಂಗಾ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ, ಪ್ರಾಕಾರ |
| | ಹೊರಕೆರೆದೇವರಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಅರ್ಧಮಂಟಪ,ಸಭಾಮಂಟಪ, ತೆರೆದ ಮುಖಮಂಟಪ, ಪ್ರಾಕಾರ |
| | ಬಿದ್ದಕಲ್ಲು ರಂಗಪ್ಪ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ತಂಭ | ---- |

| | | | | | | |
|---|---|---|---|---|---|---|
| | | | ಮಾಳೇನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ಮೂರ್ತಿ (ಹುಟ್ಟ ಕಲ್ಲು) ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಕಟಿಹಸ್ತ) | ಗರ್ಭಗೃಹ, ಅಂತರಾಳ, ಸಭಾಮಂಟಪ |
| | | | ಕರೆಕಲ್ಲು | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ಮೂರ್ತಿ (ಹುಟ್ಟ ಕಲ್ಲು) ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಕಟಿಹಸ್ತ) | ಗರ್ಭಗೃಹ, ಮುಖಮಂಟಪ |
| | | ಚಿತ್ರದುರ್ಗ | ಪಂಡರಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಕಟಿಹಸ್ತ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | | ತಮಟಗಲ್ಲು | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | ಮೊಳಕಾಲ್ಮೂರು | ಕಂಪಳದೇವರಹಟ್ಟಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಪೆಟ್ಟಿಗೆ ದೇವರು | ಗರ್ಭಗೃಹ, ಮುಖಮಂಟಪ |
| ೩ | ದಾವಣಗೆರೆ | ಚನ್ನಗಿರಿ | ದೇವರಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ನವರಂಗ, ಸಭಾಮಂಟಪ, ಮುಖಮಂಟಪ, ಪ್ರಾಕಾರ |
| | | | ಮಾದಾಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಹುಟ್ಟ ಕಲ್ಲು) ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು | ಗರ್ಭಗೃಹ, ಮುಖಮಂಟಪ |

| | | | | |
|---|---|---|---|---|
| | | | ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | |
| | ಹೊದಿಗೆರೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಬಂಡೆ ಹಾಸು ಕಲ್ಲು, ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | ಚನ್ನಗಿರಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ನವರಂಗ, ಮುಖಮಂಟಪ |
| | ದೋಣಿಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | ಮೂದಿಗೆರೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | ಇಟ್ಟಿಗಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ದನೆಯ ಕಂಬ (ಸ್ತಂಭ) | ಗರ್ಭಗೃಹ, ಮುಖಮಂಟಪ |
| | ಬುಳಸಾಗರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ | ಗರ್ಭಗೃಹ, ಮುಖಮಂಟಪ |
| | ಸೋಮಶೆಟ್ಟಿಹಳ್ಳಿ ಸಿದ್ಧಾಪುರ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ |

| | | | | | |
|---|---|---|---|---|---|
| | | ಎನ್. ಗಾಣದಕಟ್ಟೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | | ನಿಲೊಗಲ್ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | ದಾಗಿನಕಟ್ಟೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ದನೆಯ ಕಂಭ (ಸ್ತಂಭ) | ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ |
| | | ಮಾರಬನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | ಜಗಳೂರು | ಕೊಣಚಗಲ್ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಸಭಾಮಂಟಪ, ಮುಖಮಂಟಪ |
| | | ತಾರೇಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | ದಾವಣಗೆರೆ | ಹಂಪನೂರು | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಅಂತರಾಳ, ಸಭಾಮಂಟಪ, ತೆರೆದ ಮುಖಮಂಟಪ, ಪ್ರಾಕಾರ |
| | | ನೀರ್ಥಡಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ | ಗರ್ಭಗೃಹ, ಅಂತರಾಳ, ನವರಂಗ, ತೆರೆದ ಮುಖಮಂಟಪ |
| | | ಶಂಕರನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |

| | | | | | |
|---|---|---|---|---|---|
| | ಹರಿಹರ | ಜಿಗಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಪದ್ಮ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | ಕೋಮಾರನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | ಹೊನ್ನಾಳಿ | ಯರೇಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | | ಹಳೆದೇವರ ಹೊನ್ನಾಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಕಮಲ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | ಮಾಧನಬಾವಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಗದೆ, ಕೆಳ ಎಡಗೈಯಲ್ಲಿ ಕಟಿಹಸ್ತ) | ಗರ್ಭಗೃಹ, ನವರಂಗ |
| | | ಅರೇಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಮುಖಮಂಟಪ |
| | | ದಾಸರಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಮುಖಮಂಟಪ |

| | | | | | | |
|---|---|---|---|---|---|---|
| | | | ಸಿ. ಕಡದಕಟ್ಟೆ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ೧. ಉದ್ಭವ ಮೂರ್ತಿ (ಹುಟ್ಟು ಕಲ್ಲು)<br>೨. ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಮುಖಮಂಟಪ |
| | | | ಚೀಲೂರು | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಮುಖಮಂಟಪ, ಕಂಗೂರ |
| | | | ಬೆಳಗುತ್ತಿ | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ |
| ೦೪ | ಶಿವಮೊಗ್ಗ | ಶಿವಮೊಗ್ಗ | ಆಯನೂರು | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ |
| | | | ಕುಂಸಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಗರುಡ ಮೇಲೆ ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | ಗರ್ಭಗೃಹ |

| | | | | |
|---|---|---|---|---|
| | ಕೋಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಮುಖಮಂಟಪ |
| | ಶೆಡ್ಡಿಕೊಪ್ಪ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | ದೊಡ್ಡಮಟ್ಟಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ವರದ) | ಗರ್ಭಗೃಹ, ಮುಖಮಂಟಪ |
| | ಪಿಳ್ಳಂಗೆರೆ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಕಟಿಹಸ್ತ) | ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ, ಪ್ರಾಕಾರ |
| | ಗೋಪಾಳ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | ಹೊಳೆಹಟ್ಟಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು | ಗರ್ಭಗೃಹ, ಅಂತರಾಳ, ಮುಖಮಂಟಪ |

| | | | | | | |
|---|---|---|---|---|---|---|
| | | ಭದ್ರಾವತಿ | ಗುಡಮಗಟ್ಟಾ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | | | ಕರೇಬಿರನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | | | ಅರ್ಬಿಲಚ್ಚಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | | ಮೂಡಲವಿಠಲಾಪುರ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ದ್ವಿಭುಜ. ಮೇಲು ಬಲಗೈಯಲ್ಲಿ ಬಾಣ, ಮೇಲು ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ |
| | | | ದಾನವಾಡಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | | ಕಣಕಟ್ಟೆ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ದ್ವಿಭುಜ ಎರಡು ಕೈಗಳು ಕಟಿಹಸ್ತ) | ಗರ್ಭಗೃಹ, ಮುಖಮಂಟಪ |
| | | | ಸೈದರ ಕಲ್ಲಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ೧. ಉದ್ಭವ ಮೂರ್ತಿ (ಹುಟ್ಟು ಬಂಡೆಕಲ್ಲು)<br>೨. ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ | ಗರ್ಭಗೃಹ, ಅಂತರಾಳ, ಮುಖಮಂಟಪ |

| | | | | | | |
|---|---|---|---|---|---|---|
| | | | | | ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | |
| | | | ಅಗಸನಗಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ ಮೂರ್ತಿ (ಹುಟ್ಟು ಕಲ್ಲು) | ಗರ್ಭಗೃಹ, ಮುಖಮಂಟಪ |
| | | | ದೇವರಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಕಟಿಹಸ್ತ) | ಗರ್ಭಗೃಹ, ಮುಖಮಂಟಪ |
| | | ಸಾಗರ | ಆನಂದಪುರ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಮುಖಮಂಟಪ, ಪ್ರಾಕಾರ |
| | | ತೀರ್ಥಹಳ್ಳಿ | ಕೋಣಂದೂರು | ಶ್ರೀ ರಂಗನಾಥಸ್ವಾಮಿ ದೇವಸ್ಥಾನ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| ೦೫ | ಚಿಕ್ಕಮಗಳೂರು | ತರೀಕೆರೆ | ಗಿಜಕಟ್ಟೆ | ಶ್ರೀ ರಂಗನಾಥಸ್ವಾಮಿ ದೇವಾಲಯ | ಕೂರ್ಮಾವತಾರ | ಗರ್ಭಗೃಹ, ಮುಖಮಂಟಪ |
| | | | ಸಮತಾಳ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |

| | | | | |
|---|---|---|---|---|
| | ನಾಗೇನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ ಮೂರ್ತಿ (ಗುಂಡಕಲ್ಲು) | ಗರ್ಭಗೃಹ, ಮುಖಮಂಟಪ |
| | ಇಟ್ಟಗಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | ವುಡೇವು/ಮರೇಕಲ್ಲಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಕಟಿಹಸ್ತ) | ಗರ್ಭಗೃಹ, ಮುಖಮಂಟಪ |
| | ಚಕೋನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಕಮಲದ ಮೊಗ್ಗು) | ಗರ್ಭಗೃಹ, ಮುಖಮಂಟಪ |
| | ಕೊರಟಿಕೆರೆ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಎರಡು ಕೈಗಳು ಸಮಭಂಗಿಯಲ್ಲಿವೆ) | ಗರ್ಭಗೃಹ, ಅಂತರಾಳ, ಸಭಾಮಂಟಪ, ತೆರೆದ ಮುಖಮಂಟಪ, ಉತ್ಸವ ಮಂಟಪ |
| | ಅರೇಹಳ್ಳಿ/ಮುಂಡ್ರೆ | ಶ್ರೀ ರಂಗನಾಥಸ್ವಾಮಿ ದೇವಾಲಯ<br>ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು/ ಶಿವಲಿಂಗ-ನಂದಿ (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |

| | | | | | | |
|---|---|---|---|---|---|---|
| | | ಕಡೂರ | ಚಿಕ್ಕಬೆಳ್ಳೆಕೆರೆ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | | | ದೇವರಹೊಸಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಅಂತರಾಳ, ನವರಂಗ, ತೆರೆದ ಮುಖಮಂಟಪ |
| | | | ಸೋಮನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಸಭಾಮಂಟಪ, ತೆರೆದ ಮುಖಮಂಟಪ |
| | | | ಮಾಚಗೊಂಡನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | | | ಸಖರಾಯಪಟ್ಟಣ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಅಂತರಾಳ, ಮುಖಮಂಟಪ, ಪ್ರಾಕಾರ |

| | | | | | | |
|---|---|---|---|---|---|---|
| | | | ಎಸ್. ಬಿದರೆ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು/ಶಯನ ವಿಗ್ರಹ (ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ನವರಂಗ, ತೆರೆದ ಮುಖಮಂಟಪ, ಪ್ರಾಕಾರ |
| | | ಚಿಕ್ಕಮಗಳೂರು | ಈಶ್ವರಹಳ್ಳಿ/ಹಂಚಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು/(ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | | | ಕಳಸಾಪುರ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ ಮೂರ್ತಿ (ಗುಂಡಕಲ್ಲು) | ಗರ್ಭಗೃಹ, ಮುಖಮಂಟಪ |
| | | | ಗಾಳಿಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು, ಲಕ್ಷ್ಮೀ (ಚತುರ್ಭುಜ, ಮೇಲು ಬಲಗೈಯಲ್ಲಿ ಬಾಣ, ಮೇಲು ಎಡಗೈಯಲ್ಲಿ ಬಿಲ್ಲು, ಕೆಳ ಬಲಗೈಯಲ್ಲಿ ಚಕ್ರ, ಕೆಳ ಎಡಗೈಯಲ್ಲಿ ಶಂಖ) | ಗರ್ಭಗೃಹ, ಮುಖಮಂಟಪ |
| | | | ದೇವರಗೊಂಡನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ ಮೂರ್ತಿ (ಗುಂಡಕಲ್ಲು) | ಗರ್ಭಗೃಹ, ಮುಖಮಂಟಪ |
| | | | ಕಣಿವೇಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |

| | | | | | | |
|---|---|---|---|---|---|---|
| | | | ಲಕ್ಯಾ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ ಮೂರ್ತಿ (ಗುಂಡಕಲ್ಲು) | ಗರ್ಭಗೃಹ, ಮುಖಮಂಟಪ |
| | | | ಕವುತಾಳ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ ಹುಟ್ಟು ಬಂಡೆ ಹಾಸಿಗೆ | ಗರ್ಭಗೃಹ, ಮುಖಮಂಟಪ |
| | | | ಬಿಳಿಕಲ್ಲು | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು(ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಅಂತರಾಳ, ಮುಖಮಂಟಪ |
| | | | ಸತ್ತಿಗೆರೆ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು(ಚತುರ್ಭುಜ, ಮೇಲು ಬಲಗೈಯಲ್ಲಿ ಶಂಖ, ಮೇಲು ಎಡಗೈಯಲ್ಲಿ ಚಕ್ರ, ಕೆಳ ಬಲಗೈಯಲ್ಲಿ ಬಾಣ, ಕೆಳ ಎಡಗೈಯಲ್ಲಿ ಬಿಲ್ಲು) | ಗರ್ಭಗೃಹ, ಮುಖಮಂಟಪ |
| | | | ಬಸವನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ವರದ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| ೦೬ | ಹಾಸನ | ಹಾಸನ | ಎಸ್. ದ್ಯಾವಲಾಪುರ | ಶ್ರೀ ರಂಗನಾಥಸ್ವಾಮಿ ದೇವಾಲಯ | ಉದ್ಭವ | ಗರ್ಭಗೃಹ, ಮುಖಮಂಟಪ |
| | | | ಜಿ. ಮೈಲನಹಳ್ಳಿ | ಶ್ರೀ ರಂಗನಾಥಸ್ವಾಮಿ ದೇವಾಲಯ | ಸ್ಥಾನಕ ವಿಷ್ಣು (ಚತುರ್ಭುಜ, ಮೇಲು ಬಲಗೈಯಲ್ಲಿ ಚಕ್ರ, ಮೇಲು ಎಡಗೈಯಲ್ಲಿ ಶಂಖ, ಕೆಳ ಬಲಗೈಯಲ್ಲಿ ಅಭಯ, ಕೆಳ ಎಡಗೈಯಲ್ಲಿ ಗದೆ) | ಗರ್ಭಗೃಹ, ಮುಖಮಂಟಪ |
| | | | ಜಕ್ಕೇನಹಳ್ಳಿ | ಉದ್ಭವ ರಂಗನಾಥಸ್ವಾಮಿ ದೇವಾಲಯ | ಉದ್ಭವ ಹುಟ್ಟು ಗುಂಡಕಲ್ಲು | ಗರ್ಭಗೃಹ, ಮುಖಮಂಟಪ |

